# ಜಾಗರದ ಜ್ಯೋತಿ

ಡಾ. ಎಂ. ಪ್ರಭಾಕರ ಜೋಶಿ
ಅವರ ಕುರಿತ
ಪೂರ್ವ ಪ್ರಕಟಿತ ನುಡಿಮಾಲೆ

ಸಂಪಾದಕ : ನಾ. ಕಾರಂತ ಪೆರಾಜೆ

# ಜಾಗರದ ಜೋಶಿ

ಡಾ. ಎಂ. ಪ್ರಭಾಕರ ಜೋಶಿ
ಅವರ ಕುರಿತ
ಪೂರ್ವ ಪ್ರಕಟಿತ ನುಡಿಮಾಲೆ

ಸಂಪಾದಕ
ನಾ. ಕಾರಂತ ಪೆರಾಜೆ

ಆಕೃತಿಆಶಯ ಪಬ್ಲಿಕೇಷನ್ಸ್
ಮಂಗಳೂರು

**JAAGARADA JOSHI**

A collection of published articles and profiles on the leading Yakshagana performer, critic, researcher and author Dr. M. Prabhakara Joshi, Mangaluru


Edited by
**Na. Karantha Peraje**
Bhats Building, Yelmudi
Puttur - 574 201, D.K.
Tel. : 9448985794, 9448625794

Published by
**Aakrithi Aashaya Publications**
Light House Hill Road
Mangaluru - 575 001
Tel. : 0824 2443002
aakrithiaashayapublications@gmail.com

First Edition : 2017


© Concerned Authors


Size : Demy 1/8, paper used : 80 gsm ns maplitho
Pages : viii+130
Price : Rs. 180
Cover Design : **Kallur Nagesh**

Page Designed & Printed at
**Aakrithi Prints**
Light House Hill Road
Mangaluru - 575 001
Tel: 0824 2443002

# ಸಪ್ತತಿಯ ಉಪಾಯನ

ಓರ್ವ ವ್ಯಕ್ತಿಯ ಚಟುವಟಿಕೆಯನ್ನು ದೂರ ನೋಟದಿಂದ ನೋಡುತ್ತಾ ವ್ಯಕ್ತಿತ್ವವನ್ನು ನಿರ್ಧರಿಸುವುದು ಒಂದು. ಇಲ್ಲಿ ತಪ್ಪುವ ಸಾಧ್ಯತೆ ನಿಚ್ಚಳ. ಪೂರ್ವಾಗ್ರಹದ ಕರಾಮತ್ತೇ ಜಾಸ್ತಿ. ಇದು ಅಲ್ಪಾಯುಷಿ.

ಹತ್ತಿರದಲ್ಲಿದ್ದು ವ್ಯಕ್ತಿತ್ವವನ್ನು ನೋಡುತ್ತಾ, ಅನುಭವಿಸುತ್ತಾ ಹತ್ತಿರವಾಗುವುದು ಇನ್ನೊಂದು. ಇಲ್ಲಿ ಸು-ಮನಸ್ಸು, ದೌರ್ಬಲ್ಯಗಳನ್ನು ಒಪ್ಪಿಕೊಳ್ಳುತ್ತಾ ಸ್ನೇಹ ಗಟ್ಟಿಯಾಗುತ್ತದೆ. ವಿಶ್ವಾಸ ವೃದ್ಧಿಯಾಗುತ್ತದೆ. ಸ್ನೇಹದ ಅಡಿಗಟ್ಟು ಭದ್ರವಾಗುತ್ತದೆ. 'ಇವರು ಹಾಗಲ್ಲ' ಎನ್ನುವುದು ದೃಢವಾಗುತ್ತದೆ. ಆಗ ವ್ಯಕ್ತಿತ್ವದ ಗಾಢತೆ ಅರಿವಾಗುತ್ತದೆ.

ಡಾ. ಪ್ರಭಾಕರ ಜೋಶಿಯವರನ್ನು ನಾನು ಕಂಡ ಬಗೆ ಎರಡನೆಯದು. ನನಗೆ ಬಹುಕಾಲ ಅವರೊಬ್ಬ ಒಗಟು! ಯಾವ ಕೋನದಿಂದಲೂ ಒಗಟನ್ನು ಬಿಡಿಸಲಾಗಲಿಲ್ಲ. ಅವರು ನನ್ನವರಾಗಲಿಲ್ಲ! ರಂಗದಲ್ಲಿ ನೋಡುತ್ತಾ ಮಾತು ಕೇಳಿದೆ. ಬರಹಗಳನ್ನು ಓದುತ್ತಾ ಬೌದ್ಧಿಕತೆಯ ಆಳವನ್ನು ಅರಿತೆ. ಕೃತಿಗಳನ್ನು ಓದುತ್ತಾ ವಿಮರ್ಶೆಯ ವಿಸ್ತಾರವನ್ನು ಅರಿತೆ. ಆಗ ತಿಳಿಯಿತು, ಜೋಶಿಯವರ ವ್ಯಕ್ತಿತ್ವವೇ ಆಳ.

ಪತ್ರಿಕೆಯ ವ್ಯಕ್ತಿ ಪರಿಚಯವು ಕಾಡಿದ ಬರಹಗಳು. ಒಬ್ಬ ವ್ಯಕ್ತಿಯೊಳಗೆ ಇಳಿದ ರಂಗಾನುಭವಕ್ಕೆ ಸರಳವಾಗಿ ಮಾತು ಕೊಟ್ಟರು. ಆ ಮಾತು ಅಕ್ಷರಯಾನವಾಯಿತು. ಪರಿಚಯ ಲೇಖನಗಳಿಗೊಂದು ಮಾದರಿಯಾಯಿತು. ಅದನ್ನು ನೋಡುತ್ತಾ ಬೆಳೆದೆ. ಯಕ್ಷಗಾನದಲ್ಲಿ ಇಂದು ಏನಾದರೂ ಗೀಚುತ್ತಿದ್ದೇನೆಂದರೆ, ಜೋಶಿಯವರ ಬರಹಗಳು ಪ್ರೇರಣೆ, ಮಾದರಿ.

ದೂರದಲ್ಲಿ ನಿಂತು ಹಗುರ ಮಾತುಗಳ ಮೂಲಕ ತಮ್ಮನ್ನು ಉದ್ಘಾಟಿಸಿಕೊಳ್ಳುವ ಮುಖಗಳ ಪರಿಚಯ ನನಗಿನ್ನೂ ಮಾಸಿಲ್ಲ. ಜೋಶಿಯವರೊಂದಿಗೆ ಆತ್ಮೀಯತೆಯ ಎಳೆಗಳು ಸುತ್ತುತ್ತಾ ಹೋದಂತೆ 'ಇವರು ಹಾಗಲ್ಲ' ಎನ್ನುವುದು ಸ್ಪಷ್ಟವಾಯಿತು. ಆಪ್ತತೆ ಗಟ್ಟಿಯಾಗುವ ಸರಕು ಭದ್ರವಾಯಿತು. 'ದೂರ ನಿಂತು ದೂರುವ' ಮನಸ್ಸುಗಳು ಮತ್ತೆ ಹತ್ತಿರವಾಗಲೇ ಇಲ್ಲ! ಹತ್ತಿರವಾದರೂ ದೂರವೇ!

ಹೀಗೆ ಕಾಡಿದ, ಹತ್ತಿರವಾದ ಜೋಶಿಯವರ ಮನಃಸ್ಥಿತಿಯೊಂದಿಗೆ ನನ್ನ ಅಲ್ಪಮತಿಯು ಮಿಳಿತಗೊಂಡಿತು. ಪರಿಣಾಮ, 'ಜಾಗರದ ಜೋಶಿ'ಯ ಸಂಪಾದಕತ್ವ ಜೋಶಿಯವರಿಗಿದು ಸಪ್ತತಿಯ ಕಾಣ್ಕೆ.

ಹಿರಿ ವ್ಯಕ್ತಿತ್ವಕ್ಕೆ ಅಕ್ಷರದ ಮಂತ್ರಾಕ್ಷತೆ. ನನ್ನಲ್ಲಿ ಪ್ರಕಟಣೆಯ ಬದ್ಧತೆಗೆ ಜೋಶಿಯವರು ವಿಶ್ವಾಸವಿಟ್ಟಿದ್ದರು.

ಸಪ್ತತಿಯ ಖುಷಿಯ ದಾಖಲಾತಿಯು ಕೆಲವು ಪ್ರಕಟಣೆಗಳ ಮೂಲಕ ಅನಾವರಣಗೊಳ್ಳುತ್ತಿದೆ. ಅದರಲ್ಲಿ 'ಜಾಗರದ ಜೋಶಿ'ಯೂ ಒಂದು. ಪುಸ್ತಕದ ಹೂರಣಗಳನ್ನು ಸೂಚಿಸುತ್ತಾ ಬಂದರು. ಪುನರಾವರ್ತನೆ ಆಗದಂತೆ, ಉತ್ಪ್ರೇಕ್ಷೆ

ಅಧಿಕವಾಗದಂತೆ ಎಚ್ಚರ ವಹಿಸಿದ್ದೇನೆ. ಜೋಶಿಯವರ ಇಂಗಿತವಿದು.

**ಜೋಶಿಯವರ ಕುರಿತು ಕಾಲಕಾಲಕ್ಕೆ ಆತ್ಮೀಯರು ಬರೆದ ಬರಹ, ಇ-ಬರಹಗಳು, ಅವರ ಕೃತಿಯ ಮುನ್ನುಡಿಗಳು ಕೃತಿಯೊಳಗೆ ಸೇರಿವೆ. ಮುನ್ನುಡಿಗಳಲ್ಲಿ ಜೋಶಿಯವರ ಕುರಿತ ಪ್ರಸ್ತುತಿಗಳನ್ನಷ್ಟೇ ಆಯ್ದುಕೊಳ್ಳಲಾಗಿದೆ. ಸಹಜವಾಗಿ ಬರಬಹುದಾದ ಕೃತಿಗಳ ಪಟ್ಟಿ, ಪ್ರಶಸ್ತಿಗಳ ಉಲ್ಲೇಖಗಳನ್ನು ಕೆಲವು ಲೇಖನಗಳಿಂದ ಲೇಖಕರ ಕ್ಷಮೆಕೋರಿ ಕೈಬಿಟ್ಟಿದ್ದೇನೆ.**

ಕೆಲವೊಂದು ಬರಹಗಳು ಪ್ರಾಯಃ ಎರಡು ದಶಕಗಳ ಹಿಂದೆ ಬರೆಯಲ್ಪಟ್ಟವು. ಇವುಗಳನ್ನು ವರ್ತಮಾನದ ಕಣ್ಣಿಂದ ನೋಡಿದರೆ ಬೇರೆಯಾಗಿ ಕಾಣಬಹುದು. ಆದರೆ ಬರೆದ ಕಾಲಮಾನ, ಆಗಿನ ಯಕ್ಷಗಾನದ ಪರಿಸ್ಥಿತಿಗಳನ್ನು ಮನಸ್ಸಿಗೆ ತೆಗೆದುಕೊಂಡು ಓದಿದಾಗ ಬರಹಗಳು ಆಪ್ತವಾಗುತ್ತದೆ. ಒಂದರ್ಥದಲ್ಲಿ ಕಳೆದ ಕಾಲದ ಕಥನ.

ಒಂದು ಯಕ್ಷಗಾನ ಸಮ್ಮೇಳನದ ಅಧ್ಯಕ್ಷೀಯ ಭಾಷಣ ಇಲ್ಲಿದೆ. ಇದು ಜೋಶಿಯವರ ಸಮಗ್ರ ವಿಮರ್ಶಾ ದೃಷ್ಟಿಯ ಒಂದು ಪ್ರಾತಿನಿಧಿಕ, ಸೂತ್ರಪ್ರಾಯವಾಗಿ ಕಾಣುತ್ತದೆ. ಜತೆಗೆ ಉಳಿದ ಬರಹಗಳಿಗೆ ಅವರ ಚಿಂತನೆಯನ್ನು ಜೋಡಿಸಲು ಕೂಡ ಸಹಕಾರಿ.

ಜೋಶಿಯವರ ಮೊದಲ ಯಕ್ಷಗಾನ ವಿಮರ್ಶಾ ಸಂಕಲನ 'ಜಾಗರ' (1974). ಅಂದಿನಿಂದ ಇಂದಿನ ತನಕ ಯಕ್ಷಗಾನ ವಲಯದ ಓರ್ವ ಜಾಗೃತಿಕಾರನಾಗಿ ಅವರು ಕೆಲಸ ಮಾಡುತ್ತ ಬಂದಿದ್ದಾರೆ. ಜಾಗರ ಎಂದರೆ ತಾಳಮದ್ದಳೆ ಕೂಡ. ಅದಕ್ಕಾಗಿ ಈ 'ಜಾಗರದ ಜೋಶಿ' ಎಂಬ ಹೆಸರು. ಅವರ ಮೊದಲ ಕೃತಿಯನ್ನು ಓದಿದ್ದ ಹಿರಿಯ ಸಾಹಿತಿ ಡಾ. ಸಿ.ಪಿ.ಕೆ. ಅವರು ಹಲವು ವರ್ಷಗಳ ಬಳಿಕ ಭೇಟಿ ಆದಾಗ ಅವರನ್ನು 'ಜಾಗರದ ಜೋಶಿಯವರು' ಎಂದು ಸಂಬೋಧಿಸಿದರಂತೆ. ಇದನ್ನು ಕೇಳಿದ ಬಳಿಕ ನನ್ನ ಯೋಚನೆಗೆ ಹಿರಿಯರ ಸಮ್ಮತಿ ದೊರೆತಂತಾಯಿತು.

ಯಕ್ಷಗಾನ ವಿಮರ್ಶೆ, ಬರಹಗಳ ಅಕ್ಷರ ಯಾನದ ಲೋಕವನ್ನು ಸುಂದರಗೊಳಿಸಿದ ಡಾ.ಜೋಶಿಯವರಿಗಿದು ಎಪ್ಪತ್ತರ ಉಪಾಯನ. ಇದು ಅವರನ್ನು ಪ್ರೀತಿಸುವ ಎಲ್ಲರಿಗೂ ಖುಷಿ. ಕೃತಿಯ ಎಲ್ಲ ಲೇಖಕರಿಗೂ ಪ್ರಣಾಮಗಳು. ಮಂಗಳೂರಿನಲ್ಲಿ ಜರಗುತ್ತಿರುವ ಯಕ್ಷಾಂಗಣದ ತಾಳಮದ್ದಳೆ ಸಪ್ತಾಹದ 'ಜೋಶಿ ವಾಗರ್ಥ ಸರಣಿ' ಸಂದರ್ಭದಲ್ಲಿ ಇದು ಅರ್ಪಿತವಾಗುತ್ತಿದೆ. ಮುದ್ರಣ ವಿನ್ಯಾಸದ ವಿಖ್ಯಾತರೂ, ಜೋಶಿಯವರ ಆಪ್ತರೂ ಆದ ಮಂಗಳೂರಿನ ಆಕೃತಿ ಪ್ರಿಂಟ್ಸ್ ಇದರ ಕಲ್ಲೂರು ನಾಗೇಶ ಅವರು ಸಕಾಲಕ್ಕೆ ಮುದ್ರಿಸಿದ್ದಾರೆ. ಅವರಿಗೆ, ಅವರ ಬಳಗಕ್ಕೆ ಅಭಿನಂದನೆಗಳು.

ಈ ಉಪಾಯನದ ಅರ್ಪಣೆಗೆ ವೇದಿಕೆ ಒದಗಿಸಿದ ಮಿತ್ರ, ಕಲಾವಿದ, ಸಂಘಟಕ ಪ್ರಾ. ಭಾಸ್ಕರ ರೈ ಕುಕ್ಕುವಳ್ಳಿ ಅವರಿಗೆ, ಅವರ ಯಕ್ಷಾಂಗಣದ ಎಲ್ಲ ಮಿತ್ರರಿಗೆ ಕೃತಜ್ಞತಾಪೂರ್ವಕ ನಮನಗಳು.

ದೀಪಾವಳಿ 2017
18-10-2017

**ನಾ. ಕಾರಂತ ಪೆರಾಜೆ**
ಪುತ್ತೂರು

# ಪುಟನೋಟ

## ಅಕ್ಷರ ಉಪಾಯನ

**ಕೃತಿ ನೋಟ**



**ಮುನ್ನುಡಿಯ ಮುಡಿ**



**ಜೋಶಿ ಚಿಂತನೆ**

# “ಕಲಾವಿದ ಅರಿತವನಾದರೆ ಸಾಲದು, ನುರಿತವನೂ ಆಗಿರಬೇಕು” – ಡಾ. ಜೋಶಿ



ಸಂದರ್ಶನ :
**ಯೋಗೀಶ್ ರಾವ್ ಚಿಗುರುಪಾದೆ**

ಯಕ್ಷಗಾನ ಕ್ಷೇತ್ರದಲ್ಲಿ ವಿಮರ್ಶೆ ಎಂದಾಗ ಕಣ್ಣಿಗೆ ಕಾಣುವ ಮೊದಲ ವ್ಯಕ್ತಿ ಪ್ರಭಾಕರ ಜೋಶಿ. ಈ ಕ್ಷೇತ್ರದಲ್ಲಿ ಅವರ ಸಾಧನೆ, ಶೋಧನೆ ಅಮೋಘವಾದುದು. ದಿ.ಕೋಟ ಶಿವರಾಮ ಕಾರಂತರ ನಂತರದಲ್ಲಿ ಯಕ್ಷಗಾನ ಕ್ಷೇತ್ರದಲ್ಲಿ ಇವರಷ್ಟು ಆಳವಾಗಿ ಯಕ್ಷರಂಗದ ಒಳಹೊರಗನ್ನು ಬಲ್ಲ ವೈಜ್ಞಾನಿಕ ದೃಷ್ಟಿಕೋನದ ಸ್ಪಷ್ಟ, ನಿಖರ ವಿಚಾರ ಮಂಡಿಸುವ ವಿಮರ್ಶಕರೇ ಇಲ್ಲ ಎಂದರೂ ಅದು ಉತ್ಪ್ರೇಕ್ಷೆಯಾಗಲಾರದು.

ವೃತ್ತಿಯಲ್ಲಿ ಉಪನ್ಯಾಸಕರಾಗಿ, ಪ್ರವೃತ್ತಿಯಲ್ಲಿ–ಯಕ್ಷಗಾನ ಕಲಾವಿದರಾಗಿ, ಸಂಘಟಕರಾಗಿ, ಲೇಖಕರಾಗಿ ಹೀಗೆ ಹತ್ತು ಹಲವು ಮುಖಗಳ ಪ್ರತಿಭೆಯನ್ನು ಹೊಂದಿರುವ ಇವರ ಪ್ರತಿಭಾ ವಿಶ್ವರೂಪ ದರ್ಶನ ಅನಂತವಾದದು. ಒಬ್ಬ ಕಲಾವಿದನಾಗಿ ಕಲೆಯ ಒಳ ಹೊರಗನ್ನು ಅನುಭವಿಸಿ, ಪ್ರೀತಿಸಿ; ಅದೇ ಸಮಯದಲ್ಲಿ ವಿಮರ್ಶಕನಾಗಿ, ತಟಸ್ಥ ಮನೋಭಾವದಿಂದ ಯಾವುದೇ ಮಮಕಾರಕ್ಕೊಳಗಾದೆ ಬೆರಗಿನಿಂದ, ಕುತೂಹಲದಿಂದ ನೋಡಿ ಸಂಶೋಧಿಸಿ–ಚರ್ಚಿಸಿ ವಿಮರ್ಶಿಸುವ ಇವರ ಸ್ವಂತಿಕೆ ಯಾವುದೇ ಒಬ್ಬ ಕಲೆಯ ವಿಮರ್ಶಕನಿಗೆ ಅನುಕರಣೀಯ

ವಾದುದು, ಅನುಸರಣೀಯವಾದುದು.

'ಯಕ್ಷಗಾನ ಕೃಷ್ಣ ಸಂಧಾನ ಪ್ರಸಂಗ ಮತ್ತು ಪ್ರಯೋಗ' ಎಂಬ ಸಂಶೋಧನಾ ಮಹಾಪ್ರಬಂಧವನ್ನು ಬರೆದು ಪಿಹೆಚ್‌ಡಿ (ಡಾಕ್ಟರೇಟ್) ಪಡೆದು ಯಕ್ಷಗಾನವೊಂದು ಡಾಕ್ಟರೇಟ್‌ಗೂ ಸಾಧ್ಯವಿರುವ ಸತ್ವಯುತವಾದ ಕಲೆ ಎಂದು ತೋರಿಸಿಕೊಟ್ಟಿದ್ದಾರೆ. ಇವರ 'ಯಕ್ಷಗಾನ ಪದಕೋಶ'ವು ಕ್ಷೇತ್ರದ ಅಧ್ಯಯನಶೀಲರಿಗೆ ಒಂದು ಅಪೂರ್ವ ಕೈಪಿಡಿ. ಆಕರ ಗ್ರಂಥ.

ಅಲ್ಲದೆ ಜೋಶಿಯವರ ಹಲವು ವಿಮರ್ಶಾ ಕೃತಿಗಳು, ಸಹ ಲೇಖಕರೊಂದಿಗೆ ಬರೆದ ಗ್ರಂಥಗಳು, ಪತ್ರಿಕಾ ಬರಹಗಳು, ಸ್ಮರಣ ಸಂಚಿಕೆಗಳಿಗೆ ಬರೆದ ಲೇಖನಗಳು ಗಟ್ಟಿಯಾದ ಸಾಹಿತ್ಯಗಳು. ಯಕ್ಷಗಾನ ವಿಚಾರಗೋಷ್ಠಿ, ಕಮ್ಮಟಗಳಲ್ಲಿ ಉಪನ್ಯಾಸ, ನೂರಕ್ಕೂ ಮಿಕ್ಕಿ ಧ್ವನಿಸುರುಳಿಗಳಲ್ಲಿ ಅರ್ಥದಾರಿಯಾಗಿ ಮೆರೆದಿದ್ದಾರೆ. ದೂರದರ್ಶನ ಸಂದರ್ಶನ, ತಾಳಮದ್ದಳೆಗಳಲ್ಲೂ ಭಾಗವಹಿಸಿ ಟಿವಿ ಕಿರುತೆರೆಗೂ ತನ್ನ ಪ್ರತಿಭಾ ವ್ಯಾಪ್ತಿಯನ್ನು ವಿಸ್ತರಿಸಿಕೊಂಡಿರುವ ಇವರ ಕಾರ್ಯಕ್ಷೇತ್ರ ಅನನ್ಯವಾದುದು. ಇಂಗ್ಲಿಷ್, ಕನ್ನಡ, ಮರಾಠಿ, ಕೊಂಕಣಿ, ಹಿಂದಿ, ಸಂಸ್ಕೃತ, ತುಳು ಹೀಗೆ ಬಹುಭಾಷಾ ಪ್ರವೀಣ ರಾಗಿರುವ ಡಾ.ಜೋಶಿ ಮರಾಠಿ ಭಾಷೆಯನ್ನುಳಿದು ಇತರ ಬಾಷೆಗಳ ನೂರಾರು ತಾಳಮದ್ದಳೆಗಳಲ್ಲಿ ಭಾಗವಹಿಸಿದ್ದಾರೆ.

ಡಾ. ಜೋಶಿಯವರು ನಾರಾಯಣ ಜೋಶಿ ಮತ್ತು ಲಕ್ಷ್ಮೀ ಅಮ್ಮ ದಂಪತಿಗಳ ಮೂರನೇ ಮಗ. 1946ರಲ್ಲಿ 'ಮಾಳ' ಎಂಬಲ್ಲಿ ಜನಿಸಿದರು. ತಂದೆ ವಾಗ್ಮಿ, ಸಾಹಿತಿ, ಕನ್ನಡ-ಮರಾಠಿ-ಸಂಸ್ಕೃತ ಭಾಷಾ ವಿದ್ವಾಂಸ. ಚಿಕ್ಕಪ್ಪ ಲಕ್ಷ್ಮಣ ಜೋಶಿ. ಇವರು ಸ್ವಾತಂತ್ರ್ಯ ಹೋರಾಟಗಾರ. ಮಾತಾಮಹ ಅನಿರುದ್ಧ ಭಟ್ ತೆಂಕು-ಬಡಗುತಿಟ್ಟುಗಳಲ್ಲಿ ಉತ್ತಮ ಮದ್ದಳೆ ವಾದಕ ಎಂದು ಹೆಸರು ಮಾಡಿದವರು. ವಾಣಿಜ್ಯ ಶಾಸ್ತ್ರದಲ್ಲಿ 'ಎಂ.ಕಾಮ್' ಪೂರೈಸಿ, ಮಂಗಳೂರಿನ ಬೆಸೆಂಟ್ ಪ.ಪೂ. ಕಾಲೇಜಿನಲ್ಲಿ ಉಪನ್ಯಾಸಕ ರಾಗಿರುವ ಜೋಶಿಯವರು ಯಕ್ಷಗಾನದೆಡೆಗೆ ತನ್ನ ಒಲವನ್ನು ಚಿಕ್ಕಂದಿನಿಂದಲೇ ಬೆಳೆಸಿಕೊಂಡು ಬಂದವರು.

ಹುಟ್ಟೂರು ಮಾಳವು ತೆಂಕು ಮತ್ತು ಬಡಗು ತಿಟ್ಟುಗಳ ಸಂಗಮ ಸ್ಥಳ. ಎರಡೂ ತಿಟ್ಟುಗಳ ಯಕ್ಷಗಾನ ಚಟುವಟಿಕೆ ಅಲ್ಲಿ ನಿರಂತರವಾಗಿ ನಡೆಯುತ್ತಿತ್ತು. ಶಾಲಾ ಕಲಿಕೆ ಸಮಯದಲ್ಲಿ ಬಡಗು ತಿಟ್ಟಿನ ಯಕ್ಷಗಾನದಲ್ಲಿ ಒಂದೆರಡು ಪಾತ್ರಗಳನ್ನು ಹಿರಿಯರು ಹೇಳಿಕೊಟ್ಟಂತೆ ಮಾಡಿದರು. ಮುಂದೆ ಎಳವೆಯಲ್ಲೇ ಊರಿನ ಯಕ್ಷಗಾನ ಸಂಘದಲ್ಲಿ ತಾಳಮದ್ದಳೆ ಅರ್ಥದಾರಿಯಾಗಿ ರಂಗಪ್ರವೇಶ. ಅಲ್ಪಸ್ವಲ್ಪ ತೆಂಕುತಿಟ್ಟಿನ ನಾಟ್ಯವನ್ನು ಕಲಿತು ಯಕ್ಷಗಾನ ಬಯಲಾಟಗಳಲ್ಲಿ, ತಾಳಮದ್ದಳೆಗಳಲ್ಲಿ ಭಾಗಿ. ಮುಂದೆ ತೆಂಕುತಿಟ್ಟಿನ ಕೂಡ್ಲು, ಇರಾ ಮೇಳಗಳಲ್ಲಿ ಹತ್ತು-ಹದಿನೈದು ದಿನಗಳ ತಿರುಗಾಟವನ್ನು ನಡೆಸಿ ವೃತ್ತಿ ಮೇಳದ ರುಚಿಯನ್ನು ಅನುಭವಿಸಿದ್ದಾರೆ!

ಜೋಶಿಯವರು ಸಾಹಿತ್ಯದ ಕತೆ, ಕವನ, ನಾಟಕ (ಮಕ್ಕಳ ನಾಟಕ) ರಚನೆಯಲ್ಲೂ

ಕೈಯಾಡಿಸಿದ್ದು ಕೆಲವೊಂದು ಮರಾಠಿ ಕತೆಗಳನ್ನು ಕನ್ನಡಕ್ಕೆ ಅನುವಾದಿಸಿದ್ದಾರೆ. ಕ್ರಿಕೆಟ್, ಈಜುವಿನಂತಹ ಕ್ರೀಡೆಗಳಲ್ಲೂ ಅಭ್ಯಾಸ ಹೊಂದಿದವರು. ಮುಂದೆ ಯಕ್ಷಗಾನ ಕ್ಷೇತ್ರವೇ ತನ್ನನ್ನು ಅತಿಯಾಗಿ ಸೆಳೆಯಿತು ಎಂದು ತನ್ನ ಹಿನ್ನೆಲೆಯನ್ನು ಬಿಚ್ಚು ಮನಸ್ಸಿನಿಂದ ನುಡಿಯುತ್ತಾರೆ. ಯಾವುದೇ ಕ್ಷೇತ್ರದಲ್ಲಿ 'ಅರಿತವನಾದರೆ ಸಾಲದು ನುರಿತವನಾಗಬೇಕು' ಎನ್ನುವ ಸಿದ್ಧಾಂತಕ್ಕೆ ತಾನೇ ಅಂಟಿಕೊಂಡು ಯಕ್ಷಗಾನದೆಡೆಗೆ ತೊಡಗಿಸಿಕೊಂಡರು. "ಯಕ್ಷಗಾನವನ್ನು ನೋಡಿ, ಅಭಿನಯಿಸಿದರಷ್ಟೇ ಸಾಲದು, ಅದೊಂದು 'ಕಲೆ', ಅದಕ್ಕೊಂದು ಹೊಸ ದಿಕ್ಕು ಕೊಡಬೇಕೆಂಬ ನಿಲುವಿನಿಂದ ಯಕ್ಷಗಾನ ವಿಮರ್ಶಾ ಲೋಕಕ್ಕೆ ತೆರೆದುಕೊಂಡೆ. ಕಲೆಯ ಮೂಲದೆಡೆಗೆ ಸಂಶೋಧನೆಗಾಗಿ ಪಾದಾರ್ಪಣೆಗೈದೆ. ಮುಂದೆ ನವಭಾರತ, ಉದಯವಾಣಿ ಪತ್ರಿಕೆಗಳಲ್ಲಿ ಯಕ್ಷಗಾನ ವಿಮರ್ಶಾ ಬರಹಗಳನ್ನು ಬರೆದು ಮುಂದೆ ಆ ಕಡೆಗೆ ಆಳವಾಗಿ ತೊಡಗಿಸಿಕೊಂಡೆ' ಎನ್ನುತ್ತಾರೆ.

ಡಾ. ಜೋಶಿಯವರು ಯಕ್ಷಗಾನ ವಿಮರ್ಶೆ, ಸಂಶೋಧನಾ ಲೋಕದಲ್ಲಿ ಸಾಧಿಸಿದ ಸಾಧನೆಯು ಅಮೋಘವಾದುದು. ಅಮೂಲ್ಯವಾದುದು. ಅವರ ಸಾಧನೆಯನ್ನು ಗುರುತಿಸಿ ಅವರಿಗೆ ಒಲಿದ ಪಶಸ್ತಿ-ಬಹುಮಾನ ಗೌರವಗಳು ಅನೇಕ. ಮುಖ್ಯವಾಗಿ 'ಜಾಗರ' ಕೃತಿಗೆ 1984ರ ಕರ್ನಾಟಕ ಜಾನಪದ ಯಕ್ಷಗಾನ ಅಕಾಡೆಮಿ ಪ್ರಶಸ್ತಿ. 1994ರಲ್ಲಿ 'ಯಕ್ಷಗಾನ ಪದಕೋಶ' ಕೃತಿಗೆ ಅಕಾಡೆಮಿ ಪ್ರಶಸ್ತಿ ದೊರೆಯಿತು. ಅದೇ ವರ್ಷ ಪ್ರತಿಷ್ಠಿತ 'ಸಂದೇಶ' ಪ್ರಶಸ್ತಿ, ಕುಬೆವೂರು ಪುಟ್ಟಣ್ಣ ಶೆಟ್ಟಿ ಪ್ರಶಸ್ತಿ ಪ್ರಾಪ್ತ. ಉಡುಪಿಯ ಪ್ರಾದೇಶಿಕ ಜಾನಪದ ರಂಗ ಕಲೆಗಳ ಅಧ್ಯಯನ ಕೇಂದ್ರವು 'ಯಕ್ಷಗಾನ ಪದಕೋಶ' ರಚನೆಗೆ ಫೆಲೋಶಿಪ್ ನೀಡಿದ್ದರೆ, ಪ್ರಸ್ತುತ ಯಕ್ಷಗಾನದ ಬಗ್ಗೆ ಸಮಗ್ರ ಗ್ರಂಥ ರಚನೆಗೆ ಫೆಲೋಶಿಪ್ ನೀಡುತ್ತಿದೆ. ಪ್ರತಿಷ್ಠಿತ ರಾಷ್ಟ್ರಕವಿ ಗೋವಿಂದ ಪೈ ಸಂಶೋಧನಾ ಕೇಂದ್ರದ ಸಲಹಾ ಮಂಡಳಿ ಸದಸ್ಯನಾಗಿಯೂ ಆಯ್ಕೆಯಾಗಿದ್ದಾರೆ. ಇವೆಲ್ಲಾ ಜೋಶಿಯವರ ಪ್ರತಿಭೆಗೆ ಅರ್ಹತೆಗೆ ಸಂದ ಗೌರವಗಳು.

**ಯಕ್ಷಗಾನ ವಿಮರ್ಶಾ ಲೋಕದ ದಿಗ್ಗಜ ಡಾ. ಪ್ರಭಾಕರ ಜೋಶಿಯವರನ್ನು ಸಂದರ್ಶಿಸಿದಾಗ ನಡೆಸಿದ ಒಂದಷ್ಟು ಮಾತುಕತೆ ಇಲ್ಲಿದೆ:**

*** ನೀವು ಯಕ್ಷಗಾನ ವೇಷಗಾರಿಕೆಯಲ್ಲಿ ಯಾಕೆ ಹೆಚ್ಚಾಗಿ ಭಾಗವಹಿಸಲು ಇಚ್ಛಿಸುತ್ತಿಲ್ಲ?**

ನಾನು ಶಾಸ್ತ್ರೀಯವಾಗಿ ಹೆಚ್ಚು ನಾಟ್ಯ ಕಲಿತವನಲ್ಲ. ಅಲ್ಪಸ್ವಲ್ಪ ಕಾಲಾಡಿಸಬಲ್ಲೆ. ಅಲ್ಪಸ್ವಲ್ಪ ಹಿಮ್ಮೇಳವನ್ನೂ ತಿಳಿದಿದ್ದೇನೆ. ಕೂಡ್ಲು, ಇರಾ ಮೇಳಗಳಲ್ಲಿ ಅಲ್ಪ ಕಾಲದ ತಿರುಗಾಟವನ್ನು ಮಾಡಿದ್ದೇನೆ. ಇದೀಗ ನಾಲ್ಕು ವರುಷಗಳ ಹಿಂದೆಯೂ ವೇಷ ಮಾಡಿದ್ದಿದೆ. ನಾನು ಆ ಕ್ಷೇತ್ರದಲ್ಲಿ ನುರಿತವನಲ್ಲ. ಕಲಾವಿದನೊಬ್ಬ, 'ಅರಿತವನಾದರೆ ಸಾಲದು, ನುರಿತವನಾಗಿರಬೇಕು' ಎನ್ನುವವ ನಾನು. ಆದುದರಿಂದ ವೇಷಗಾರಿಕೆಗೆ ಹೆಚ್ಚು ಒತ್ತು ನೀಡಿಲ್ಲ. ಆ ಬಳಿಕ ಚಟುವಟಿಕೆಗಳ ವಿಸ್ತಾರವೂ ಬದಲಾಯಿತು (ನಟಶೇಖರ ಗುಬ್ಬಿ ವೀರಣ್ಣನವರ ಮಾತು).

*** ಯಕ್ಷಗಾನ ವಿಮರ್ಶೆ, ಸಂಶೋಧನೆ ಕಲಿಕಾಸಕ್ತರು ಹೊಂದಿರಬೇಕಾದ ಅರ್ಹತೆ, ನಡೆಸಬೇಕಾದ ಪೂರ್ವ ತಯಾರಿಗಳೇನು?**

ಆತ ಯಕ್ಷಗಾನ ನಡೆದು ಬಂದ ದಾರಿ, ತಿಟ್ಟುಗಳ ಬಗ್ಗೆ ತಿಳಿವು, ಭಾರತೀಯ ಕಲಾ ವಿಮರ್ಶೆ ನಡೆದು ಬಂದ ರೀತಿ, ಯಕ್ಷಗಾನ ಸೋದರ ಕಲೆಗಳಂತಿರುವ ಭಾರತೀಯ ಕಲೆಗಳಾದ ಕಥಕ್, ಕೂಚಿಪುಡಿ, ಕಥಕ್ಕಳಿ, ಭರತನಾಟ್ಯಗಳಂತಹ ರಂಗಪ್ರಕಾರಗಳ ಬಗ್ಗೆ ಪ್ರಾಥಮಿಕ ಜ್ಞಾನವನ್ನು ಹೊಂದಿರಬೇಕು. ರಂಗದ, ಕಲೆಯ, ಕಲಾವಿದರ ಹೊರ – ಒಳಗನ್ನು ಅರಿಯುವ ಜಾಣ್ಮೆ ಇರಬೇಕು. ಕನ್ನಡ ಸಾಹಿತ್ಯಗಳ ಜ್ಞಾನ ಹೊಂದಿರಬೇಕು. ಮಾತ್ರವಲ್ಲ, ಯಾವುದೇ ಮೋಹಕ್ಕೊಳಗಾಗದೆ ತಟಸ್ಥ ಮನೋಭಾವದಲ್ಲಿ ಕಲೆಯನ್ನು ನೋಡಿ, ಕಲೆಯ ದೀರ್ಘಕಾಲಿಕ ಬೆಳವಣಿಗೆಗೆ ಕಲಾ ಮೌಲ್ಯಕ್ಕೆ ಪೂರಕವಾಗಿ ಬರೆಯುವ, ನೋಡುವ ದೃಷ್ಟಿ ಬೆಳೆಸಿಕೊಳ್ಳಬೆಕು. ಎಲ್ಲಕ್ಕೂ ಮಿಕ್ಕಿ ಕಲೆಯನ್ನು ಪ್ರೀತಿಸುವವನಾಗಿರಬೇಕು.

*** ಕಲೆಯ ಆರೋಗ್ಯಪೂರ್ಣ ಬೆಳವಣಿಗೆಯಲ್ಲಿ ವಿಮರ್ಶಕ (ವಿಮರ್ಶೆ) ಮತ್ತು ಪತ್ರಿಕೆಗಳ ಪಾತ್ರ ಏನು?**

ವಿಮರ್ಶೆಯು ಕಲಾ ರಸಿಕನಿಗೂ, ಕಥೆಗೂ ಹೊಸ ಪ್ರಚೋದನೆಗಳನ್ನು ನೀಡಬೇಕು. ಆರೋಗ್ಯಕರ ದೃಷ್ಟಿಯನ್ನು, ವ್ಯವಸ್ಥಿತವಾದ ಅಭಿಪ್ರಾಯ ನಿಲುಮೆಗಳನ್ನು ಹೊಂದಲು ಸಹಾಯ ಮಾಡಬೇಕು. ವಿಮರ್ಶೆಯನ್ನು ಓದಿದ, ಕೇಳಿದ ಕಲಾವಿದನಾಗಲಿ – ಕಲಾ ರಸಿಕನಾಗಲಿ ಕಲೆಯನ್ನು ಹೆಚ್ಚು ಅರ್ಥ ಮಾಡಿಕೊಳ್ಳಲು ಸಾಧ್ಯವಾಗಬೇಕು. ಆ ಕುರಿತು ಯೋಚಿಸಲು ನೆರವಾಗಬೇಕು. 'ತಾನು ಕಲೆಯ ಬಗ್ಗೆ ಈಗ ಹೆಚ್ಚು ಅರ್ಥವತ್ತಾಗಿ ಯೋಚಿಸಲು ಸಾಧ್ಯವಾಗಿದೆ' ಎಂದು ವಿಮರ್ಶೆಯನ್ನು ಓದಿದವನಿಗೆ ಅನ್ನಿಸಬೇಕು. ಅಲ್ಲವಾದರೆ ಈ ವಿಮರ್ಶೆ ಹೇಳುತ್ತಿರುವ ವಿಚಾರ 'ಸೂಕ್ತವಾಗಿಲ್ಲ, ಅದು ಹಾಗಲ್ಲ, ಹೀಗೆ' ಎಂದು ಆತ ತನ್ನಲ್ಲೇ ಸಂವಾದಿಸಲು ಸಾಧ್ಯವಾಗಬೇಕು. ನಿಲುಮೆಗಳನ್ನು ತಳೆಯುವ ಅಥವಾ ನಿರಾಕರಿಸುವ, ಭಿನ್ನಾಭಿಪ್ರಾಯಗಳನ್ನು, ಚರ್ಚೆಯನ್ನು ಪ್ರಚೋದಿಸುವುದೂ ವಿಮರ್ಶೆಯ ಒಂದು ಕೆಲಸವೇ ಆಗಿದೆ.

ಪತ್ರಿಕೆಗಳು ಯಕ್ಷಗಾನದಂತಹ ಕಲೆಗಳಿಗೆ ಪ್ರೋತ್ಸಾಹಿಸುವುದು ಅಗತ್ಯ. ಆದರೆ ಆ ಪ್ರೋತ್ಸಾಹ ಧೋರಣಾತ್ಮಕವಾಗಿರಬೇಕು. ಕಲೆಯನ್ನು ಮೌಲ್ಯಮಾಪನ ಮಾಡುವಂತಹ ಬರವಣಿಗೆಗಳಿಗೆ ಆಸ್ಪದ ನೀಡಬೇಕು. ಲೇಖನಗಳನ್ನು ಆರಿಸುವಾಗ ಖಂಡನಾತ್ಮಕವಲ್ಲದ, ಸತ್ಯ ನಿಷ್ಠುರವಾದ ಲೇಖನಗಳಿಗೆ ಆಸ್ಪದ ನೀಡಬೇಕು. ಜನರಿಗೆ ಕಲೆಯ ಬಗ್ಗೆ ಶಿಕ್ಷಣ ಕೊಡುವ ರೀತಿಯಲ್ಲಿರಬೇಕು. ತಪ್ಪುಗಳನ್ನು ನಯವಾಗಿ ತಿಳಿಸಿ, ತಿದ್ದುವಂತಿರಬೇಕು. ಕಲೆಗೆ ತಿರುವನ್ನು ಕೊಡುವ ರೀತಿ ಇರಬೇಕು. ಆದರೂ ಅದು ದೀರ್ಘಾವಧಿ ಬೆಳವಣಿಗೆಗೆ ಪೂರಕವಾಗಿರಬೇಕು. ಯಾರೋ ಒಬ್ಬ ತನ್ನ ಆಪ್ತ ಕಲಾವಿದರ ಬಗ್ಗೆಯೋ, ಮೇಳದ ಬಗ್ಗೆಯೋ ಬರೆದಾಗ ಎಚ್ಚರದಿಂದ ವಿಮರ್ಶಿಸಿ ಪ್ರಕಟಿಸಬೇಕು. ಕಲಾವಿದರ ಯಾ

ಮೇಳವೊಂದನ್ನು ಟೀಕಿಸುವುದು ಯಾ ಹೊಗಳುವುದು ಪತ್ರಿಕೆಯ ಕೆಲಸವಲ್ಲ. ಎಲ್ಲಕ್ಕೂ ಹೆಚ್ಚು ಕಲಾ ಲೇಖನಗಳು ಕಲಾ ಪುರವಣಿಯ ಮೊದಲ ಪುಟದಲ್ಲೇ ಪ್ರಕಟವಾಗಿ ಜನರನ್ನಾಕರ್ಷಿಸಬೇಕು. ಸಿನೆಮಾದಂತಹ ಬರಹ, ಚಿತ್ರಗಳನ್ನು ಎಲ್ಲಿ ಪ್ರಕಟಿಸಿದರೂ ಜನ ಓದುತ್ತಾರೆ.

*** ಯಕ್ಷಗಾನ ವಿಮರ್ಶಾ ಲೇಖನ, ಗೋಷ್ಠಿ–ಕಮ್ಮಟಗಳಿಂದ ಕಲೆ / ಕಲಾವಿದರ ಮೇಲೆ ಏನಾದರೂ ಧನಾತ್ಮಕ ಪರಿಣಾಮವಾಗಿದೆಯೇ?**

ಸ್ವಲ್ಪ ಮಟ್ಟಿಗೆ ಆಗಿದೆ. ನಿರೀಕ್ಷಿತ ಮಟ್ಟದಲ್ಲಿ ಆಗುತ್ತಿಲ್ಲ ನಿಜ. ಕಲೆಯ ಬಗ್ಗೆ ಕಲಾವಿದರಿಗೆ, ಕಲಾರಸಿಕರಿಗೆ ಜಾಗೃತಿ ಮೂಡಿಸುವಲ್ಲಿ ನಿಧಾನವಾಗಿ ಪರಿಣಾಮ ಬೀರುತ್ತಿದೆ, ಬೀರಿದೆ.

*** ಗೋಷ್ಠಿ, ವಿಚಾರ ಕಮ್ಮಟಗಳಲ್ಲಿ ವೃತ್ತಿ ಕಲಾವಿದರನ್ನು ಕಡೆಗಣಿಸಲಾಗುತ್ತಿದೆ ಎಂಬ ಆರೋಪ ಇದೆಯಲ್ಲಾ? ಇಲ್ಲವಾದಲ್ಲಿ ಅವರ ಭಾಗವಹಿಸುವಿಕೆ ಕಡಿಮೆಯಾಗಲು ಕಾರಣವೇನು?**

ಉದ್ದೇಶಪೂರ್ವಕವಾಗಿ ಕಡೆಗಣಿಸಲಾಗಿಲ್ಲ ಎಂದೇ ನನ್ನ ಅಭಿಪಾಯ. ವೃತ್ತಿ ಕಲಾವಿದರು ತಮ್ಮ ಆರ್ಥಿಕ ಸಂಕಷ್ಟ, ಸಮಯದ ಹೊಂದಾಣಿಕೆಯ ಸಮಸ್ಯೆ, ಕಮ್ಮಟ–ಗೋಷ್ಠಿಗಳ ಅಗತ್ಯತೆಯ ಬಗ್ಗೆ ಅರಿವಿಲ್ಲದಿರುವುದರಿಂದ ಅವರ ಭಾಗವಹಿಸುವಿಕೆ ವಿರಳವಾಗಿರಲು ಕಾರಣವಿರಬಹುದು. ಆದರೆ ನನ್ನ ದೃಷ್ಟಿಯಲ್ಲಿ ವೃತ್ತಿ ಕಲಾವಿದರು ಹೆಚ್ಚೆಚ್ಚು ಭಾಗವಹಿಸುವಂತಾಗಬೇಕು. ಕಲೆಯ ಪರಿಷ್ಕಾರದಲ್ಲಿ ಅವರ ಪಾತ್ರ ಮಹತ್ವವಾದುದು. ಆ ದೃಷ್ಟಿಯಿಂದ ಅವರಿಗೆ ಕರೆ ಹೋಗದಿದ್ದಲ್ಲಿ ಖಂಡಿತಾ ತಪ್ಪು. ಕರೆ ಹೋಗಲೇ ಬೇಕು.

*** ತುಳು ಪ್ರದರ್ಶನಗಳಿಗೆ (ಆಟಗಳಿಗೆ) ಹೋಲಿಸಿದಾಗ, ತುಳು ತಾಳಮದ್ದಳೆಗಳು ಯಾಕೆ ಹೆಚ್ಚು ಪ್ರಚಾರಕ್ಕೆ ಬರುತ್ತಿಲ್ಲ?**

ಅಷ್ಟೇ. ತುಳು ತಾಳಮದ್ದಳೆ ಹೆಚ್ಚು ಹೆಚ್ಚು ಪ್ರಯೋಗ ಆಗಲೇ ಬೇಕು. ಆದರೆ ಪ್ರೌಢ ಚರ್ಚೆಗೆ ಬಳಸುವಂತಹ ಶ್ರೀಮಂತ ಭಾಷೆ ತುಳುವಲ್ಲ ಎನ್ನುವ ಅಭಿಪ್ರಾಯ ಸಂಪ್ರದಾಯಸ್ಥ ಕಲಾವಿದರಲ್ಲಿದೆ. ಆದರೆ ತುಳು ಸತ್ವಯುತವಾದ ಶ್ರೀಮಂತ ಭಾಷೆ ಎನ್ನುವುದರಲ್ಲಿ ಎರಡು ಮಾತಿಲ್ಲ. ಯಾವುದೇ ಭಾಷೆ ತನ್ನಿಂದ ತಾನೆ ಶ್ರೀಮಂತವಾಗಿರುವುದಿಲ್ಲ. ಅದರ ಯೋಗ್ಯ ಬಳಕೆಯಿಂದ ಶ್ರೀಮಂತಗೊಳಿಸಬೇಕು. ಆ ಶಕ್ತಿ, ಸತ್ವವು ತುಳುವಿಗಿದೆ. ತಾಳಮದ್ದಳೆ ಕ್ಷೇತ್ರದಲ್ಲಿ ಬಳಸಬಲ್ಲ ಕಲಾವಿದರೂ ಇದ್ದಾರೆ. ಕಾರ್ಯಕ್ರಮ ಯೋಜಿಸುವವರು ಆ ಕಡೆಗೆ ಗಮನ ಹರಿಸಬೇಕಷ್ಟೇ. ಇನ್ನೂ ಒಂದು ಕಾರಣವಿದೆ – ಯಕ್ಷಗಾನ ಆಟದ ಪ್ರೇಕ್ಷಕರೂ, ತಾಳಮದ್ದಳೆ ಪ್ರೇಕ್ಷಕರೂ ಒಂದೇ ಆಗಿರುವುದು

ತೀರಾ ಕಡಿಮೆ. ತಾಳಮದ್ದಳೆಯು ಸಾಮಾನ್ಯವಾಗಿ ಪೌರಾಣಿಕ ಪ್ರಸಂಗವೇ ಆಗಿರುವುದರಿಂದ ಅದಕ್ಕೆ ಕನ್ನಡ ಭಾಷೆಯೇ ಸೂಕ್ತ ಎನ್ನುವ ಗ್ರಹಿಕೆಯೂ ಕಾರಣ.

*** ಟಿಕೇಟ್ ಆಟಗಳಿಂದ ಯಕ್ಷಗಾನ ಕ್ಷೇತ್ರಕ್ಕೆ ಲಾಭವಾಗಿದೆಯೇ? ನಷ್ಟವಾಗಿದೆಯೇ?**

ಎರಡೂ ಆಗಿದೆ. ವ್ಯವಸಾಯದಿಂದಾಗಿ ಕಲೆ ಬೆಳೆಯುತ್ತಿದೆ. ಹಾಗೆಂದಲ್ಲಿ ಇಂದು ಬಯಲಾಟವೂ ಹಾಳಾಗಿಲ್ಲವೇ? ಇಡಗುಂಜಿ ಮೇಳ ವೃತ್ತಿರಂಗದಲ್ಲೂ ಹೇಗೆ ತನ್ನ ಕಲಾಮೌಲ್ಯ ಉಳಿಸಿಕೊಂಡಿದೆ ನೋಡಿ. ಜನಾಭಿಪ್ರಾಯವನ್ನೇ ದೂರುತ್ತಾ, ವ್ಯಾಪಾರಿ ರಾಜಕೀಯದಿಂದ ಕೀಳುಮಟ್ಟದ ಯಕ್ಷಗಾನೀಯವಲ್ಲದ ರೀತಿಯಲ್ಲಿ ಪ್ರದರ್ಶನ ನೀಡುವುದು ಕಲೆಗೆ ಒಳಿತಲ್ಲ. ವ್ಯವಸಾಯಿಕತೆ – ಕಲಾತ್ಮಕತೆ – ವ್ಯವಸ್ಥಾಪಕರ ಮಧ್ಯೆ ಒಂದು Balanceನ್ನು ಕಂಡುಕೊಂಡು ಕಲಾ ಮೌಲ್ಯವನ್ನು ಉಳಿಸುವ ಹೊಣೆಗಾರಿಕೆಯಿಂದ ಕಲಾವಿದರು, ಕಲಾಭಿಮಾನಿಗಳು, ವ್ಯವಸ್ಥಾಪಕರು ನಡೆದುಕೊಂಡಾಗ ಟಿಕೆಟ್ ಆಟದಲ್ಲೂ ಗುಣಮಟ್ಟವನ್ನು ಉಳಿಸಿಕೊಳ್ಳಬಹುದು.

*** ಇಂದು ಪೌರಾಣಿಕ ಪ್ರಸಂಗಗಳ ಬಗ್ಗೆ ಪ್ರೇಕ್ಷಕರ ಕಾಳಜಿ ಕಡಿಮೆಯಾಗಲು ಏನು ಕಾರಣವಿರಬಹುದು?**

ಪ್ರಸಂಗವು ಪೌರಾಣಿಕವೋ, ಸಾಮಾಜಿಕವೋ, ಕಾಲ್ಪನಿಕವೋ ಎಂದು ತಾಳೆ ಹಾಕುವ ಹಾಗಿಲ್ಲ. ಒಟ್ಟು ಪ್ರದರ್ಶನ ಯಕ್ಷಗಾನೋಚಿತವಾಗಿರಬೇಕು ಎನ್ನುವುದೇ ಮುಖ್ಯ. ಮೇಳಗಳ ಪ್ರದರ್ಶನಗಳ ವಿಪುಲತೆ, ಜನ ಬಾಹುಳ್ಯ ಮತ್ತು ಮಿತ ಸಂಖ್ಯೆಯ ಕಲಾವಿದರಿಂದಾಗಿ ಉತ್ತಮ ಪ್ರದರ್ಶನ ಪ್ರಯೋಗಗೊಳ್ಳುತ್ತಿಲ್ಲ. ಇಂದು ಏಳೋ ಎಂಟೋ ಸ್ಥಾನದಲ್ಲಿರಬೇಕಾದ ಕಲಾವಿದರು ಕೆಲವೊಂದು ಮೇಳಗಳಲ್ಲಿ ಅಗ್ರಪಂಕ್ತಿಯಲ್ಲಿ ಕಾಣಿಸಿಕೊಳ್ಳುತ್ತಾರೆ. ಅವರಿಂದ ಒಂದು ಉತ್ತಮ ಪ್ರದರ್ಶನ ನಿರೀಕ್ಷಿಸುವುದು ಹೇಗೆ? ಇಂದು ಎರಡು, ಮೂರು ಮೇಳಗಳನ್ನು ನಡೆಸುವಷ್ಟೇ ಪ್ರೌಢ ಕಲಾವಿದರು ತೆಂಕು–ಬಡಗು ತಿಟ್ಟುಗಳಲ್ಲಿದ್ದಾರೆ. ಆದರೆ ವಾಸ್ತವಿಕವಾಗಿ ಹತ್ತಿಪ್ಪತ್ತು ಮೇಳಗಳಿವೆ. ಆ ಪ್ರದರ್ಶನಗಳನ್ನು ವೀಕ್ಷಿಸಲು ಇರುವ ಯಕ್ಷಗಾನಾಸಕ್ತ ಪ್ರೇಕ್ಷಕರೇ ಹೊರ ಹೊರಬೇಕಷ್ಟೇ! ಇದರಿಂದಾಗಿ ಕೆಲವು ಪ್ರದರ್ಶನಗಳಿಗೆ ಅಧಿಕ ಸಂಖ್ಯೆಯ ಪ್ರೇಕ್ಷಕರು ಭಾಗವಹಿಸಿದರೆ, ಇನ್ನುಳಿದವಕ್ಕೆ ಕನಿಷ್ಠ ಪ್ರೇಕ್ಷಕರಿರುತ್ತಾರಷ್ಟೇ.

*** ಯಕ್ಷಗಾನದಲ್ಲಿ ಇಂದು ಪ್ರಯೋಗಿಸುವ ರೂಪಕ, ಜನಪದ ಕುಣಿತಗಳ ಬಗ್ಗೆ ಅನಿಸಿಕೆ?**

ರೂಪಕವಾಗಿರಲಿ, ಜನಪದ ಕುಣಿತವಾಗರಲಿ ಅದು ನಾಟ್ಯ, ವೇಷಭೂಷಣ, ಒಟ್ಟು ರಂಗವ್ಯವಸ್ಥೆಯಲ್ಲಿ ಯಕ್ಷಗಾನೀಯವಾಗಿದೆಯೇ ಎನ್ನುವುದು ಮುಖ್ಯ. ಇವುಗಳು ಕಲೆಗೆ ಹೊಂದಿರಬೇಕು. ಕಲೆಯನ್ನು ಒಳಗಿನಿಂದಲೇ ವಿಸ್ತರಿಸಬೇಕು.

*** ಇಂದಿನ ಆಟಗಳಲ್ಲಿ ಬಳಸುವ stage setting ಬಗ್ಗೆ ನಿಮ್ಮ ಅನಿಸಿಕೆ?**

ಯಕ್ಷಗಾನವೆಂಬುದು ವಾಸ್ತವಿಕ ಕಲೆಯಲ್ಲ. ಇದು ಸಾಂಕೇತಿಕ ಕಲೆ. ಸಂಕೇತಗಳ ಮೂಲಕವೇ ಸ್ವಭಾವ ಚಿತ್ರಣ ಚಿತ್ರಿಸಲಾಗುತ್ತದೆ. ಸ್ವರ್ಗ, ನರಕ, ಪಾತಾಳಗಳನ್ನಾಗಲೀ ನಾಲ್ಕು ಕಂಬಗಳ ಮಧ್ಯೆಯೇ ತೋರಿಸುತ್ತೇವೆ. ವೇದಿಕೆಗೆ ಒಂದು ಸುತ್ತು ಬಂದು ಸ್ವರ್ಗಲೋಕ ಪ್ರವೇಶಿಸಿದ್ದೇನೆ ಎಂದಾಗ ಜನ ಒಪ್ಪುತ್ತಾರೆ. ವನವಾಸಿ ಪಾಂಡವರಿಗೆ ಕಿರೀಟ, ವೇಷಭೂಷಣ ತೋರುವಾಗ ವನವಾಸಿ ರಾಮಲಕ್ಷ್ಮಣರಿಗೂ ತೋರಬೇಕು. ದೇವಿಮಹಾತ್ಮೆಯ ಉಯ್ಯಾಲೆಯಾಗಲೀ, ವಿಷ್ಣುವಿಗೆ ಕಮಲವನ್ನಾಗಲೀ ಚಿತ್ರಿಸುವ, ನಿರ್ಮಿಸುವ stage setting ಯಕ್ಷಗಾನವಲ್ಲ. ಅಗತ್ಯವೂ ಇಲ್ಲ.

*** ಸೇವೆ ಆಟಗಳ ಸಿಡಿಮದ್ದುಗಳ ಗೌಜಿ ಗದ್ದಲಗಳ ಬಗ್ಗೆ?**

ಅದು ಶುದ್ಧ ತಪ್ಪು. ಅದು ಆಟವೇ ಅಲ್ಲ. ಗೌಜಿ ಗದ್ದಲ ಜಾತ್ರೆ ಎಂದೇ ನನ್ನ ಅಭಿಪ್ರಾಯ.

*** ಧ್ವನಿಸುರುಳಿಗಳಿಂದಾಗಿ ಯಕ್ಷಗಾನ ಕಲೆಗೆ ಲಾಭವಾಗಿದೆಯೇ?**

ಖಂಡಿತ. ಅಭಿರುಚಿ ವಿಸ್ತಾರಗೊಂಡಿದೆ.

*** ಮುಂದಕ್ಕೆ ಇನ್ನು ಮೂರು ಗಂಟೆಗಳ ಸೀಮಿತ ಅವಧಿಯ ಯಕ್ಷಗಾನ ರಚನೆಯೇ ಆಗಬೇಕಾದೀತು ಎನ್ನುವ ಅಭಿಪ್ರಾಯ ಇದೆಯಲ್ಲ.**

ಈಗಾಗಲೇ ಜಾತ್ರೆ, ಸಮಾರಂಭಗಳಲ್ಲಿ ಸೀಮಿತ ಸಮಯದ ಪ್ರಸಂಗ ಪ್ರಯೋಗ ನಡೆಯುತ್ತಿದೆಯಲ್ಲ. ಹಿಂದಿನ ಪ್ರಸಂಗಗಳಲ್ಲೂ 2–3 ಗಂಟೆಗಳಿಗಾಗುವಂತೆ ವಿಂಗಡಿಸುವ ಪ್ರಸಂಗ ರಚನೆಯಾಗಿದೆ. ಉದಾ: ಕೃಷ್ಣ ಸಂಧಾನವನ್ನು ನಾಲ್ಕು ತುಂಡು ಪ್ರಸಂಗಗಳಾಗಿ ಬಳಸಿಕೊಳ್ಳಬಹುದು. ಆದರೆ ಪ್ರಸಂಗಕರ್ತರು ಬೆಳಗಿನವರೆಗಿನ ಪೂರ್ಣಾವಧಿಯ ಪ್ರಸಂಗ ರಚನೆ ಮಾಡಬೇಕು ಎಂದು ನನ್ನಭಿಪ್ರಾಯ.

*** ಕೂಡಾಟ–ಜೋಡಾಟಗಳ ಬಗ್ಗೆ?**

ಜೋಡಾಟ ಕಲೆಯೇ ಅಲ್ಲ. ಅದು ಹಬ್ಬ. ಕೂಡಾಟ ಫ್ಯಾಶನ್. ಸಾಕಷ್ಟು ಪೂರ್ವ ತಯಾರಿ ಇಲ್ಲದೆ ಕೂಡಾಟ ನಡೆಸುವುದು ಕಲೆಗೆ ಮಾರಕ.

*** ಯಕ್ಷಗಾನ ಸ್ಮರಣಿಕೆಗಳ ರಚನೆ – ಮಾರಾಟ ಪ್ರದರ್ಶನಗಳ ಬಗ್ಗೆ?**

ಕಲೆಯ ಪ್ರಸಾರಕ್ಕೆ ಮುಖ್ಯವಾದ ಕೆಲಸ. ಕಲಾತ್ಮಕ ನೋಟ ಹೆಚ್ಚಿಸಿ ನಮ್ಮ ಕಲೆಯ ಸ್ಮರಣಿಕೆಗಳು ಮನೆಯನ್ನು ಅಲಂಕರಿಸಿದುದನ್ನು ನೋಡುವಾಗ ಕಲೆಯ ಬಗ್ಗೆ ನಮ್ಮದೆಂಬ ಹೆಮ್ಮೆ, ಪ್ರೀತಿ ಬೆಳೆಯುತ್ತದೆ. ಇದು ಕೇವಲ ಸ್ಮರಣಿಕೆಗಳಲ್ಲಿ ಮಾತ್ರವಲ್ಲ,

ಸ್ಟಿಕ್ಕರ್, ಕ್ಯಾಲೆಂಡರ್‌ಗಳಲ್ಲೂ ಲೋಗೋಗಳಲ್ಲೂ ಮೂಡಿಬರಬೇಕು.

*** ಯಕ್ಷಗಾನ ಪ್ರಸಂಗ ಕೃತಿಗಳಿಗೆ – ಸಾಹಿತ್ಯಕ್ಕೆ, ಇತರ ಸಾಹಿತಿಗಳಿಗೆ ಸಿಕ್ಕಿದ ಸ್ಥಾನಮಾನ ದೊರೆಯದಿರಲು ಕಾರಣ?**

ಯಕ್ಷಗಾನ ಪ್ರಸಂಗ ಶುದ್ಧ ಕಾವ್ಯವಲ್ಲ, ರಂಗಕಾವ್ಯ. ಅದಕ್ಕೆ ತನ್ನದೇ ಆದ ಇತಿಮಿತಿ ಇದೆ. ಸ್ಥಾನ ಅವರೇನು ಕೊಡುವುದು?, ಅದು ಶ್ರೇಷ್ಠ ಕಾವ್ಯ.

*** ಇಪ್ಪತ್ತೊಂದನೇ ಶತಮಾನದಲ್ಲಿ ಯಕ್ಷಗಾನ ಕಲೆಯ ಸ್ವರೂಪ ಹೇಗಿರಬಹುದು?**

ಕಲಾ ಸ್ವರೂಪ ಬದಲಾಗಲೂಬಹುದು. ಆದರೆ ಯಕ್ಷಗಾನ ಇನ್ನೂ ನೂರು ವರುಷ ಖಂಡಿತಾ ಉಳಿಯುತ್ತದೆ. ಯಕ್ಷಗಾನ ಹಿಂದೆಂದಿಗಿಂತಲೂ ಹೆಚ್ಚು ಇಪ್ಪತ್ತನೇ ಶತಮಾನದಲ್ಲಿ ಸಾಕಷ್ಟು ಪರಿವರ್ತನೆಗೊಂಡಿದೆ. ಅದರಲ್ಲೂ ಕಳೆದ ಇಪ್ಪತ್ತು ವರುಷಗಳಲ್ಲಿ ಇನ್ನೂ ಹೆಚ್ಚು ಕ್ಷಿಪ್ರವಾಗಿ ಬದಲಾಗಿದೆ. ಇದನ್ನು ನಾವು ಗಮನಿಸಬೇಕು.

*** ಉಪನ್ಯಾಸಕನಾಗಿ, ಅರ್ಥದಾರಿಯಾಗಿ, ಸಂಶೋಧಕರಾಗಿ ಅಧ್ಯಯನ–ಅಧ್ಯಾಪನ – ಸಂಶೋಧನೆಯನ್ನು ಹೇಗೆ ನೀವು ಹೊಂದಿಸಿಕೊಳ್ಳುತ್ತೀರಿ?**

ಇದು ಮುಖ್ಯವಾಗಿ ಆಸಕ್ತಿಯ ಪ್ರಶ್ನೆ. ಮನಸ್ಸಿದ್ದರೆ ಮನುಷ್ಯನಿಗೆ ಯಾವುದನ್ನೂ ಸಾಧಿಸಬಹುದು. ನನ್ನ ಮಟ್ಟಿಗೆ ಹೇಳುವುದಾದರೆ ನನ್ನ ಮನೆಯ ಸಂಪೂರ್ಣ ಹೊಣೆಗಾರಿಕೆಯನ್ನು ಪತ್ನಿ ಸುಚೇತಾ ವಹಿಸಿಕೊಂಡಿದ್ದಾಳೆ. ಮನೆಯ ಬಗ್ಗೆ ಚಿಂತೆಯಿಲ್ಲ. ಉಳಿದಂತೆ ಕೆಲವೊಮ್ಮೆ ಊಟ–ತಿಂಡಿ ಇಲ್ಲದೆ ದುಡಿಯಬೇಕಾಗುತ್ತದೆ. ಕಾಲೇಜಿನಲ್ಲಿ ಆಡಳಿತ ಮಂಡಳಿ, ಪ್ರಿನ್ಸಿಪಾಲ್, ಸಹೋದ್ಯೋಗಿಗಳು ಸಂಪೂರ್ಣ ಸಹಕಾರ ನೀಡುತ್ತಿದ್ದಾರೆ. ಹಾಗೆಂದು ಎಂದೂ ಅಧ್ಯಾಪನ ವೃತ್ತಿಗೆ ದ್ರೋಹ ಬಗೆದವನಲ್ಲ. ಆಕಸ್ಮಿಕವಾಗಿ ಕಾಲು ಗಂಟೆ ತಡವಾದರೂ ರಜೆ ಹಾಕಿ ಬಿಡುತ್ತೇನೆ. ಹೀಗೆ ಮನೆಯವರ, ಶಾಲೆಯವರ ಸಹಕಾರದಿಂದ ಇದು ಸಾಧ್ಯವಾಗಿದೆ.

*** ನಿಮ್ಮ ಮುಂದಿನ ಯೋಜನೆ...**

ಯಕ್ಷಗಾನ ಪದಕೋಶವನ್ನು ಇಂಗ್ಲೀಷಿಗೆ ತರ್ಜುಮೆ ಮಾಡುವುದು, ಯಕ್ಷಗಾನದ ಬಗ್ಗೆ ಇಂಗ್ಲಿಷ್, ಕನ್ನಡ ಎರಡೂ ಭಾಷೆಗಳಲ್ಲಿ ಸಮಗ್ರ ಗ್ರಂಥವೊಂದನ್ನು ಬರೆಯುವುದು, ಬೃಹತ್ ಯಕ್ಷಗಾನ ಫೋಟೋ ಕಲೆಕ್ಷನ್ ಮಾಡುವುದು, ಗುಂಪಿನಲ್ಲಿ ಸಾಹಿತ್ಯ ಚರಿತ್ರೆ ಬರೆಯುವುದು (ಸಂಕಲಿತ ಗ್ರಂಥ), ನನ್ನದೇ ಆದ ಯಕ್ಷಗಾನ ಸಂಶೋಧನಾ ಸಂಸ್ಥೆಯನ್ನು ಸ್ಥಾಪಿಸುವುದು – ನನ್ನ ಮುಂದಿನ ಯೋಚನೆ, ಯೋಜನೆಗಳು. ಏನಾಗುತ್ತದೋ ಗೊತ್ತಿಲ್ಲ.

**(ಪ್ರಕಟ : ಹೊಸದಿಗಂತ, 3–7–1998 / 10–7–1998)**

# ಸೂಕ್ಷ್ಮ ಸಂವೇದಿ ವಿಮರ್ಶಕ



ಗ. ನಾ. ಭಟ್ಟ, ಮೈಸೂರು

ಯಕ್ಷಗಾನವಿರಲಿ ಅಥವಾ ಸಂಗೀತ, ನೃತ್ಯ, ತಬಲಾ, ಶಿಲ್ಪ ಮುಂತಾದ ಇತರ ಯಾವುದೇ ಕಲಾಪ್ರಕಾರವಿರಲಿ. ಆಯಾ ಕಲಾಪ್ರಕಾರದಲ್ಲಿ ಅತಿಶ್ರೇಷ್ಠ ಕಲಾವಿದರು ದೊರೆಯುತ್ತಾರೆ. ಆದರೆ ಕಲಾವಿದರೆಲ್ಲರೂ ಲೇಖಕ ರಾಗಲೀ, ವಿಮರ್ಶಕರಾಗಲೀ, ಚಿಂತಕರಾಗಲೀ, ಭಾಷಣಕಾರರಾಗಲೀ ಆಗಿರುವುದಿಲ್ಲ. ಯಕ್ಷಗಾನ ರಂಗಭೂಮಿಯಲ್ಲಿ ವಾದಚಮತ್ಕಾರಗಳಿಂದ ಮೆರೆಯುವ, ಉದ್ದುದ್ದ ಮಾತುಗಳಿಂದ, ಲೋಕೋಕ್ತಿಗಳಿಂದ ರಂಜಿಸುವ, ಅದ್ಭುತವಾಗಿ ನರ್ತಿಸುವ, ತಮ್ಮ ಕಂಠಶ್ರೀಯಿಂದ ಅದ್ಭುತವಾಗಿ ಹಾಡಿ ಜನಸಂದೋಹವನ್ನು ಆಕರ್ಷಿಸುವ ಕಲಾವಿದರು ಅಸಂಖ್ಯ ಸಂಖ್ಯೆಯಲ್ಲಿ ಇದ್ದಾರೆ. ಅದೇ ಕಲಾವಿದರಿಗೆ 'ಹತ್ತು ನಿಮಿಷ ಭಾಷಣ ಮಾಡಿ' ಎಂದರೆ ಹೌಹಾರುತ್ತಾರೆ. ನಿಮ್ಮ ವಿಷಯಕ್ಕೆ ಸಂಬಂಧಪಟ್ಟಂತೆ 'ಎರಡು ಪುಟ ಲೇಖನ ಬರೆದುಕೊಡಿ' ಅಂದರೆ ಅವರ ಕೈಗಳಿಗೆ ಪೆನ್ನು-ಹಾಳೆ ಸಿಗುವುದಿಲ್ಲ! ನೀವು ಮಾಡಿದ ಈ ಅದ್ಭುತ ಅಭಿನಯ ಯಾವುದರಿಂದ ಪ್ರೇರಿತ? ಇದರ ಔಚಿತ್ಯವೇನು? ಇದರ ಸಾಂಕೇತಿಕಾರ್ಥ ಏನು ಅಂತ ಅವರನ್ನು ಕೇಳಿದರೆ ಅವರು ಮೂಕರಾದಾರು ಅಥವಾ

ಸಮರ್ಪಕವಲ್ಲದ ಏನೋ ಒಂದು ಉತ್ತರವನ್ನು ಕೊಟ್ಟಾರು!

ಇಷ್ಟೆಲ್ಲಾ ಹೇಳಿದ್ದು ಕಲಾವಿದನೊಬ್ಬ (ಕಲಾವಿದೆಯೊಬ್ಬಳು) ಲೇಖಕನೂ, ಚಿಂತಕನೂ, ವಿಮರ್ಶಕನೂ, ಭಾಷಣಕಾರನೂ ಆಗಿರಬೇಕೆಂದು ಫರ್ಮಾನು ನೀಡುವುದಕ್ಕೆ ಅಲ್ಲ. ಕಲಾವಿದ ಕಲಾವಿದನಾಗಿ ತನ್ನ ಪ್ರತಿಭೆ, ಯೋಗ್ಯತೆ, ಕಲಾಸಾಧನೆ, ನೈಪುಣ್ಯ ಮುಂತಾದುವನ್ನು ಯಥಾಯೋಗ್ಯ ಪ್ರದರ್ಶಿಸಿದರೆ ಅದೇ ಕಲೆಯ ಸೌಭಾಗ್ಯ; ಜನರ ಪುಣ್ಯ. ಅದು ಇಷ್ಟಕ್ಕೇ ಮುಗಿಯುವುದಿಲ್ಲ. ಕಲಾವಿದನೊಬ್ಬ ಚಿಂತಕ, ಲೇಖಕ, ವಿಮರ್ಶಕ, ವಾಗ್ಮಿ ಆಗಿರುವುದೂ ಇದೆ. ಕಲಾವಿದನಾಗಿ ಪಡೆದಿರುವಷ್ಟೇ ಖ್ಯಾತಿ, ಕೀರ್ತಿಯನ್ನು ಚಿಂತಕನಾಗಿ, ವಿಮರ್ಶಕನಾಗಿ, ಲೇಖಕನಾಗಿ, ಒಳ್ಳೆಯ ಭಾಷಣಕಾರನಾಗಿ ಪಡೆದಿರುವವರೂ ಇದ್ದಾರೆ. ಯಕ್ಷಗಾನ ರಂಗಭೂಮಿಯ ಮಟ್ಟಿಗೆ ಥಟ್ಟನೆ ನೆನಪಿಗೆ ಬರುವ ಹೆಸರು – ಒಬ್ಬರು ಕೆರೆಮನೆ ಶಂಭು ಹೆಗಡೆ, ಇನ್ನೊಬ್ಬರು ಡಾ. ಎಂ. ಪ್ರಭಾಕರ ಜೋಶಿ.

ಜೋಶಿ ನಮ್ಮ ಕಾಲದ ಶ್ರೇಷ್ಠ ಚಿಂತಕರಲ್ಲಿ ಒಬ್ಬರು. ಅವರು ಸಾಹಿತಿ, ವಿಚಾರವಾದಿ, ಅರ್ಥದಾರಿ, ಸಂಘಟಕ, ನಿರ್ದೇಶಕ, ಲೇಖಕ, ಸಂಪನ್ಮೂಲ ವ್ಯಕ್ತಿ. ಎಲ್ಲಕ್ಕೂ ಮಿಗಿಲಾಗಿ ಅವರೊಬ್ಬ ಸೂಕ್ಷ್ಮ ಸಂವೇದಿ ವಿಮರ್ಶಕ. ಯಕ್ಷಪ್ರಪಂಚಕ್ಕೆ ಒಂದು ಗಟ್ಟಿ ವಿಮರ್ಶಾ ಪರಂಪರೆ ಮತ್ತು ಸುಭದ್ರ ನೆಲೆಯನ್ನು ಒದಗಿಸಿದ ಕೀರ್ತಿ ಡಾ. ಶಿವರಾಮ ಕಾರಂತರ ತರುವಾಯ ಜೋಶಿಯವರಿಗೆ ಸಲ್ಲಬೇಕು.

'ವಿಮರ್ಶೆ' ಅಂದರೆ ಏನು ಅನ್ನುವುದಕ್ಕೆ ಹಲವು ವ್ಯಾಖ್ಯಾನಗಳಿವೆ. "ಜಗತ್ತಿನಲ್ಲಿ ಯಾವ ಯಾವ ಅತ್ಯುತ್ತಮವಾದ ಆಲೋಚನೆ ಹಾಗೂ ಅನುಭವಗಳಿವೆಯೋ ಅವುಗಳನ್ನು ಅರ್ಥಮಾಡಿಕೊಂಡು ಪ್ರಸಾರ ಮಾಡುವ ಒಂದು ನಿಷ್ಪಕ್ಷಪಾತವಾದ ಪ್ರಯತ್ನವೇ ವಿಮರ್ಶೆ" ಎಂದು ಮ್ಯಾಥ್ಯೂ ಆರ್ನಾಲ್ಡ್ ಹೇಳಿದರೆ, "ಒಂದು ಅನುಭವಕ್ಕೂ ಮತ್ತೊಂದು ಅನುಭವಕ್ಕೂ ಇರುವ ವ್ಯತ್ಯಾಸವನ್ನು ಗುರುತಿಸಿ ಬೆಲೆಕಟ್ಟುವ ಪ್ರಯತ್ನವೇ ವಿಮರ್ಶೆ"ಯೆಂದು ಐ.ಎ. ರಿಚರ್ಡ್ಸ್ ಹೇಳುತ್ತಾನೆ. "ವಿಮರ್ಶೆಯೆಂದರೆ ಒಂದು ಬಗೆಯಿಂದ ಬೆಲೆಕಟ್ಟುವ ಕೆಲಸ ಅಂದರೆ ಗುಣದೋಷಗಳ ವಿವೇಚನೆ"ಯೆಂದು ಡಾ. ಜೋಶಿ ಹೇಳುತ್ತಾರೆ. (ವಾಗರ್ಥ–91) ಜೋಶಿ ಯಕ್ಷಗಾನ ವಿಮರ್ಶೆಯನ್ನು ಒಂದು ತಪಸ್ಸಿನಂತೆ ನಡೆಸಿಕೊಂಡು ಬಂದವರು. ಯಾವುದೇ ಕೆಲಸವಿರಲಿ. ಅದರಲ್ಲಿ ಸಂಪೂರ್ಣ ತೊಡಗಿಸಿಕೊಳ್ಳುವುದೇ ತಪಸ್ಸಿನ ಲಕ್ಷಣ. ಜೋಶಿ ಅಂತಹ ತಪಸ್ವಿ.

ಯಕ್ಷಗಾನ ಪಾರಂಪರಿಕ ವಿಮರ್ಶೆ, ಮೌಲಿಕ ವಿಮರ್ಶೆ, ರಸನಿಷ್ಠ ವಿಮರ್ಶೆ, ಸಂಶೋಧನಾತ್ಮಕ ವಿಮರ್ಶೆ, ಖಂಡನಾತ್ಮಕ – ಪ್ರೋತ್ಸಾಹಕ ವಿಮರ್ಶೆ, ಸಾಮಾಜಿಕ ವಿಮರ್ಶೆ, ಮರುವಿಮರ್ಶೆ, ಒಟ್ಟಂದ ವಿಮರ್ಶೆ, ಆಶಯ ವಿಮರ್ಶೆ ಮುಂತಾಗಿ ವಿಮರ್ಶೆಯ ಹತ್ತೆಂಟು ನೆಲೆಗಳನ್ನು ಜೋಶಿಯವರು ಗುರುತಿಸಿದ್ದಾರೆ. (ವಾಗರ್ಥ) ವಿಮರ್ಶೆಯ ನೆಲೆಯನ್ನು ಹಲವು ದೃಷ್ಟಿಕೋನಗಳಲ್ಲಿ ವಿವೇಚಿಸಿ ವಿಮರ್ಶೆಯಿಂದ ಯಕ್ಷಗಾನ ರಂಗಭೂಮಿಗೆ ಆಗಬೇಕಾದ ಬೆಳವಣಿಗೆ, ಅಭಿವೃದ್ಧಿ ಆಗಿಲ್ಲವೆಂದು ವಿಷಾದ

ವ್ಯಕ್ತಪಡಿಸುತ್ತಾರೆ. ಮುಖ್ಯವಾಗಿ ಯಕ್ಷಗಾನ ವಿಮರ್ಶೆಯೇ ಸಾಕಷ್ಟು ಪ್ರಮಾಣದಲ್ಲಿ ಆಗಿಲ್ಲವೆಂದು ಖೇದಪಡುತ್ತಾರೆ.

"ಯಕ್ಷಗಾನ ಕಲಾಪರಂಪರೆಯ ಸುದೀರ್ಘ ಅವಧಿ ಮತ್ತು ಈ ರಂಗದ ಗಾತ್ರವನ್ನು ನೋಡಿದರೆ ಈ ರಂಗದ ವಿಮರ್ಶೆಗೆ ಅಂತಹ ಪರಂಪರೆ ಅಥವಾ ವಿಸ್ತಾರ ಇಲ್ಲ. ಈ ಶತಮಾನದ ಮೊದಲ ಭಾಗದಿಂದಲೇ ಕಲೆಯ ಬಗೆಗಿನ ಬರೆಹದ ಯತ್ನ ಆರಂಭ ವಾಗಿದ್ದರೂ ಡಾ. ಕಾರಂತರ ಗ್ರಂಥವೇ (1957) ಈ ಕಲೆಯ ಬಗೆಗಿನ ವ್ಯವಸ್ಥಿತ ವಿವರಣೆ, ವಿಶ್ಲೇಷಣೆಯ ಮೊದಲ ಗ್ರಂಥ. ನಂತರ ಕೆಲವು ಪುಸ್ತಕಗಳು ಬಂದಿವೆ. ಆದರೂ ಯಕ್ಷಗಾನ ವಿಮರ್ಶೆ, ಮೀಮಾಂಸೆಗಳಿಗೆ ಗಟ್ಟಿಯಾದ ನೆಲೆ ಒದಗಿಲ್ಲ. ಯಕ್ಷಗಾನದಲ್ಲಿ ವ್ಯವಸ್ಥಿತ ವಿವರಣೆಯು ಇನ್ನೂ ಆರಂಭಿಕ ಸ್ಥಿತಿಯಲ್ಲಿ ಇದೆ. ಉತ್ತಮ ಗುಣಮಟ್ಟದ ಮತ್ತು ಸಾಕಷ್ಟು ಪ್ರಮಾಣದ ವಿಮರ್ಶೆ ಬೆಳೆಯದಿರುವುದು ಒಂದು ಸಮಸ್ಯೆ. ಬಂದಿರುವ, ಬರುತ್ತಿರುವ ವಿಮರ್ಶೆಯಲ್ಲೂ ಸಮಗ್ರ ದೃಷ್ಟಿಯುಳ್ಳ ಬರಹಗಳು ಕಡಿಮೆ." (ವಾಗರ್ಥ-93) ಎಂದು ಜೋಶಿ ಹೇಳುತ್ತಾರೆ.

ಮುಂದುವರಿದು - "ಈ ಕ್ಷೇತ್ರದ ವಿಮರ್ಶೆಯ ತಾತ್ವಿಕ ವಿವೇಚನೆ ಆಗಿಲ್ಲ. ಹಾಗಾಗಿ ಯಕ್ಷಗಾನ ವಿಮರ್ಶಾಶಾಸ್ತ್ರ ಬೆಳೆದಿಲ್ಲ. ಅದು ಬೆಳೆದಿದ್ದರೆ ಯಕ್ಷಗಾನ ಇಂದು ಇರುವಂತೆ ಇರುತ್ತಿರಲಿಲ್ಲ. ಎಷ್ಟೋ ಉತ್ತಮವಾಗಿರುತ್ತಿತ್ತು. ಯಕ್ಷಗಾನ ರಂಗಕ್ಕೆ ಬೇಕಾದ ಮಾರ್ಗದರ್ಶನವನ್ನು ಒದಗಿಸಲು ವಿಮರ್ಶಕರು ವಿಫಲರಾಗಿದ್ದಾರೆ. ಈ ಸೋಲನ್ನು ನಾವು ಒಪ್ಪಿಕೊಳ್ಳಬೇಕು. ಇದರಿಂದಾಗಿ ವಿಮರ್ಶೆಗೆ ಮುಕ್ತವಾಗಿ ಒಡ್ಡಿಕೊಳ್ಳಲು ಯಕ್ಷಗಾನ ರಂಗ ಇನ್ನೂ ಸಿದ್ಧವಾಗಿಲ್ಲ. ವಿಮರ್ಶೆ, ಗೋಷ್ಠಿ ಎಂದರೆ ಅದೇನೋ ತಮ್ಮನ್ನು ಟೀಕಿಸುವಂತಹ ಉದ್ದೇಶ ಎಂದೇ ಕಲಾವಿದರು ತಿಳಿದಿರುವಂತೆ ಕಾಣುತ್ತದೆ. ಈ ಸಂದೇಹವನ್ನು ನಿವಾರಿಸಲು ನಾವು ಯತ್ನಿಸಬೇಕು" ಎಂದು ಜೋಶಿ ಖಡಾಖಂಡಿತವಾಗಿ ಹೇಳುತ್ತಾರೆ. ಹೀಗೆ ಯಕ್ಷಗಾನ ವಿಮರ್ಶೆಗೆ ಬಲವಾದ ದಿಕ್ಸೂಚಿಯನ್ನು ಒದಗಿಸಿಕೊಟ್ಟ ಕೀರ್ತಿ ಜೋಶಿಯವರದ್ದು.

ಅರ್ಥದಾರಿಯಾಗಿ ಎಲ್ಲಾ ಬಗೆಯ ಪಾತ್ರಗಳನ್ನೂ ನಿರ್ವಹ ಮಾಡುತ್ತಾರೆ. ಭಾವಪ್ರಧಾನ ಅರ್ಥಕ್ಕಿಂತ ಹೆಚ್ಚಾಗಿ ವಿಚಾರ ಪ್ರಧಾನ ಅರ್ಥವೇ ಅವರಿಗೆ ಹೆಚ್ಚು ಇಷ್ಟವಾದುದು. ಯಾವ ಪಾತ್ರದ ಅರ್ಥವೇ ಆಗಲಿ. ಆಯಾ ಪಾತ್ರದ ಸಾಂಸ್ಕೃತಿಕ, ಪೌರಾಣಿಕ, ಐತಿಹಾಸಿಕ ಹಿನ್ನೆಲೆಯನ್ನು ಬಗೆದು ಉಣಬಡಿಸುವುದು ಮತ್ತು ಅಷ್ಟೇ ಧ್ವನಿಪೂರ್ಣವಾಗಿ ಮಂಡಿಸಿ, ಕೇಳುಗರ ಬುದ್ಧಿ ಮಸೆಯುವಂತೆ ಮಾಡುವುದು ವೈಶಿಷ್ಟ್ಯ. "ಕರ್ಣ ಪರ್ವ ಪ್ರಸಂಗದಲ್ಲಿ ಕರ್ಣನಾಗಿ 'ಎಲವೋ ಪಾರ್ಥ ಕೇಳು' ಪದ್ಯಕ್ಕೆ 'ಕರ್ಣ ಪರ್ವ' ಆರಂಭವಾಗಿದೆ ಎಂದು ಅವರು ಧ್ವನಿಸುವ ಪರಿಯೇ ಬಹು ರೋಚಕವಾದುದು." ಶಿಖಂಡಿಯನ್ನು ಮುಂದಿಟ್ಟುಕೊಂಡು ಭೀಷ್ಮನನ್ನು ಗೆದ್ದ 'ಭೀಷ್ಮಪರ್ವ' ಇದಲ್ಲ. ವಂಚನೆಯಿಂದ ದ್ರೋಣನನ್ನು ಗೆದ್ದ 'ದ್ರೋಣ ಪರ್ವ' ಇದಲ್ಲ ಎನ್ನುತ್ತಾ, ಈ ಎರಡು ವಾಕ್ಯಗಳಿಂದಲೇ ಕರ್ಣ ತನ್ನ ಪರ್ವನನ್ನು ಆರಂಭಿಸಿದ್ದಾನೆ ಅನ್ನುವುದನ್ನು ಬಹು

ಸೊಗಸಾಗಿ ನಿರೂಪಿಸಿ ಬಿಡುತ್ತಾರೆ.

'ಕರ್ಣಪರ್ವ' ಎಂಬ ಶಬ್ದದ ಹಂಗಿಲ್ಲದೆಯೇ, ಅದನ್ನು ವಾಚ್ಯವಾಗಿಸದೆಯೇ 'ಕರ್ಣಪರ್ವ'ವನ್ನು ಧ್ವನಿಸುವ ಪರಿ ನಿಜಕ್ಕೂ ಚೇತೋಹಾರಿಯಾದುದು. ಮುಂದೆ ಸರ್ಪಾಸ್ತ್ರ ತನ್ನ ಕೈಗೆ ಸಿಕ್ಕಾಗ, ಸರ್ಪಾಸ್ತ್ರಕ್ಕೂ ತನಗೂ (ಕರ್ಣನಿಗೂ) ಅಭೇದವನ್ನು ಕಲ್ಪಿಸಿ ಹೊಸ ಚಿಂತನೆಗೆ ದಾರಿ ಮಾಡಿಕೊಡುತ್ತಾರೆ. ಅವರ ಉಪಮೆ ಅದನ್ನು ಸ್ಪಷ್ಟಗೊಳಿಸುತ್ತದೆ. "ಯುದ್ಧದ ಹಾಲು ಕಾದು ಕೆನೆ ಬರುವ ಈ ಆಯತ ಸಂದರ್ಭದಲ್ಲಿ ಸರ್ಪಾಸ್ತ್ರವೊಂದು ನನ್ನ ಕೈ ಸೇರಿತಲ್ಲ! ಮುಂದೆ ಅರ್ಧ ಸರ್ಪ, ಹಿಂದೆ ಅರ್ಧ ಬಾಣ. ಮೋಡ ಮುಸುಕಿದ ಸೂರ್ಯನ ಹಾಗೆ. ಕರ್ಣನ ಜೀವನವೂ ಹೀಗೆಯೇ. ನನ್ನ ಪ್ರತಾಪವನ್ನು ಜಗತ್ತಿಗೆ ತೋರಿಸಿದ್ದೇನೆ. ಆದರೆ ನಾನು ಯಾರು ಅಂತ ಜಗತ್ತಿಗೆ ಗೊತ್ತಿಲ್ಲ" ಅಂತ ಹೇಳುತ್ತಾರೆ. "ಈ ಜಗತ್ತಿಗೆ ಸರ್ಪಾಸ್ತ್ರ ಯಾರು ಅನ್ನುವುದು ಗೊತ್ತಲ್ಲ. ಹಾಗೆಯೇ ಈ ಕರ್ಣನೂ ಯಾರು ಅನ್ನುವುದು ಗೊತ್ತಿಲ್ಲ" ಎಂಬ ಮಾತೇ ಸರ್ಪಾಸ್ತ್ರಕ್ಕೂ ಕರ್ಣನಿಗೂ ಇರುವ ಅಭೇದವನ್ನು ಕಲ್ಪಿಸುತ್ತದೆ. ಇದನ್ನು ಜೋಶಿ ಹೊಸ ನೆಲೆಯಲ್ಲಿ ಕಟ್ಟಿಕೊಡುತ್ತಾರೆ.

ಹಾಗೆಯೇ ಪಾತ್ರವೊಂದರ ಸ್ವಭಾವಕ್ಕನುಗುಣವಾಗಿ ಅದರ ನೀಚೋಚ್ಚಭಾವವನ್ನು, ಅದರ ಘನತೆ, ಗಾಂಭೀರ್ಯ, ಔನ್ನತ್ಯವನ್ನು ಎತ್ತಿ ಹಿಡಿಯುವ ಪರಿಯೂ ಅಸದೃಶ ವಾದುದು. 'ಸುಧನ್ವಾರ್ಜುನ'ದಲ್ಲಿ ಅರ್ಜುನನಾಗಿ ಸುಧನ್ವನ ಧೃತಿಗೆಡಿಸುವ ಮಾತು ಪ್ರಸಿದ್ಧವಾದುದು. "ಇದೋ ನನ್ನ ಮುಖದ ಮೇಲಿನ ಒಂದೊಂದು ನೆರಿಗೆಯೂ ಅರ್ಜುನನ ವೀರ್ಯ, ಶೌರ್ಯ, ಪ್ರತಾಪದ ಇತಿಹಾಸವನ್ನು ಹೇಳುತ್ತದೆ" ಎಂದು ಹೇಳುತ್ತಾರೆ. ಇಲ್ಲಿ ಕಣ್ಣಿಗೆ ಢಾಳಾಗಿ ಕಾಣುವ ಉತ್ಪ್ರೇಕ್ಷೆಯಿದೆ. ಅರ್ಜುನನು ಸುಧನ್ವನ ಬಳಿ ಬರುವಾಗ ಅವನೇನೂ ಮುಖದ ಮೇಲೆ ನೆರಿಗೆ ಬೀಳುವಷ್ಟು ಹಣ್ಣು ಹಣ್ಣು ಮುದುಕನಾಗಿರಲಿಲ್ಲ. ಆದರೂ ಜೋಶಿ ಹಾಗೆ ವ್ಯಾಖ್ಯಾನಿಸುತ್ತಾರೆ. ಅರ್ಜುನನ ವೀರ್ಯ, ಶೌರ್ಯ, ಪ್ರತಾಪಾತಿಶಯವನ್ನು ಕಟ್ಟಿಕೊಡುವಾಗ; ಅವನ ಶ್ರೇಷ್ಠತೆ, ನೀತಿವಂತಿಕೆಯನ್ನು ಎತ್ತಿ ಹಿಡಿಯುವಾಗ ಮಿಂಚುವ ಉಜ್ವಲ ಪ್ರತಿಭೆಯೇ ಅರ್ಜುನನ ವಯಸ್ಸಿನ ವಾಸ್ತವತೆಯನ್ನು ಮುಚ್ಚಿ ಬಿಡುತ್ತದೆ.

ಕಾಳಿದಾಸ ತನ್ನ 'ಕುಮಾರ ಸಂಭವ'ದಲ್ಲಿ ಜಗತ್ತಿನ ತಾಯಿತಂದೆಗಳೆಂದು ಸಂಪ್ರದಾಯಸ್ಥರು ನಂಬುವ ಪಾರ್ವತೀ ಪರಮೇಶ್ವರರ ಸಂಭೋಗವನ್ನು ವರ್ಣಿಸಿದ ಹಾಗೆ ಅದು. ಪ್ರತಿಭಾಶಾಲಿಗೆ ವಸ್ತುವೊಂದರ ಪೌರ್ವಾಪರ್ಯ ವಿಮರ್ಶೆ ಮಾಡಲು ಸಮಯಾವಕಾಶವಿರುವುದಿಲ್ಲವೆಂದು ಇದರ ತಾತ್ಪರ್ಯ. ಪ್ರತಿಭೆ ಮಿನುಗುವ ವೇಳೆ ವಾಸ್ತವವನ್ನು ದೊಡ್ಡದು ಮಾಡಬಾರದು ಎಂದು ಕಾವ್ಯಮರ್ಮಜ್ಞರ ಅಭಿಪ್ರಾಯ. ಇಂತಹ ಸಂದರ್ಭದಲ್ಲಿ ಜೋಶಿಯಂತಹವರ ಪ್ರತಿಭೆ ಹೇಗೆ ಕೆಲಸ ಮಾಡಿದೆ ಅನ್ನುವುದಷ್ಟನ್ನೇ ನೋಡಬೇಕು.

ಅವರ ಇನ್ನೊಂದು ಪಾತ್ರ. 'ಕೃಷ್ಣ ಸಂಧಾನ' ಪ್ರಸಂಗದ 'ಕೌರವ'. ಕೃಷ್ಣನ ಬಳಿ

ಹೇಳುವ ಮಾತು – "ನೀನು ಬರುತ್ತೀಯ ಅಂತ ನಗರವನ್ನು ಶೃಂಗರಿಸಿದೆ. ತಳಿರು ತೋರಣಕ್ಕಾಗಿ ಮಾವಿನಮರಗಳನ್ನೇ ಕಡಿಸಿದೆ. ನೀನು ಬರಲೇ ಇಲ್ಲ. ನೀನು ಊಟಕ್ಕೆ ಬರುತ್ತೀಯೆ ಅಂತ ಕಾದಿದ್ದೇ ಬಂತು. ನಿನಗಾಗಿ ನನ್ನ ಮಕ್ಕಳು–ಮೊಮ್ಮಕ್ಕಳು ಎಲ್ಲರೂ ಕಾದರು. ನಿನ್ನನ್ನು ನೋಡಬೇಕೆಂಬ ಕುತೂಹಲದಲ್ಲಿ ಮೊಮ್ಮಕ್ಕಳು ಊಟವನ್ನೂ ಮಾಡದೆ ಹಸಿದ ಹೊಟ್ಟೆಯಲ್ಲೇ ನಿದ್ದೆ ಹೋದರು" ಎಂದು ಹೇಳುತ್ತಾರೆ. ಇಲ್ಲಿ ಕೌರವನ ವ್ಯಂಗ್ಯದ ಮಾತಿನೊಂದಿಗೆ ಉತ್ಪ್ರೇಕ್ಷೆಯೂ ಅತಿಶಯವಾಗಿ ಇದೆ. ಇಲ್ಲೂ ಅವರ ಪ್ರತಿಭಾ ವಿಲಾಸ ಮೆರೆದಿದೆ.

ಬರಹಗಾರರಾಗಿಯೂ ಜೋಶಿಯವರ ಹೆಸರು ಗಮನಾರ್ಹವಾದುದು. "ಕೇದಗೆ, ಮಾರುಮಾಲೆ, ಯಕ್ಷಗಾನ ಪದಕೋಶ, ಭಾರತೀಯ ತತ್ವಶಾಸ್ತ್ರ, ತಾಳಮದ್ದಳೆ, ವಾಗರ್ಥ, ಯಕ್ಷಗಾನ ಸ್ಥಿತಿ–ಗತಿ.." – ಮುಂತಾದ ಇಪ್ಪತ್ತಕ್ಕೂ ಹೆಚ್ಚು ಯಕ್ಷಗಾನ ಸಂಬಂಧಿ ಕೃತಿಗಳನ್ನು ರಚಿಸಿದ್ದಾರೆ. ಅವುಗಳಲ್ಲಿ 'ಮುಡಿ' ಅನ್ನುವುದು ಒಂದು. 'ಮುಡಿ' ಹೆಸರೇ ಹೇಳುವಂತೆ ಕಿರೀಟ, ತುರುಬು, ಸಂಗ್ರಹ, ಧಾನ್ಯಗಳನ್ನು ಕಟ್ಟಿದ ಗಂಟು, ಶಿರೋಭೂಷಣ ಮುಂತಾದ ಅರ್ಥಗಳಿವೆ. ಯಕ್ಷಗಾನ ಕಲೆಗೆ ಸಂಬಂಧಿಸಿದಂತೆ ಬೇರೆ ಬೇರೆ ಸಂದರ್ಭಗಳಲ್ಲಿ ಬರೆದ ಬರಹಗಳಿವು. ಸುಮಾರು ಒಂದು ದಶಕಗಳಲ್ಲಿ ವಿವಿಧ ಪತ್ರಿಕೆಗಳಿಗೆ, ಗೋಷ್ಠಿಗಳಿಗೆ, ಉಪನ್ಯಾಸಗಳಿಗೆ ಸಿದ್ಧಪಡಿಸಿದ ಲೇಖನಗಳು ಇಲ್ಲಿ ಸಂಗ್ರಹಗೊಂಡಿವೆ.

ಯಕ್ಷಗಾನ ಪರಿಭಾಷೆ, ಸಂಪ್ರದಾಯ, ಪರಂಪರೆ ಮುಂತಾದುವನ್ನು ತಿಳಿಯಪಡಿಸುವ ಇನ್ನೊಂದು ಮಹತ್ವದ ಕೃತಿ 'ಯಕ್ಷಗಾನ ಪದಕೋಶ'. ಯಕ್ಷಗಾನದ ಶಾಸ್ತ್ರೀಯ ವಿವೇಚನೆಯಲ್ಲಿ ಅಪೂರ್ವ ಕೊಡುಗೆ. ಯಕ್ಷಗಾನ ಜಿಜ್ಞಾಸುಗಳಿಗೆ, ಆಸಕ್ತರಿಗೆ, ಅಧ್ಯೇತೃಗಳಿಗೆ ಇದೊಂದು ವಿಪುಲ ಮಾಹಿತಿಯ ಆಕರ ಗ್ರಂಥವಾಗಿದೆ. 'ಕೃಷ್ಣ ಸಂಧಾನ : ಪ್ರಸಂಗ ಮತ್ತು ಪ್ರಯೋಗ' ಜೋಶಿಯವರು ತಮ್ಮ ಪಿಹೆಚ್‌ಡಿಗಾಗಿ ಬರೆದ ಪ್ರಬಂಧವಾಗಿದ್ದು 1999ರಲ್ಲಿ ಕೆಲವು ಪರಿಷ್ಕಾರಗಳೊಂದಿಗೆ ಗ್ರಂಥವಾಗಿ ಪ್ರಕಟಗೊಂಡಿದೆ. ಯಕ್ಷಗಾನದ ವಿಮರ್ಶೆ, ಸಂಶೋಧನೆಗಳಲ್ಲಿ ಹೆಚ್ಚು ಸೂಕ್ಷ್ಮವಾದ ಮತ್ತು ಪ್ರದರ್ಶನಾಧಾರಿತ ವಿವೇಚನೆ, ವಿಶ್ಲೇಷಣೆ ಈ ಗ್ರಂಥದ ಮುಖ್ಯ ವಸ್ತುವಾಗಿದೆ. ಜೋಶಿಯವರ ಆಸಕ್ತಿ ಕೇವಲ ಯಕ್ಷಗಾನಕ್ಕಷ್ಟೇ ಸೀಮಿತವಾದುದಲ್ಲ. 'ಭಾರತೀಯ ತತ್ವಶಾಸ್ತ್ರ', 'ತತ್ವಮನನ', 'ಕುಮಾರಿಲ ಭಟ್ಟ' ಮುಂತಾದ ಸಾಹಿತ್ಯಕ ಕೃತಿಗಳನ್ನೂ ರಚಿಸಿದ್ದಾರೆ. ಸಂಪಾದಿತ ಗ್ರಂಥ, ಅಂಕಣ ಬರೆಹ, ಇತರರೊಂದಿಗೆ ಸೇರಿ ಬರೆದ ಕೃತಿಗಳು, ವ್ಯಕ್ತಿಚಿತ್ರಗಳು ಮುಂತಾದುವನ್ನೂ ಸೇರಿಸಿದರೆ ಹಾದುಹೋಗುತ್ತವೆ.

ಜೋಶಿಯವರು ಮಹಾಪ್ರತಿಭಾವಂತರಾಗಿರುವಂತೆಯೇ ತೀಕ್ಷ್ಣಮತಿಗಳೂ, ಅತ್ಯುತ್ತಮ ಕಾರ್ಯಪಟುವೂ ಹೌದು. ಏಕಕಾಲಕ್ಕೆ ನಲವತ್ತು ವಿಷಯಗಳನ್ನು ಚಿಂತಿಸುತ್ತಾ ನಾಲ್ಕು ಕೆಲಸಗಳನ್ನಾದರೂ ಸಮರ್ಥವಾಗಿ ಮಾಡಬೇಕೆಂಬ ತವಕವುಳ್ಳವರು. ಹಾಗೆಯೇ ಮಾಡಿಯೂ ತೋರಿಸಬಲ್ಲವರು. ಒಂದಾದ ಮೇಲೊಂದರಂತೆ ಕೆಲಸ ಮಾಡುವ ನಿಧಾನ ಪ್ರವೃತ್ತಿಯವರಲ್ಲ. ಜೋಶಿ ಕೇವಲ ಒಬ್ಬ ವ್ಯಕ್ತಿಯಾಗಿ ಅಷ್ಟೇ ಅಲ್ಲ. ಒಂದು

ಶಕ್ತಿಯಾಗಿ, ಸಂಸ್ಥೆಯಾಗಿ ಕೆಲಸ ಮಾಡಬಲ್ಲ ಡಾ. ಶಿವರಾಮ ಕಾರಂತ, ಕೆರೆಮನೆ ಶಂಭು ಹೆಗಡೆಯಂತಹ ಧೀಮಂತರ ಪಂಕ್ತಿಗೆ ಸೇರಬಲ್ಲವರು. ಅವರ ಸಾರಸ್ವತ ಸೇವೆಯ ಇನ್ನೊಂದು ಮೈಲಿಗಲ್ಲು – ನೂರಾರು ಜನರ ಅಭಿನಂದನಾ ಗ್ರಂಥಗಳನ್ನು ಸಂಪಾದಿಸಿರುವುದು; ನೂರಾರು ಸಾಧಕರ ಅಭಿನಂದನಾ ಭಾಷಣ ಮಾಡಿರುವುದು ಮತ್ತು ಅವರ ಕುರಿತು ಲೇಖನ ಬರೆದಿರುವುದು. ಇದೇನೂ ಸಾಮಾನ್ಯ ಕೆಲಸವಲ್ಲ. ಮತ್ತೊಬ್ಬರ ಬಗ್ಗೆ ಬರೆಯುವುದು, ಮಾಹಿತಿ ಸಂಗ್ರಹಿಸುವುದು, ಅವರ ಗುಣಗಳನ್ನು ಎತ್ತಿಹಿಡಿಯುವುದು ಮುಂತಾದುವು ಮತ್ತೊಬ್ಬರ ಬಗ್ಗೆ ಪ್ರೀತಿ, ಅಭಿಮಾನ, ಕಾಳಜಿ ಇದ್ದವರು ಮಾತ್ರ ಮಾಡಬಹುದಾದ ಕೆಲಸ. ಅದು ಜೋಶಿಯವರಿಗೆ ಇದ್ದುದು ಯಕ್ಷಗಾನ ಕ್ಷೇತ್ರದ ಸೌಭಾಗ್ಯ ಮತ್ತು ಸಾಧಕರ ಪುಣ್ಯ.

ಖಡಕ್ ಮಾತುಗಾರರೂ, ನಿಷ್ಠುರವಾದಿಗಳೂ ಆದ ಜೋಶಿಯವರ ಹೃದಯ ನಿಷ್ಕಲ್ಮಷವಾದುದು. ಒಳಗೊಂದು–ಹೊರಗೊಂದನ್ನು ನಡೆಯಲ್ಲಿ ಗುರುತಿಸಲಾಗದು. ಅವರ ಕಟುವಾದ ಮಾತಿನ ಹಿಂದೆ ಚಿಂತನೆ ಇರುತ್ತದೆ; ಸಾಮಾಜಿಕ ಕಾಳಜಿಯಿರುತ್ತದೆ; ಮಾನವ ಪ್ರೀತಿಯಿರುತ್ತದೆ; ಅಂತಃಕರಣವಿರುತ್ತದೆ. ಇಂತಹ ಜೋಶಿಯವರಿಗೆ ಈಗ ಎಪ್ಪತ್ತರ ಹರೆಯ. ಅವರ ಒಟ್ಟು ಸಾಧನೆಯನ್ನು ಗುರುತಿಸಿ ಅನೇಕ ಸಂಘ–ಸಂಸ್ಥೆಗಳು ಗೌರವಿಸಿವೆ; ಪುರಸ್ಕರಿಸಿವೆ. ಕರ್ನಾಟಕ ಯಕ್ಷಗಾನ ಬಯಲಾಟ ಅಕಾಡೆಮಿ ಕೊಡ ಮಾಡುವ 2017ರ ಪ್ರತಿಷ್ಠಿತ ಪಾರ್ತಿಸುಬ್ಬ ಪ್ರಶಸ್ತಿಯೂ ಮುಡಿಗೇರಿದೆ.

*ಮೈಸೂರಿನ 'ಅಭಿಮಾನಿ ಬಳಗ'ವು ಜೋಶಿಯವರ ಜೀವನ ಮತ್ತು ಸಾಧನೆ ಕುರಿತು 'ಜೋಶಿ ವಾಗರ್ಥ ಗೌರವ' ಎಂಬ ಶೀರ್ಷಿಕೆಯಡಿಯಲ್ಲಿ 2017 ಮೇ 13 ಮತ್ತು 14ರಂದು ಮೈಸೂರಿನ ಜಗನ್ಮೋಹನ ಅರಮನೆ ಸಭಾಂಗಣದಲ್ಲಿ ಸಂವಾದ, ವಿಚಾರ ಸಂಕಿರಣ, ತಾಳಮದ್ದಳೆ ಮತ್ತು ಬಯಲಾಟವನ್ನು ಏರ್ಪಡಿಸಿತ್ತು.*



# ವಾಗರ್ಥ ವೈಯ್ಯಾಕರಣಿ
# ಸೂಕ್ಷ್ಮಮತಿ ಚಿಂತಕ




ಭಾಸ್ಕರ ರೈ ಕುಕ್ಕುವಳ್ಳಿ

ಯಕ್ಷಗಾನವೆಂಬ ಪಾರಂಪರಿಕ ಕಲೆಯನ್ನು ಅದರ ಕಲಾಮಿತಿಯಿಂದ ಎತ್ತರಿಸಿ, ಒಳನೋಟಗಳನ್ನು ವಿಸ್ತರಿಸಿ ಅದನ್ನೊಂದು ಚಿಂತನಾ ಕ್ಷೇತ್ರವನ್ನಾಗಿ ಮಾಡಿದ ಮಹನೀಯರು ಸಿಕ್ಕಿದರೆ ಕೇವಲ ಬೆರಳೆಣಿಕೆಯಷ್ಟು. ಅವರಲ್ಲಿ ಅಗ್ರಪಂಕ್ತಿಗೆ ಸಲ್ಲುವವರು ಡಾ. ಎಂ. ಪ್ರಭಾಕರ ಜೋಶಿ. ಸಮಕಾಲೀನ ವಿದ್ವದ್ವಲಯದಲ್ಲಿ ಯಕ್ಷಗಾನಕ್ಕೆ ಸಂಬಂಧಿಸಿ ಅವರದು ಈಡಿಲ್ಲದ ಸಾಧನೆ. ಅವರು ಲೇಖಕ, ವಿಮರ್ಶಕ, ಅರ್ಥದಾರಿ, ಸಂಘಟಕ, ವಾಗ್ಮಿ, ವಿಚಾರವಾದಿ, ಸಾಹಿತಿ, ಸಂಪನ್ಮೂಲ ವ್ಯಕ್ತಿ; ಅದಕ್ಕಿಂತ ಮಿಗಿಲಾಗಿ ವರ್ತಮಾನದ ಶ್ರೇಷ್ಠ ಚಿಂತಕ.

ಮಾಳ ಪ್ರಭಾಕರ ಜೋಶಿ ಕರಾವಳಿ ಜಿಲ್ಲೆಗಳ ಓರ್ವ ಸಾಂಸ್ಕೃತಿಕ ವಕ್ತಾರನಾಗಿ, ಅಖಿಲ ಕರ್ನಾಟಕ ವ್ಯಾಪ್ತಿಯ ಪ್ರಬುದ್ಧ ವಿಮರ್ಶಕನಾಗಿ, ಕನ್ನಡದ ಅನೇಕ ಹಿರಿಯ ವಿದ್ವಾಂಸರ ಪ್ರಶಂಸೆಗೆ ಪಾತ್ರರಾದ ಸಾಧಕರು. ಶೇಣಿ ಸಾಮಗರ ಬಳಿಕದ ತಲೆಮಾರಿನ ಶ್ರೇಷ್ಠ ಅರ್ಥದಾರಿ, ಶಿವರಾಮ ಕಾರಂತರ ನಂತರ ಯಕ್ಷಗಾನ ರಂಗದ ಸಂಶೋಧನೆ, ಅಧ್ಯಯನ ಮತ್ತು ವಿಚಾರ-ವಿನಿಮಯಗಳಿಗಾಗಿ ದೇಶ-ವಿದೇಶಗಳಲ್ಲಿ ಮಾನ್ಯರಾದ

ಬಹುಶ್ರುತ ವಿದ್ವಾಂಸ. ನೋಡ ನೋಡುತ್ತಿದ್ದಂತೆ ಎಪ್ಪತ್ತು ತುಂಬಿ ಮುಂದಡಿಯಿಡುತ್ತಿರುವ ಜೋಶಿಯವರ ಈ ಸುದೀರ್ಘ ಪಯಣ ಆರೇಳು ದಶಕಗಳ ಯಕ್ಷಗಾನ ಇತಿಹಾಸ ದೊಂದಿಗೆ ಹಾಸು ಹೊಕ್ಕಾಗಿರುವುದನ್ನು ಕಂಡರೆ, ಯಕ್ಷಗಾನ ಅದರಲ್ಲೂ ತಾಳಮದ್ದಳೆ ಲೋಕದ ಅಪೂರ್ವ ಸಂಗತಿಗಳು ನಮ್ಮ ಅರಿವಿಗೆ ಬಾರದಿರದು.

**ಬಾಲ್ಯ – ಜೀವನ**

ಪ್ರಭಾಕರ ಜೋಶಿಯವರ ತಂದೆ ನಾರಾಯಣ ಜೋಶಿ. ತಾಯಿ ಲಕ್ಷ್ಮೀಬಾಯಿ ಯಾನೆ ಚಂದ್ರಾವತಿ. ಕಾರ್ಕಳ ತಾಲೂಕಿನ ಮಾಳದಲ್ಲಿ ಫೆಬ್ರವರಿ 6, 1946ರಲ್ಲಿ ಅವರ ಜನನ. ನಾಲ್ವರು ಸಹೋದರರಲ್ಲಿ ಮೂರನೆಯವರು. ನಾರಾಯಣ ಜೋಶಿಯವರು ವೇದ ಹಾಗೂ ಸಂಸ್ಕೃತ ಸಾಹಿತ್ಯದ ವಿದ್ವಾಂಸರು. ಲಕ್ಷ್ಮೀಬಾಯಿಯವರ ತಂದೆ ಅನಿರುದ್ಧ ಮರಾಠೆ ತೆಂಕು ಮತ್ತು ಬಡಗು ಎರಡೂ ಶೈಲಿಗಳನ್ನು ಬಲ್ಲ ಉತ್ತಮ ಮದ್ದಳೆಗಾರರು. ಸಹಜವಾಗಿಯೇ ತಂದೆ – ಅಜ್ಜಂದಿರ ಪ್ರಭಾವದಿಂದ ಪ್ರಭಾಕರ ಜೋಶಿ ಯಕ್ಷಗಾನ ಮತ್ತು ಸಾಹಿತ್ಯದ ಕಡೆಗೆ ಆಕರ್ಷಿತರಾದರು. ಇನ್ನೂ ಹತ್ತರ ಹರೆಯದ ಹುಡುಗನಾಗಿದ್ದಾಗಲೇ ಅವರು ದೊಡ್ಡ ಕೂಟದಲ್ಲಿ ಅರ್ಥ ಹೇಳಿದ್ದರಂತೆ! ಆಗ ಅವರು ಓದುತಿದ್ದುದು ನಾಲ್ಕನೇ ತರಗತಿ. ಮಾಳ, ಉಜಿರೆ, ಕಾರ್ಕಳಗಳಲ್ಲಿ ವಿದ್ಯಾಭ್ಯಾಸದ ವಿವಿಧ ಮಜಲುಗಳನ್ನು ಪೂರೈಸುತ್ತಿದ್ದಂತೆಯೇ ಕಾರ್ಕಳ ಪರಿಸರದಲ್ಲಿ ನಡೆಯುತ್ತಿದ್ದ ಹಲವು ತಾಳಮದ್ದಳೆ ಕೂಟಗಳಲ್ಲಿ ಭಾಗವಹಿಸುತ್ತಾ ಜೋಶಿ ಅರ್ಥದಾರಿಯಾಗಿ ಬೆಳೆದರು; ಜೊತೆಗೆ ಬಯಲಾಟದಲ್ಲೂ ವೇಷ ಮಾಡತೊಡಗಿದರು. ಯಕ್ಷಗಾನದ ಮೇಲಿನ ಆಸಕ್ತಿ ಎಷ್ಟಿತ್ತೆಂದರೆ ಒಂದು ಹಂತದಲ್ಲಿ ಅವರು ಮೇಳ ಸೇರಲೂ ಮುಂದಾಗಿದ್ದರು. ಆಗ 'ಈ ದಶಾವತಾರ ನಿನಗೆ ಬೇಡ' ಎಂದು ಅವರನ್ನು ತಡೆದವರು ಸುರತ್ಕಲ್ ಮೇಳ ಕಸ್ತೂರಿ ವರದರಾಯ ಪೈಗಳು.

ಪಿ.ಯು.ಸಿ ಮತ್ತು ಪದವಿ ತರಗತಿಗಳಲ್ಲಿ ವಾಣಿಜ್ಯ ಶಾಸ್ತ್ರವನ್ನು ಆರಿಸಿಕೊಂಡಿರುವ ಜೋಶಿ ಕಾರ್ಕಳ ಬೋರ್ಡ್ ಹೈಸ್ಕೂಲಿನಲ್ಲಿ ಆಧ್ಯಾಪಕರಾದರು. ತಮ್ಮ ಬಿ.ಕಾಂ. ವ್ಯಾಸಂಗ ಮುಗಿಸಿದ ತಕ್ಷಣ ಸುರತ್ಕಲ್ ಗೋವಿಂದದಾಸ್ ಕಾಲೇಜಿನಲ್ಲಿ ಉಪನ್ಯಾಸಕರಾಗಿ ಸೇರಿದರು. ವೃತ್ತಿಯೊಂದಿಗೆ ಆಟ, ತಾಳಮದ್ದಳೆ, ಭಾಷಣ, ಬರವಣಿಗೆ ಹೀಗೆ ನಿರಂತರ ಕ್ರಿಯಾಶೀಲರಾಗಿ ಅವರ ಸಾರ್ವಜನಿಕ ಸಂಪರ್ಕ ಬೆಳೆಯಿತು. ಸುರತ್ಕಲ್ ಬಿಟ್ಟು 1972ರಲ್ಲಿ ಮಂಗಳೂರಿನ ಬೆಸೆಂಟ್ ಮಹಿಳಾ ಪದವಿಪೂರ್ವ ಕಾಲೇಜಿನಲ್ಲಿ ವಾಣಿಜ್ಯ ಉಪನ್ಯಾಸಕರಾಗಿ ಸೇರಿದ ಅವರು ಅಲ್ಲೇ ಪ್ರಾಂಶುಪಾಲರಾಗಿ ಭಡ್ತಿ ಪಡೆದು ಸತತ ಮೂವತ್ತೆರಡು ವರ್ಷಗಳ ಸೇವೆಯೊಂದಿಗೆ 2004ರಲ್ಲಿ ನಿವೃತ್ತರಾದರು. ಬಳಿಕ ಹಲವು ಕಡೆ ಅತಿಥಿ ಉಪನ್ಯಾಸಕರಾಗಿ ಕಾರ್ಯನಿರ್ವಹಿಸಿದರು. ಪ್ರಸ್ತುತ ಹತ್ತು ವರ್ಷಗಳಿಂದ ಯಕ್ಷಗಾನ ವಲಯದಲ್ಲಿ ಅವರದು ಬೀಸುನಡೆ.

**ಅರ್ಥಗಾರಿಕೆಯ ಹೊಸಮಟ್ಟು**

ಬಯಲಾಟಕ್ಕೆ ತಿಟ್ಟು - ಮಟ್ಟುಗಳಿದ್ದಂತೆ ತಾಳಮದ್ದಳೆಗೆ ಅದಿಲ್ಲ. ಆದರೂ ಹಳೆಯ ಜಾಡಿನಲ್ಲೇ ಹೊರಳುತ್ತಿದ್ದ ಯಕ್ಷಗಾನ ಕೂಟಗಳಿಗೆ ಒಂದು ಹೊಸ ಕ್ಷಿತಿಜ ತೆರೆದುಕೊಟ್ಟವರು ಶೇಣಿ ಗೋಪಾಲಕೃಷ್ಣ ಭಟ್ಟರು. 'ತಾಳಮದ್ದಳೆ ತಣ್ಣಗಾಗುತ್ತಿದೆಯೇ?' ಎಂಬ ಆತಂಕವನ್ನು ನಿವಾರಿಸಿದ್ದ ಪ್ರಸಿದ್ಧರ ಕೂಟಕ್ಕೆ ಅವರು ಹಿರೇಮಣಿಯಾಗಿದ್ದರು. ಶೇಣಿ, ಸಾಮಗ, ಪೆರ್ಲ, ಕಾಂತ ರೈ, ತೆಕ್ಕಟ್ಟೆಯಂಥವರು ಮೆರೆಯುತ್ತಿದ್ದ ಕಾಲದಲ್ಲೇ ಅದೇ ಸಾಲಿನಲ್ಲಿ ಕಿರಿಯನಾಗಿ ಪ್ರವೇಶ ಪಡೆದ ಜೋಶಿ ಅವರೆಲ್ಲರೆದುರು ನಿರ್ಭಿಡೆಯಿಂದ ಮುಖ್ಯ ಪಾತ್ರಗಳನ್ನು ನಿರ್ವಹಿಸಿ ಭರವಸೆ ಮೂಡಿಸಿದ್ದರು. ಹಿರಿಯ ತಲೆಮಾರಿನ ಸಮರ್ಥ ಉತ್ತರಾಧಿಕಾರಿಯಾಗಿ ಅರ್ಥಗಾರಿಕೆಯ ಹೊಸ ಮಟ್ಟೊಂದನ್ನು ರೂಪಿಸಿದರು. ಯಕ್ಷಗಾನ ಪ್ರಸಂಗ-ಪ್ರಸಂಗಕರ್ತನ ಆಶಯ, ಪಾತ್ರಸೃಷ್ಟಿ, ಸಂವಹನ, ತರ್ಕ, ಭಾವಾಭಿವ್ಯಕ್ತಿ, ಅರ್ಥ ವಿಸ್ತಾರಗಳಿಂದ ಎದುರಾಳಿಯನ್ನು ತನ್ನ ಜೊತೆಗೆ ಕರೆದೊಯ್ಯುತ್ತಾ ಮಾತಿನ ಮಹಾರೂಪಕವನ್ನು ಅನಾವರಣಗೊಳಿಸುವ ಅಸಾಧಾರಣ ಪ್ರತಿಭೆ ಅವರದು.

ತಾನು ವಹಿಸಿದ ಪಾತ್ರದ ಸುತ್ತ ಹೊಸ ಸಾಧ್ಯತೆಗಳ ಹುಡುಕಾಟ ನಡೆಸುವುದು ಜೋಶಿಯವರ ವೈಶಿಷ್ಟ್ಯ. ನವನವೀನ ಕಲ್ಪನೆ ಮತ್ತು ಹೊಸ ಅರ್ಥಗಳ ಅರಸುವಿಕೆಗೆ ಪ್ರಾಶಸ್ತ್ಯ ನೀಡುವ ಅವರಿಗೆ ತತ್ವಶಾಸ್ತ್ರದ ಅಧ್ಯಯನ, ತಾರ್ಕಿಕತೆಗಳು ಪಾತ್ರಸೃಷ್ಟಿಗೆ ಪೂರಕವಾದವು. 'ಕರ್ಣ, ಅರ್ಜುನ, ಕೌರವ, ಕೃಷ್ಣ, ಪರಶುರಾಮ, ರಾವಣ, ವೀರಮಣಿ, ಮಾಗಧ..' ಮೊದಲಾದ ಪಾತ್ರಗಳ ಅಂತರಾಳವನ್ನು ಕೆದಕಿ ಅರ್ಥವಿಸುವ ಅವರ ಮಾತುಗಾರಿಕೆಗೆ ವ್ಯಾಪಕ ಓದಿನ ಒಸ್ನೆಲೆಯಿದೆ. ಪುರಾಣವಲ್ಲದೆ, ತತ್ವ, ಮೀಮಾಂಸೆ ಮತ್ತು ದರ್ಶನಶಾಸ್ತ್ರಗಳ ಅಭ್ಯಾಸ, ಲೋಹಿಯಾ, ಕಾರ್ಲ್‌ಮಾರ್ಕ್ಸ್, ಕೌಟಿಲ್ಯ, ಕುಮಾರಿಲ ಭಟ್ಟರನ್ನೂ ತಿಳಿದುಕೊಂಡಿರುವುದು ಅವರ ಅರ್ಥಗಾರಿಕೆಯಲ್ಲಿ ಸ್ಪಷ್ಟವಾಗುತ್ತದೆ. ಕುವೆಂಪು, ಕಾರಂತ, ಭೈರಪ್ಪ, ಅನಂತಮೂರ್ತಿಯರ ಕಾದಂಬರಿಗಳ ಪ್ರಭಾವವೂ ಅಲ್ಲಲ್ಲಿ ಇಣುಕು ಹಾಕುತ್ತಿರುವುದು ಇತರ ಅರ್ಥದಾರಿಗಳಿಂದ ಅವರನ್ನು ಪ್ರತ್ಯೇಕಿಸುವ ಅಂಶಗಳು.

ಬರಹಗಾರರಾಗಿ, ಚಿಂತಕರಾಗಿ ಪ್ರಭಾಕರ ಜೋಶಿಯವರದು ಅಸೀಮ ಸಾಧನೆ. ಯಕ್ಷಗಾನದ ಸಂಶೋಧಕ-ವಿಮರ್ಶಕರಾಗಿ ಅವರು ಮಾಡಿದ ಅಕ್ಷರ ಸೇವೆ ಇತರರಿಗೆ ಮಾರ್ಗದರ್ಶಕವಾದವುಗಳು. ಇವರ ವಿಮರ್ಶಾ ಕೃತಿಗಳು ಯಕ್ಷ ಲೋಕದ ರತ್ನಗಳು. ಅವರು ಬರೆದ ಬಿಡಿಬರಹಗಳು, ವ್ಯಕ್ತಿಚಿತ್ರ, ಕವಿತೆಗಳು ಮತ್ತು ವಿಚಾರ ಪತ್ರಗಳು ಅನೇಕ. ತಮ್ಮ ಲೇಖನಗಳಲ್ಲಿ ಹೇಳಬೇಕಾದುದನ್ನು ನೇರವಾಗಿ, ಕೆಲವೇ ಪದಗಳಲ್ಲಿ ಪ್ರಕಟಪಡಿಸುವ ಕೌಶಲ್ಯ ಅವರದು. ಅವರ ಕೃತಿಗಳೆಲ್ಲಾ ಆಯಾಯ ಕ್ಷೇತ್ರದ ನೇರ ಹಾಗೂ ಪ್ರಾಯೋಗಿಕ ಜ್ಞಾನದಿಂದ ರಚಿತವಾಗಿವೆ. ಈ ನಿಟ್ಟಿನಲ್ಲಿ ಅವರೊಬ್ಬ ವಾಗರ್ಥ ವೈಯ್ಯಾಕರಣಿ ಎನ್ನಬಹುದು.

**ಸಮರ್ಥ ಸಂಘಟಕ**

ವಿದ್ಯಾರ್ಥಿ ದೆಸೆಯಲ್ಲಿಯೇ ಜೋಶಿ ಸಂಘಟನಾ ಚತುರರು. ದೊಡ್ಡ ಸೆಟ್ಟಿನ ತಾಳಮದ್ದಳೆ ಸಂಘಟಕರಾಗಿ ಹಲವಾರು ಸಂಘ–ಸಂಸ್ಥೆಗಳಿಗೆ ಅವರು ಮಾರ್ಗದರ್ಶಕ. ಮೂವತ್ತು ವರ್ಷ ಶೇಣಿಯವರ ಸಹವರ್ತಿಯಾಗಿದ್ದ ಅವರು ಹಳೆಯ ಮತ್ತು ಹೊಸ ತಲೆಮಾರಿನ ನಡುವೆ ಕೊಂಡಿಯಂತಿದ್ದವರು. ನಾಡಿನ ಸಾಹಿತ್ಯ – ಸಾಂಸ್ಕೃತಿಕ ಸಂಘಟನೆಯಲ್ಲಿ ಅವರದು ಪ್ರಮುಖ ಪಾತ್ರ.

ಪೊಳಲಿ ಶಾಸ್ತ್ರಿ ಸ್ಮಾರಕ ಸಮಿತಿ, ಕನ್ನಡ ಸಂಘ ಮಂಗಳೂರು, ಜಿಲ್ಲಾ ಪದವಿ ಪೂರ್ವ ಅಧ್ಯಾಪಕರ ಸಂಘ, ಬಲಿಪ ಅಮೃತ ಭವನ ಸಮಿತಿ, ಹವ್ಯಾಸಿ ಪಟ್ಲ ಫೌಂಡೇಶನ್ ಮೊದಲಾದ ಸಂಘಟನೆಗಳಲ್ಲಿ ಪ್ರಮುಖ ಪದಾಧಿಕಾರಿಯಾಗಿ ವಿವಿಧ ಕಾರ್ಯಕ್ರಮಗಳಲ್ಲಿ ಅವರು ಸಕ್ರಿಯರು. ಮುನ್ನುಡಿ, ಗ್ರಂಥ ಸಮೀಕ್ಷೆ, ಆಹ್ವಾನ ಪತ್ರಿಕೆ – ಮಾನಪತ್ರ ರಚನೆ, ಅಭಿನಂದನಾ ಭಾಷಣ, ಕಾರ್ಯಕ್ರಮ ನಿರೂಪಣೆ, ವಿಷಯ ಕೇಂದ್ರಿತ ಉಪನ್ಯಾಸ, ವಿಚಾರಸಂಕಿರಣಗಳಿಗೆ ಹೊಸ ಮಾದರಿ ಹಾಕಿಕೊಟ್ಟವರು. ಯಕ್ಷಗಾನದ ಪ್ರಥಮ ಜಾಲತಾಣ www.yakshagana.com ಇದರ ಸ್ಥಾಪಕರು ಮತ್ತು ಸಂಪಾದಕರೂ ಅವರೇ. ನೂರಕ್ಕೂ ಮಿಕ್ಕಿ ಧ್ವನಿಸುರುಳಿ ಮತ್ತು ಸಿಡಿಗಳಲ್ಲಿ ಅರ್ಥ ಹೇಳಿದ್ದಾರೆ. ಉಡುಪಿಯ ಆರ್.ಆರ್.ಸಿ., ಯಕ್ಷಗಾನ ಕೇಂದ್ರ ಮಂಗಳೂರು ವಿಶ್ವವಿದ್ಯಾನಿಲಯ, ಯಕ್ಷಗಾನ ಕಲಾರಂಗ ಉಡುಪಿ, ಆಳ್ವಾಸ್ ಶಿಕ್ಷಣ ಪ್ರತಿಷ್ಠಾನ ಇತ್ಯಾದಿಗಳಿಗೆ ಸಲಹೆಗಾರರಾಗಿಯೂ ಅವರ ಸಹಕಾರ ಸ್ಮರಣೀಯ.

**ತೃಪ್ತ ಸಂಸಾರ**

ಜೋಶಿಯವರದು ಚಿಕ್ಕದಾದರೂ ಚೊಕ್ಕ ಸಂಸಾರ. ಅವರ ಪತ್ನಿ ಪ್ರೊ. ಸುಚೇತಾ ಜೋಶಿ ಎಡಪದವು ವಿವೇಕಾನಂದ ಪದವಿ ಪೂರ್ವ ಕಾಲೇಜಿನಲ್ಲಿ ರಾಜ್ಯ ಶಾಸ್ತ್ರ ಉಪನ್ಯಾಸಕಿಯಾಗಿ ನಿವೃತ್ತರಾದವರು. ಚಿತ್ಪಾವನಿ ಭಾಷೆ ಶಬ್ದಕೋಶ ತಯಾರಿಯಲ್ಲಿ ನಿರತರಾಗಿರುವ ಅವರು ಮಹಿಳಾ ಕೂಟದ ಅರ್ಥದಾರಿಯೂ ಹೌದು. ಈ ದಂಪತಿಗೆ ಇಬ್ಬರು ಹೆಣ್ಣು ಮಕ್ಕಳು. ಶ್ವೇತಾ ಸೂರ್ಯನಾರಾಯಣ ಮತ್ತು ಸ್ವಾತಿ ಕಾರ್ತಿಕ್ ಭಟ್; ಉದ್ಯೋಗಸ್ಥರು. ಇಬ್ಬರೂ ಮದುವೆಯಾಗಿ ಅಮೇರಿಕಾದಲ್ಲಿ ನೆಲೆಸಿದ್ದಾರೆ.

**(ಉದಯವಾಣಿ, 2017)**



# ಯಕ್ಷಗಾನದ ಬಹುರೂಪಿ



ಕೆ. ಶ್ರೀಕರ ಭಟ್

ಡಾ. ಎಂ. ಪ್ರಭಾಕರ ಜೋಶಿಯವರು ಒಳ್ಳೆಯ ಮಾತುಗಾರ, ಭಾಷಣಕಾರ, ಅರ್ಥದಾರಿ, ಅಸಾಧಾರಣ ದರ್ಜೆಯ ಲೇಖಕ, ವಿಮರ್ಶಕ, ಉಪನ್ಯಾಸಕಾರ, ವಾಗ್ಮಿ, ಚಿಂತಕ, ಕಲೆ, ಸಾಹಿತ್ಯ, ಸಂಸ್ಕೃತಿ, ತತ್ವಜ್ಞಾನ –ಮುಂತಾಗಿ ಬಹುಮುಖಿ ಆಸಕ್ತಿ, ಬಹುಮುಖಿ ಅಧ್ಯಯನ – ಅನುಭವ ಹೊಂದಿದ ದಕ್ಷ ಸಂಘಟಕ, ಸಂಯೋಜಕ, ಸಂಪನ್ಮೂಲ ವ್ಯಕ್ತಿ.

ಹುಟ್ಟು ಪ್ರತಿಭಾಶಾಲಿ ಜೋಶಿಯವರ ಯಶಸ್ವಿನ ಹಿಂದೆ ಇರುವುದು ಅಧ್ಯಯನ ಪರಿಶ್ರಮ ಇವೆರಡೇ. ಯಕ್ಷಗಾನ ರಂಗದಲ್ಲಿ ಜೋಶಿಯವರದ್ದು ಅಕ್ಷರಶಃ ಸ್ವಯಂ ನಿರ್ಮಿತ ವ್ಯಕ್ತಿತ್ವ. ಶಾಸ್ತ್ರಿ, ಸಾಮಗ, ಶೇಣಿ, ದೇರಾಜೆ, ಪೆರ್ಲ ಮುಂತಾದ ದಿಗ್ಗಜರ ಅರ್ಥಗಳನ್ನು ಮತ್ತೆ ಮತ್ತೆ ಆಲಿಸುತ್ತಾ, ನೂರಾರು ಕೂಟಗಳಲ್ಲಿ ಪಾಲ್ಗೊಂಡು ರಣರಂಗದಲ್ಲೆ ಶಸ್ತ್ರಾಭ್ಯಾಸ ಮಾಡಿದವರು. ಒಳ್ಳೆಯ ಸ್ಮರಣ ಶಕ್ತಿ, ಗ್ರಹಣ ಸಾಮರ್ಥ್ಯ, ವಾದವನ್ನು ಮಂಡಿಸುವ – ಖಂಡಿಸುವ ತರ್ಕ ನೈಪುಣ್ಯ ಜೋಶಿಯವರ ದೊಡ್ಡ ಬಲ. ಅರ್ಥಗಾರಿಕೆಯಲ್ಲಿ ಭಾವುಕತೆಗಿಂತ ವಿಚಾರಕ್ಕೆ ಆದ್ಯತೆ. ಯಾರ ಅನುಕರಣೆಯನ್ನೂ ಮಾಡುವವರಲ್ಲ.

ತಾಳಮದ್ದಳೆ ಕೂಟಗಳ ಸಂಘಟನೆ, ನಿರ್ವಹಣೆಯಲ್ಲಿ ವಯಸ್ಸಿನಲ್ಲಿ ಕಿರಿಯರಾದರೂ ಹಿರಿಯ ಅರ್ಥದಾರಿಗಳಿಗೂ ಮಾರ್ಗದರ್ಶಕರಂತೆ ಇದ್ದವರು. ಕೂಟದಲ್ಲಿ ಸಮಯಪ್ರಜ್ಞೆ, ಶಿಸ್ತು, ಶಿಷ್ಟಾಚಾರ ಮೀರಬಾರದು. ಪ್ರಸಂಗದ ಚೌಕಟ್ಟನ್ನು ದಾಟಿ ಹೋಗಬಾರದು. ತಾಳಮದ್ದಳೆ ಒಂದು 'ಟೀಂ ವರ್ಕ್' ಎಂದು ದೃಢವಾಗಿ ನಂಬಿದವರು. ಈ ವಿಷಯಗಳಲ್ಲಿ ನಮ್ಮ ಜೋಶಿ 'ಎರಡನೇ ಬಾಲಕೃಷ್ಣ ರಾಯರು' ಎಂದು ಶೇಣಿಯವರು ತಮಾಷೆಯಾಗಿ ಹೇಳುತ್ತಿದ್ದುದನ್ನು ಕೇಳಿದ್ದೇನೆ. ಜೋಶಿಯವರು ಕೂಟಗಳಲ್ಲಿ ಹೊಂದಾಣಿಕೆಗೆ ಸದಾ ಸಿದ್ಧ. ಯಾರನ್ನೇ ಆದರೂ ಮೆಟ್ಟಿ ನಿಲ್ಲಬಲ್ಲ ಸಾಮರ್ಥ್ಯ ಇದ್ದರೂ ಅದನ್ನು ಅವರು ಪ್ರಯೋಗಿಸುವುದು ಅಪರೂಪ.

**ರೆಡಿ ರೆಕನರ್**

ಯಕ್ಷಗಾನ ತಾಳಮದ್ದಳೆ ರಂಗದಲ್ಲಿನ ವಿವಿಧ ವಿಭಾಗಗಳು, ವ್ಯಕ್ತಿ ವಿಷಯ, ಪ್ರಸಂಗ ಮಾಹಿತಿ, ಪೂರ್ವಾಪರ, ಕಲಾವಿದರ ಪರಿಚಯ, ಅವರ ವ್ಯವಸಾಯ, ಹಿನ್ನೆಲೆ ಮುಂತಾದ ವಿಷಯಗಳಲ್ಲಿ ಈ ಜೋಶಿ ನಡೆದಾಡುವ ಸಮಗ್ರ ಮಾಹಿತಿ ಕೋಶ–ರೆಡಿ ರೆಕನರ್. ಯಕ್ಷಗಾನ ರಂಗದ ನೇಪಥ್ಯ, ಮೇಳಗಳ ಖಾಸಗಿ ಸಂಗತಿಗಳು, ಅಲ್ಲಿನ ರಾಜಕೀಯ, ಕೌಟುಂಬಿಕ ಮಾಹಿತಿ, ಕಲಾವಿದರ ಗುಣಾವಗುಣ, ವಿಕ್ಷಿಪ್ತತೆ, ತೆವಲುಗಳು, ದೊಡ್ಡವರೆಂದು ಮಾನ್ಯರಾಗಿರುವವರ ಸಣ್ಣತನಗಳು; ಅವರು ನಡುವಣ ವೈರ, ಮತ್ಸರ, ಧೂರ್ತತನ ಎಲ್ಲ ವಿವರಗಳೂ ಅವರ ಸಂಗ್ರಹದಲ್ಲುಂಟು.

ಜೋಶಿ ಸಂಭಾಷಣ ಚತುರ. ಕಲ್ಲನ್ನು ಮಾತನಾಡಿಸಬಲ್ಲ ವಾಚಾಳಿ. ಸಂಭಾಷಣೆಗೆ ತೊಡಗಿದರೆ, ಅವರ ಬತ್ತಳಿಕೆ ಅಕ್ಷಯ ತೂಣೀರ. ರಂಗಾನುಭವದ ಸರಸ–ವಿರಸ, ಅಲ್ಲಿನ ಸಿಹಿ–ಕಹಿ ಅನುಭವಗಳನ್ನು ಹಾಸ್ಯಭರಿತ ಶೈಲಿಯಲ್ಲಿ ಹೇಳುವುದನ್ನು ಕೇಳುವುದೇ ಒಂದು ಆಪ್ಯಾಯಮಾನ ಅನುಭವ. ಮಾತಿಗೆ ಹೊರಟರೆ ಹಲಸಿನ ಹಪ್ಪಳ, ದಿವಿ ಹಲಸಿನ ಪಲ್ಯ, ಪತ್ರೊಡೆ, ಆಟದ ಟೆಂಟಿನ ಬಳಿ ಕರಿದು ಕೊಡುವ ಗೆಣಸಿನ ಪೋಡಿ, ಚರುಮುರಿ, ಪಚಡಿಯಿಂದ ತೊಡಗಿ; ಕಾವ್ಯ, ಸಾಹಿತ್ಯ, ಪ್ರಚಲಿತ ವಿದ್ಯಮಾನ, ರಾಜಕೀಯ, ಪುರಾಣ, ಉಪನಿಷತ್ತು, ದರ್ಶನ, ಪರಬ್ರಹ್ಮ ಚಿಂತನೆಯ ತನಕವೂ ಅದು ಪುಂಖಾನುಪುಂಖ.

ಜೋಶಿಯವರ ಜೀವನ ಸರಳ, ಚಿಂತನೆಗಳು ಉದಾತ್ತ, ಅಧ್ಯಯನ ನಿರಂತರ. ಸಂಸ್ಕೃತ ಕಾವ್ಯ, ದರ್ಶನಗಳ ಪರಿಚಯವೂ ಸಾಕಷ್ಟು ಇಂಗ್ಲಿಷ್– ಕನ್ನಡ ಭಾಷೆಯ ಸಾಹಿತ್ಯವನ್ನು, ಸಮಕಾಲೀನ ವಿದ್ಯಮಾನಗಳನ್ನು ಚೆನ್ನಾಗಿ ತಿಳಿದುಕೊಂಡವರು. ರಾಷ್ಟ್ರೀಯತೆ ಬೇಕೆನ್ನುವವರು. ಪ್ರಜಾಪ್ರಭುತ್ವ ಸಮಾನತೆಯ ತತ್ವಗಳಲ್ಲಿ, ಸಮಾಜವಾದಿ ಚಿಂತನೆಗಳಲ್ಲಿ ಒಲವುಳ್ಳವರು. ಸಂಪ್ರದಾಯ ಶರಣರಲ್ಲ, ವಿಚಾರಶೀಲ. ಯಾವ 'ಇಸಂ' ಗಳನ್ನೂ ಒಪ್ಪಿಕೊಳ್ಳುವವರಲ್ಲ. ಸಾಮಾಜಿಕ, ಸಾರ್ವಜನಿಕ, ಸಾಂಸ್ಕೃತಿಕ ವಿಚಾರಗಳಲ್ಲಿ ಎಚ್ಚರ ಕಾಯ್ದುಕೊಂಡವರು. ಮೌಢ್ಯಗಳನ್ನು ಯಾವ ಕಾರಣಕ್ಕೂ ಸಹಿಸರು. ತಮ್ಮ ವಿಚಾರ ಅಭಿಪ್ರಾಯಗಳನ್ನು ಪ್ರಕಟಪಡಿಸುವಲ್ಲಿ ಯಾರ ಮುಲಾಜೂ ಇಲ್ಲ. ವೈಚಾರಿಕ ಸಂವಾದ–ಸಂಘರ್ಷ ಎರಡು ಅವರಿಗೆ ಪ್ರಿಯ.

**ಸಮಗ್ರ ವಿಷಯ ಸಾಮಗ್ರಿ**

ಜೋಶಿಯವರ ವ್ಯಕ್ತಿತ್ವ ಸಂಕೀರ್ಣ. ಅವರು ಎಷ್ಟೋ ಸಲ ಆಸ್ತಿಕರ ಮಧ್ಯೆ ನಾಸ್ತಿಕನಂತೆ, ನಾಸ್ತಿಕರ ನಡುವೆ ಆಸ್ತಿಕನಂತೆ ಕಾಣುತ್ತಾರೆ. ಸ್ವಭಾವತಃ ಅತ್ಯಂತ ಸಂವೇದನಾ ಶೀಲ. ತಾಳಮದ್ದಳೆ ಅರ್ಥದಾರಿಗಳಲ್ಲಿ ಅಂಥವರು ಕಡಿಮೆ. ಜೋಶಿಯವರಂತೆ ಓದಿ ಕೊಂಡವರೂ ಕಡಿಮೆಯೆ. ಸಾಮಗರ ವಿದ್ವತ್ತು, ದೇರಾಜೆಯವರು ನಾಜೂಕು, ಜೋಶಿಯವರ ಓದು ತಾಳಮದ್ದಳೆಗೆ ತುಸು ಹೆಚ್ಚಾಯಿತೋ ಎಂದು ನನಗೆ ಎಷ್ಟೋ ಸಲ ಕಂಡದ್ದಿದೆ. ತಾಳಮದ್ದಳೆ ಕೂಟಗಳಲ್ಲಿ ನಾಯಕ ಪ್ರತಿನಾಯಕ ಪಾತ್ರಗಳನ್ನು ಸರಾಗವಾಗಿ ನಿರ್ವಹಿಸುತ್ತಾರಾದರೂ ರಸದ ಉತ್ತುಂಗವನ್ನು ತಲುಪಲು ಸಾಧ್ಯವಾಗದ್ದೂ ವಿಪರ್ಯಾಸವೇ. ಅವರು  ಪ್ರತಿಭೆ, ವ್ಯವಸಾಯ ನಾಲ್ಕಾರು ವಿಭಾಗಗಳಿಗೆ ವಿಸ್ತರಿಸಿದ್ದು ಅದಕ್ಕೆ ಕಾರಣವಿರಬೇಕೆನಿಸುತ್ತದೆ. ಎಷ್ಟೋ ಸಲ ಬರಹಗಳಲ್ಲಿ – ವಿಮರ್ಶೆಗಳಲ್ಲಿ ಕಾಣುವ ಉತ್ಕೃಷ್ಟ ಗುಣಮಟ್ಟ ಅವರ ಅರ್ಥದಲ್ಲಿ ಮೂಡುವುದಿಲ್ಲ ಎಂಬುದು ತಜ್ಞರ ಅಭಿಪ್ರಾಯ.

ತಾಳಮದ್ದಳೆ ಕುರಿತ ವಿಚಾರ ವಿಮರ್ಶೆಗಳು, ಗೋಷ್ಠಿಗಳು ಜೋಶಿಯವರಿಲ್ಲದೆ ನಡೆಯುವುದು ಅಪರೂಪ. ಸಮಗ್ರವಾದ ವಿಷಯ ಸಾಮಗ್ರಿ ಅವರಲ್ಲಿದೆ. ಯಕ್ಷಗಾನ ರಂಗದ ಕಲಾವಿದರನ್ನು, ಒಜ್ಜೊಬ್ಬರನ್ನು, ಆಯ್ದು ಉದಯವಾಣಿಯ 'ಲಲಿತರಂಗ' ಪುರವಣಿಯಲ್ಲಿ ಪರಿಚಯಿಸಿದ್ದಾರೆ. ತಾಳಮದ್ದಳೆಯ ಬಗೆಗೆ ಶಾಸ್ತ್ರೀಯವಾಗಿ, ಅಕಾಡೆಮಿಕ್ ಆಗಿ ಬರೆಯಲು ಪ್ರಾರಂಭಿಸಿದ ಹಿರಿಮೆಯೂ ಅವರಿಗೇ ಸಲ್ಲಬೇಕು. ತಾಳಮದ್ದಳೆ, ಯಕ್ಷಗಾನ ಕುರಿತ ಬರವಣಿಗೆಯಲ್ಲಿ ವಿದ್ವಾಂಸರಾದ ಮುಳಿಯ ತಿಮ್ಮಪ್ಪಯ್ಯ, ಕುಕ್ಕಿಲ ಕೃಷ್ಣ ಭಟ್, ಶಿವರಾಮ ಕಾರಂತರ ಪ್ರಭಾವ, ಪ್ರೇರಣೆ ಎರಡೂ ಕಾಣುತ್ತದೆ. ಅವರು ಮಾಡಿರುವ ದಾಖಲಾತಿ ಬಹಳ ಬೆಲೆ ಬಾಳುವಂಥದ್ದು.

ಯಕ್ಷಗಾನದ ಕುರಿತು ನಡೆಸುತ್ತಾ ಹೋದ ಅಧ್ಯಯನದ ದೆಸೆಯಿಂದ ಸಹಜ ವಾಗಿಯೇ ಅವರು ತತ್ವಶಾಸ್ತ್ರ–ದರ್ಶನಗಳತ್ತ ಆಕರ್ಷಿತರಾದರು. ಈಚೆಗೆ ಬರೆದ 'ತತ್ವ ಮನನ' ಎಂಬ ಕೃತಿಯಲ್ಲಿ ಭಾರತೀಯ ದರ್ಶನಗಳ ಸಾರಾಂಶವನ್ನು ಪ್ರಬುದ್ಧವಾಗಿ ಸಂಗ್ರಹಿಸಿದ್ದಾರೆ. ಈ ನಿಟ್ಟಿನ ಅಧ್ಯಯನದಲ್ಲಿ ಆಸಕ್ತಿ ಇರುವವರಿಗೆ ಇದು ಒಂದು ಕೈಪಿಡಿಯಂತಿದೆ.

ಅರ್ಥಗಾರಿಕೆಯ ಬರಹಗಳು, ಟಿಪ್ಪಣಿಗಳು, ಅಭಿಪ್ರಾಯಗಳು, ವಿಮರ್ಶೆಗಳು ಅವರ ಸೂಕ್ಷ್ಮ ಗ್ರಹಣ ಶಕ್ತಿಗೆ,  ಅವಲೋಕನ ಸಾಮರ್ಥ್ಯಕ್ಕೆ ನಿದರ್ಶನ. ತಾಳಮದ್ದಳೆಯ ಸುವರ್ಣ ಯುಗದಲ್ಲಿ ಅಗ್ರ ಶ್ರೇಣಿಯ ಅರ್ಥದಾರಿಗಳ ಒಡನಾಟ, ಸಾಂಗತ್ಯ ಅವರಿಗೆ ಒದಗಿದ್ದು ಅದಕ್ಕೆ ಒಂದು ಕಾರಣ. ತಾಳಮದ್ದಳೆ ಪ್ರಕಾರವನ್ನು ಕುರಿತು ಡಾ। ಜೋಶಿಯವರು ನಡೆಸಿದ ವ್ಯವಸಾಯ ಈ ನಿಟ್ಟಿನಲ್ಲಿ ನಡೆಸಿದ ಪರಾಮರ್ಶೆ ಯಕ್ಷಗಾನ ರಂಗಕ್ಕೆ ಸಂದ ಒಂದು ದೊಡ್ಡ ಕೆಲಸ. ಈ ದೃಷ್ಟಿಯಿಂದ ರಂಗದ ವ್ಯವಸಾಯಿಗಳೆಲ್ಲರೂ ಅವರಿಗೆ ಸದಾ ಚಿರಋಣಿಗಳು.

**(ಮಂಚಿ ಸಮಾಚಾರ / ಫೆಬ್ರವರಿ 2017)**

# ಯಕ್ಷಗಾನದ ಹಿರಿಮೆ



**ರಾಧಾಕೃಷ್ಣ ಕಲ್ಚಾರ್**

ನಮ್ಮ ಸಾಂಸ್ಕೃತಿಕ ಸಂಪತ್ತುಗಳಲ್ಲೊಬ್ಬರಾದ ಡಾ.ಎಂ. ಪ್ರಭಾಕರ ಜೋಶಿ ನಿರಂತರ ಕ್ರಿಯಾಶೀಲ. ಕಲಾವಲಯದ ಜಾಗೃತ ಪ್ರಜ್ಞೆಯ ಸಂಕೇತ. ಬಹುಮುಖ ಪ್ರತಿಭಾಶಾಲಿಯಾದ ವಿನೋದಪ್ರಿಯ, ಬಹುಭಾಷಾವಿದ. ಅರ್ಥಗಾರಿಕೆ, ಲೇಖನ ವ್ಯವಸಾಯಗಳ ಸಾಧಕ. ಅಭಿಮಾನಿಗಳಿಗೆ ಪೂರ್ಣ ತೆರೆಯದ ಬೆರಗು.

ಒಂದು ಸಂಸ್ಥೆ ಮಾಡಬಲ್ಲಷ್ಟು ಕೆಲಸಗಳನ್ನು ಮಾಡಿಯೂ ಆಧುನಿಕ ಪ್ರಚಾರ ಭರಾಟೆಗಳಲ್ಲಿ ಹಿಂದೆ ನಿಂತವರು. 'ಯಕ್ಷಗಾನ ಪದಕೋಶ'ವೆಂಬ ಕೈಪಿಡಿ ಅವರ ಸಾಧನೆಯ ಶಿಖರ. ಯಕ್ಷಗಾನ ರಂಗಭೂಮಿಯ ಪಾರಿಭಾಷಿಕ ಪದಗಳನ್ನು ಸಂಗ್ರಹಿಸಿ ಅವುಗಳ ವಿಶಿಷ್ಟಾರ್ಥಗಳ ಶೋಧ ನಿಜಕ್ಕೂ ಸವಾಲಿನ ಕೆಲಸ. ಏಕಾಂಗಿಯಾಗಿ ಮಾಡಿದ ಈ ಸಾಧನೆಯನ್ನು, ಅದರ ಮಹತ್ವವನ್ನು ಕಲಾವಲಯ ಇನ್ನೂ ಸರಿಯಾಗಿ ಗುರುತಿಸಿಲ್ಲ. 'ಕೃಷ್ಣ ಸಂಧಾನ' ಪ್ರಸಂಗದ ಸಂಶೋಧನ ಸಂಪ್ರಬಂಧ ಅಧ್ಯಯನಕಾರರೆಲ್ಲ ಪರಾಮರ್ಶಿಸಲೇ ಬೇಕಾದ ಮಹತ್ವ ಪೂರ್ಣ ಕೃತಿ. ಐದು ದಶಕಗಳ ಅನುಭವ ಸಂಪನ್ನತೆಯು ಹೆಪ್ಪುಗಟ್ಟಿದ ಈ ಸಂಪ್ರಬಂಧ ಕಿರಿಯರಿಗೆ

ಮಾರ್ಗದರ್ಶಕ ದೀಪ. ಜೋಶಿಯವರ 'ಜಾಗರ', ಕೇದಗೆ', 'ಮುಡಿ' ಮೊದಲಾದ ವಿಮರ್ಶಾ ಕೃತಿಗಳು ಅಸಾಮಾನ್ಯ ಒಳನೋಟಗಳಿಂದ ಕೂಡಿವೆ. ಯಕ್ಷಗಾನಕ್ಕೆ ಸಂಬಂಧಿಸಿ ಅಧ್ಯಯನಕ್ಕೆ ಮುಂದಾಗುವವರು ಅಭ್ಯಸಿಸಲೇ ಬೇಕಾದ ಗ್ರಂಥಗಳಿವು. ತಮ್ಮ ವಿಮರ್ಶಾ ಕಾರ್ಯಗಳಿಂದ ಯಕ್ಷಗಾನ ಕ್ಷೇತ್ರಕ್ಕೆ ವಿಮರ್ಶಾ ಪಥವೊಂದನ್ನು ನಿರ್ಮಿಸಿಕೊಟ್ಟ ಆಚಾರ್ಯ ಪುರುಷ ಅವರು.

ಅರ್ಥದಾರಿಯಾಗಿ ತನ್ನ ವಿಶಿಷ್ಟ ಶೈಲಿಯಿಂದ ಪ್ರಸಿದ್ಧಿ ಗಳಿಸಿರುವ ಜೋಶಿಯವರ ಅರ್ಥಗಾರಿಕೆಗೆ ತಾಳಮದ್ದಳೆ ರಂಗದಲ್ಲಿ ಪ್ರತ್ಯೇಕ ಸ್ಥಾನವಿದೆ. ದರ್ಶನ ಶಾಸ್ತ್ರಗಳ ವ್ಯಾಪಕ ಅಧ್ಯಯನ ಮಾಡಿದ್ದು ಆ ಕುರಿತೂ ಕೃತಿ ರಚಿಸಿದವರು. ಅನೇಕ ಗ್ರಂಥಗಳ ಸಂಪಾದಕರು, ಸಂಘ ಸಂಸ್ಥೆಗಳಿಗೆ ಸಲಹಾಕಾರರು.

ಅತ್ಯುತ್ತಮ ಭಾಷಣಕಾರರಾದ ಜೋಶಿಯವರ ಭಾಷಣ ಕೇಳುವುದು ಒಂದು ಸುಂದರ ಅನುಭೂತಿ. ಗಾಂಭೀರ್ಯ, ವ್ಯಂಗ್ಯ, ವಿನೋದ, ತಲಸ್ಪರ್ಶಿ ದೃಷ್ಟಿಕೋನ, ಹೊಸ ಕಾಣ್ಕೆಗಳ ಪಾಕವದು. ಕೆಲವು ವರ್ಷಗಳ ಹಿಂದೆ ಅಕಾಡೆಮಿಯೊಂದರ ಸದಸ್ಯತ್ವಕ್ಕೆ ಸರಕಾರ ಅವರ ನಾಮನಿರ್ದೇಶನ ಮಾಡಿದಾಗ ಅದರ ಆಕರ್ಷಣೆಯಿಂದ ದೂರವುಳಿದ ನಿರ್ಲಿಪ್ತ. ಇತ್ತೀಚೆಗೆ ಪಾರ್ತಿಸುಬ್ಬ ಪ್ರಶಸ್ತಿಗೆ ಪಾತ್ರರಾದ ಡಾ. ಜೋಶಿ ಯಕ್ಷಗಾನದ ಹಿರಿಮೆ.

**(ಕೃಪೆ : ಮಂಚಿ ಸಮಾಚಾರ)**



"ಯಕ್ಷಗಾನದ ಹಿರಿಮೆಯ ಚಿಂತಾಮಣಿ ಕಡ್ಡಿ, ನಮ್ಮ ಕಿವಿಯ ಮೇಲೇ ಇದೆ; ಆದರೆ, ನಮಗೆ ಗೊತ್ತಿಲ್ಲ. ಯಕ್ಷಗಾನವನ್ನು ಸಿನೆಮಾ, ನಾಟಕ ಮಾಡುವುದಲ್ಲ. ಯಕ್ಷಗಾನದ ಗರ್ನಾಲು, ಬ್ಯಾಂಡು ಮಾರಕ. ಅತಿ ವಿಸ್ತಾರವಾದ, ಅಪಾರ ಸಾಧ್ಯತೆ, ಸಾಮರ್ಥ್ಯ ಹೊಂದಿರುವ ಯಕ್ಷಗಾನದಲ್ಲಿ ಏನೇ ಬದಲಾವಣೆ ಮಾಡುವುದಿದ್ದರೂ ಅದು ಯಕ್ಷಗಾನ ಎಂಬ ಮಾಧ್ಯಮ ಮೀರಬಾರದು."

**ಆಳ್ವಾಸ್ ವಿಶ್ವ ನುಡಿಸಿರಿ ವಿರಾಸತ್ ಉಪನ್ಯಾಸದಲಿ**

# ವಿಮರ್ಶಾ ಶಿಸ್ತಿನ ಚಿಂತಕ



**ಪ್ರೊ. ಎಂ.ಎಲ್. ಸಾಮಗ**

ಸುಮಾರು ಮೂವತ್ತೈದು ವರುಷಗಳ ಹಿಂದೆ ಮಂಗಳೂರಿನಲ್ಲಿ ಒಂದು ತಾಳಮದ್ದಳೆ. ಡಾ. ಗುಂಡ್ಮಿ ಚಂದ್ರಶೇಖರ ಐತಾಳರು ಪ್ರಭಾಕರ ಜೋಶಿಯವರನ್ನು ಪರಿಚಯಿಸುತ್ತ ಭವಿಷ್ಯ ನುಡಿದಿದ್ದರು – "ಶೇಣಿಯವರ ಉತ್ತರಾಧಿಕಾರಿಯಾಗುವ ಸರ್ವಸಾಧ್ಯತೆಗಳು ಪ್ರಭಾಕರ ಜೋಶಿಯವರಲ್ಲಿವೆ."

ಡಾ. ಶೇಣಿಯರ ಅನಂತರದ ತಾಳಮದ್ದಳೆ ಯುಗದಲ್ಲಿ ಶೇಣಿ, ಸಾಮಗರಿಗಿಂತ ಭಿನ್ನ ಅರ್ಥದಾರಿಯಾಗಿ ಅರ್ಹತೆ ಗಳಿಸಿಕೊಂಡಿದ್ದಾರೆ ಎಂಬುದು ಕಲಾಭಿಮಾನಿಗಳೆಲ್ಲರ ಅಭಿಪ್ರಾಯ. ಸ್ವತಃ ಯಕ್ಷಗಾನಕ್ಕೆ ಕಾಯಕಲ್ಪ ಮಾಡಿ ಅದರ ಪುನರುತ್ಥಾನ ಸಾಧಿಸಿದ ಡಾ.ಶಿವರಾಮ ಕಾರಂತರ ಹೆಸರು ಯಕ್ಷಗಾನದೊಂದಿಗೆ ನವೀಕರಣ ಗೊಂಡ ಕಾಲವೊಂದಿತ್ತು. ಈಗ ಯಕ್ಷಚಿಂತನೆಗೆ ಜೋಶಿಯವರ ಹೆಸರು ಪರ್ಯಾಯ ಪದವಾಗುತ್ತಿದೆ. ಯಾಕೆಂದರೆ ಜೋಶಿಯವರಷ್ಟು ವ್ಯಾಪಕವಾಗಿ ಯಕ್ಷಗಾನ ಅಂಗೋಪಾಂಗಗಳ ಬಗ್ಗೆ ಬರೆದವರು, ಮಾತನಾಡಿದವರು, ಯಕ್ಷಗಾನ ತಾಳಮದ್ದಳೆಗಳಲ್ಲಿ ಭಾಗವಹಿಸಿದವರು ಇನ್ನೊಬ್ಬರಿಲ್ಲ.

ಅವರ ವ್ಯಕ್ತಿತ್ವವನ್ನು ಅರ್ಥಮಾಡಿಕೊಳ್ಳಲು ಮುಂದುವರಿದಂತೆ ಆಶ್ಚರ್ಯ, ಅದ್ಭುತ, ಕುತೂಹಲಗಳ ಸಮ್ಮಿಶ್ರ ಭಾವ ಮೂಡುತ್ತದೆ. ಅದಕ್ಕೆ ಕಾರಣ ಅವರು ಸಾರ್ವಜನಿಕರ ಮುಂದೆ ಕಾಣಿಸಿಕೊಳ್ಳುವ ರೀತಿ, ವರ್ತನೆಗಳ ವೈಖರಿ. ವಿಷಯ ಸಂಗ್ರಹಗಳ ಹರಹು. ಚಿಂತನೆಗಳ ಸ್ವಂತಿಕೆ, ಚುರುಕು ಮಾತಿನ ವಾಕ್ಚಾತುರ್ಯ. ತಿಳಿ ಹಾಸ್ಯದ ವಾಗ್ಮಿತೆ. ನಿರಂತರ ತಿರುಗಾಟ, ದಣಿವರಿಯದ ಮಾತುಗಾರಿಕೆ. ನಿರ್ಲಕ್ಷ್ಯದಂತೆ ಕಾಣುವ ಅವರ ಧೋರಣೆಯಲ್ಲಿ ಹುದುಗಿರುವ ಸೂಕ್ಷ್ಮಾವಲೋಕನ. ಶೀಘ್ರ ಗ್ರಹಣಶಕ್ತಿ. ದೀರ್ಘ ಸ್ಮರಣ ಸಾಮರ್ಥ್ಯ ಮತ್ತು ಇವೆಲ್ಲವುಗಳ ಜೊತೆ ಅವರ ಆತ್ಮೀಯತೆಯ 'ಪಿಸುರು', 'ಪೆದಂಬು'. ಯಕ್ಷಗಾನಕ್ಕೆ ಸಂಬಂಧಪಟ್ಟ ಯಾವುದೇ ಚಿಂತನಕೂಟ, ವಿಚಾರ ಸಂಕಿರಣದಲ್ಲಿ ಜೋಶಿಯವರಿಲ್ಲದಿದ್ದರೆ ಅದೊಂದು ಕೊರತೆ ಎಂದೇ ಪರಿಗಣಿಸುವಷ್ಟು ಎತ್ತರಕ್ಕೆ ಬೆಳೆದವರು....

....ಜೋಶಿಯವರ ವೃತ್ತಿಯು ಶಿಕ್ಷಣ ಕ್ಷೇತ್ರ. ಪ್ರವೃತ್ತಿಯ ಕ್ಷೇತ್ರಗಳು ಹಲವು. ಆಟಗಳಲ್ಲಿ ವೇಷ. ಕೂಟಗಳಲ್ಲಿ ಅರ್ಥ; ಅಗತ್ಯವಿದ್ದರೆ ಹಿಮ್ಮೇಳ ವಾದನ – ಹೀಗೆ ಯಕ್ಷಗಾನ ವೇದಿಕೆ ಪ್ರವೇಶ ಮಾಡಿದ ಇವರು ಪ್ರಥಮ ಶ್ರೇಣಿಯ ಅರ್ಥದಾರಿಯಾಗಿ ಬೆಳೆದುದು ವಿಸ್ಮಯದ ಯಶೋಗಾಥೆ. ಯುವ ಅರ್ಥದಾರಿಯಾಗಿ ಸಾಮಗ, ಶೇಣಿ, ಪೆರ್ಲ, ದೇರಾಜೆ ಮೊದಲಾದ ಪ್ರಬುದ್ಧ ಕಲಾವಿದ ವಿದ್ವಾಂಸರೊಡನೆ ಮಾತಿನ ಒರಸಾಟ, ಸೆಣಸಾಟ. ವ್ಯಾಪಕ ಜನಮನ್ನಣೆ. ತನಗಿಂತ ಹಿಂದಿನ ವಿದ್ವತ್ ಪರಂಪರೆಯು ಅರ್ಥಗಾರಿಕೆಯ ಸತ್ವ ಹೀರಿ ಆಧುನಿಕ ಸಾಹಿತ್ಯ ಅಧ್ಯಯನದ ವಿಚಾರಗಳ ಬೆಳಕಿನಲ್ಲಿ ಹೊಸ ವಿಮರ್ಶಾ ಶಿಸ್ತಿನೊಂದಿಗೆ ಪುರಾಣ ಪಾತ್ರಗಳನ್ನು ವೇದಿಕೆಯಲ್ಲಿ ಸಾಕಾರಗೊಳಿಸು ವಲ್ಲಿ ಜೋಶಿಯವರ ಅರ್ಥಗಾರಿಕೆ ಮಿಂಚುತ್ತದೆ.

ತಿಳಿಹಾಸ್ಯ ಜೆರೆತ ಪ್ರತ್ಯುತ್ಪನ್ನಮತಿತ್ವ, ಪಾತ್ರ ವಿಶ್ಲೇಷಣೆಯಲ್ಲಿ ವಿಮರ್ಶಾತ್ಮಕ ಸೀಳುನೋಟ, ಮೊನಚು ಮಾತಿನ ಸಂವಾದ ಶೈಲಿ, ಸರಳ ವಾಕ್ಯಗಳ ಸಾಂದ್ರತೆ ಇವರ ಅರ್ಥಗಾರಿಕೆಯ ವೈಶಿಷ್ಟಗಳು. ಸ್ವರವಿನ್ಯಾಸದಲ್ಲಿ ಪರಂಪರೆಯ ಶೈಲಿಗೆ ಜೋತು ಕೊಂಡವರಲ್ಲ. 'ರಾವಣ, ವಾಲಿ, ಕರ್ಣ, ಕೌರವ, ಪ್ರಹಸ್ತ' ಮೊದಲಾದ ಪ್ರಾತ್ರದಲ್ಲಿ ಪರಿಣತಿ. ಇತ್ತೀಚೆಗೆ ಸಾತ್ವಿಕ ಪ್ರಧಾನ ಪಾತ್ರಗಳನ್ನು ಸಮರ್ಥವಾಗಿ ನಿರ್ವಹಿಸುತ್ತಿರುವುದು ಇವರ ಪಕ್ವತೆಗೆ ಸಾಕ್ಷಿ. ಮೊದಮೊದಲು ವೈನೋದಿಕ ಶೈಲಿಯಲ್ಲಿ ವೈಚಾರಿಕವಾಗಿ ಪಾತ್ರ ಚಿತ್ರಣ ಮಾಡುತ್ತಿದ್ದ ಜೋಶಿಯವರು ಪಾತ್ರಗಳನ್ನು ಭಾವಪೂರ್ಣವಾಗಿಯೂ, ನಾಟಕೀಯವಾಗಿಯೂ ಚಿತ್ರಿಸುತ್ತಿರುವುದು ಬೆಳವಣಿಗೆಯ ಇನ್ನೊಂದು ಹಂತ.

ಯಕ್ಷಗಾನ ಮಾತ್ರವಲ್ಲದೆ ಶಿಕ್ಷಣ, ಕಲೆ, ತತ್ವಶಾಸ್ತ್ರ, ಸಂಸ್ಕೃತಿ ಇತ್ಯಾದಿ ವಿಷಯಗಳ ಗೋಷ್ಠಿ, ಕಮ್ಮಟಗಳಲ್ಲಿ ವಿದ್ವತ್‌ಪೂರ್ಣ ಉಪನ್ಯಾಸ ನೀಡುವುದರಲ್ಲಿ ನಿಷ್ಣಾತರು. ನೂರಕ್ಕೂ ಮಿಕ್ಕಿದ ಯಕ್ಷಗಾನ ಧ್ವನಿಸುರುಳಿಗಳಲ್ಲಿ ಪಾತ್ರವಹಿಸಿದವರು. ಯಕ್ಷಗಾನದ ಪ್ರಪ್ರಥಮ ಜಾಲತಾಣದ ಸ್ಥಾಪಕ ಸಂಪಾದಕ. ಹಲವಾರು ಅಮೂಲ್ಯ ಗ್ರಂಥಗಳ ಕರ್ತೃ. ಯಕ್ಷಗಾನ ವಿಮರ್ಶಾ ಪ್ರಪಂಚಕ್ಕೆ ಇವರ ಕೊಡುಗೆಯ ಪ್ರಮಾಣ ಮತ್ತು

ಗುಣಮಟ್ಟ ಎರಡರಲ್ಲೂ ಮಹತ್ವದ್ದು...

...ಇವರ ಕಲಾವಿದರ ಕುರಿತಾದ ವಿವರಗಳು, ಸಂಘಟಕರಿಗೆ ನೀಡುವ ಸಲಹೆ – ಮಾರ್ಗದರ್ಶನಗಳು, ಇತರರಿಗೆ ಬೇಸರಿಕೆ ಬಾರದಂತೆ ಯಾವುದೇ ವಿಷಯದ ಬಗ್ಗೆ ಮಾತನಾಡಬಲ್ಲ ವಾಗ್ಜಾಲಗಳು – ಈ ಎಲ್ಲವುಗಳಿಂದಾಗಿ ಎಲ್ಲರ ಪ್ರೀತಿಗೆ ಪಾತ್ರರು. ಸರಕಾರದಿಂದ ಮತ್ತು ವಿವಿಧ ಸಂಘ ಸಂಸ್ಥೆಗಳಿಂದ ಹಲವಾರು ಪ್ರಶಸ್ತಿ, ಪುರಸ್ಕಾರಗಳನ್ನು ಜೋಶಿಯವರು ಪಡೆದಿರುವುದು ನಿಜ. ಯಕ್ಷಗಾನೋದ್ಧಾರದ ಸಾಂಘಿಕ ಪ್ರಯತ್ನದಲ್ಲಿ ಸರಕಾರವು ಇವರ ಸಾಮರ್ಥ್ಯವನ್ನು ಇನ್ನೂ ಸರಿಯಾಗಿ ಗುರುತಿಸಿ ಬಳಸಿಲ್ಲ ಎನ್ನುವುದು ಒಪ್ಪಬಹುದಾದ ಸಂಗತಿ. ತಾನು ಪ್ರತಿಪಾದಿಸುವ ಯಾವುದೇ ವಿಷಯದ ಬಗ್ಗೆ ಸೈದ್ಧಾಂತಿಕವಾಗಿ, ಶಾಸ್ತ್ರೀಯ ಶಿಸ್ತಿನಿಂದ ಚಿಂತಿಸುವ ಕೆಲವರಲ್ಲಿ ಒಬ್ಬರು.

**(ಕೃಪೆ : ವಾಗ್ಝರಿ, ಪ್ರ: ಕಲಾರಂಗ ಉಡುಪಿ – 2009)**



**'ಯಕ್ಷಗಾನದ ಅತಿ ವೈಭವೀಕರಣ ವಿಷಾದಕರ'**

"ಮಂಗಳೂರು ವಿವಿಯಲ್ಲಿ ನೀಡುವ ಯಕ್ಷಪ್ರಶಸ್ತಿಗೆ ಹೆಚ್ಚಿನ ಪ್ರಾಮುಖ್ಯ ವಿದೆ. ಸಾಂಪ್ರದಾಯಿಕ ಕಲೆಗಳಲ್ಲಿ ಒಂದಾಗಿರುವ ಯಕ್ಷಗಾನಕ್ಕೆ ನೂರಾರು ವರ್ಷಗಳ ಇತಿಹಾಸವಿದೆ. ಆದರೆ ಪ್ರಸ್ತುತ ಕಾಲಘಟ್ಟದಲ್ಲಿ ಯಕ್ಷಗಾನ ವಿಕಾರ ವೈಭವೀಕರಣಗೊಳ್ಳುತ್ತಿರುವುದು ವಿಷಾದನೀಯ ಸಂಗತಿಯಾಗಿದೆ. ಯಕ್ಷಗಾನದಲ್ಲಿ ಬೆಳಕು–ಜ್ಞಾನ ಎಂಬ ಮಾತಿದೆ. ಯಾವುದೇ ಕಲೆಯಲ್ಲಿ ವೈವಿಧ್ಯ ಹಾಗೂ ಅದರ ಬಗ್ಗೆ ಪ್ರಯೋಗಗಳು ಬೇಕು. ಆದರೆ ಯಾವುದೇ ಕಾರಣಕ್ಕೂ ಅದರ ಸಾಹಿತ್ಯ ಹಾಗೂ ಕುಣಿತದಲ್ಲಿ ಬದಲಾವಣೆಗಳಾಗಬಾರದು. ಸಾಂಪ್ರದಾಯಿಕ ಕಲೆಯಲ್ಲಿ ಅನಾವಶ್ಯಕವಾದ ಅಂಶವನ್ನು ಒಳಗೆ ಬರುವಂತಹ ಕೆಲಸ ಮಾಡಬಾರದು."

**ಯಕ್ಷಮಂಗಲ ಪ್ರಶಸ್ತಿ ಸ್ವೀಕಾರ ಸಮಾರಂಭದಲ್ಲಿ...**

# ‘ಯಕ್ಷಗಾನದಲ್ಲಿ ಸಂಘಟನಾತ್ಮಕ ವಿಮರ್ಶಾ ಪಂಥ ಬೆಳೆಯಬೇಕು’

**– ಡಾ. ಜೋಶಿ**



ಸಂದರ್ಶನ :
**ನಾ. ಕಾರಂತ ಪೆರಾಜೆ**

**ಡಾ.ಎಂ. ಪ್ರಭಾಕರ ಜೋಶಿ – ಯಕ್ಷಗಾನ ವಿಮರ್ಶಕ, ಅರ್ಥದಾರಿ. ವಿದ್ವಾಂಸ. ಯಕ್ಷಗಾನದ ವಿಮರ್ಶೆ, ಆಗುಹೋಗುಗಳ ಕುರಿತು ಅವರನ್ನು ಮಾತಿಗೆಳೆದಾಗ –**

*** ‘ಯಕ್ಷಗಾನದಲ್ಲಿ ವಿಮರ್ಶೆ’ಯ ಆರಂಭ ಕಾಲದ ಸ್ವರೂಪ ಹೇಗಿತ್ತು?**

ಸುಮಾರು 1930ರಿಂದಲೇ ಯಕ್ಷಗಾನದ ವಿಮರ್ಶೆಗಳು ಬೇರೆ ಬೇರೆ ಸ್ವರೂಪಗಳಲ್ಲಿ ಕಾಣಸಿಗುತ್ತವೆ. ಡಾ.ರಾಘವನ್ ಬರೆದ ಲೇಖನ, ಮುಳಿಯ ತಿಮ್ಮಪ್ಪಯ್ಯನವರು ಪಾರ್ತಿಸುಬ್ಬನ ಕುರಿತು ಬರೆದ ಬರೆಹ, ಎಂ.ಆರ್. ಶಾಸ್ತ್ರಿಗಳು, ರಾ.ಭಾ. ಹಾಸಣಗಿ – ಇವರೆಲ್ಲ ಯಕ್ಷಗಾನದ ವಿಮರ್ಶೆಗೆ ಬಹಳ ಗಟ್ಟಿಯಾದ ಅಡಿಗಟ್ಟು ಹಾಕಿದವರು. ಡಾ. ಶಿವರಾಮ ಕಾರಂತರು ತಾತ್ವಿಕವಾಗಿ, ಪ್ರಾಯೋಗಿಕವಾಗಿ ಮತ್ತು ರಚನಾತ್ಮಕವಾಗಿ ಕೂಡ ಕಾರ್ಯಾಗಾರಗಳ, ಕಮ್ಮಟಗಳ ಮೂಲಕ ಮಾಡಿ ತೋರಿಸಿದ್ದಾರೆ. ಒಂದರ್ಥದಲ್ಲಿ ಪರಿಪೂರ್ಣ ಯಕ್ಷಗಾನದ ವಿಮರ್ಶೆಯ ಮೂಲಪುರುಷ ಡಾ.ಕಾರಂತರು. ಸಂಶೋಧನೆಯಲ್ಲಿ ಅವರಷ್ಟೇ ಎತ್ತರದವರು ಕುಕ್ಕಿಲ ಕೃಷ್ಣ ಭಟ್ಟರು. ಬಳಿಕ ಮಹಾಬಲ ಭಟ್, ಡಾ. ಅಮೃತ ಸೋಮೇಶ್ವರ,

ಜಿ.ಎಸ್. ಹೆಗಡೆ, ಡಾ. ಜಿ.ಎಸ್. ಭಟ್ ಸುಳ್ಯ, ಡಾ. ಕೆ.ಎಂ. ರಾಘವ ನಂಬಿಯಾರ್.. ಹೀಗೆ ವಿಮರ್ಶಾ ಕ್ಷೇತ್ರದ ಹಲವರನ್ನು ಹೆಸರಿಸಬಹುದು.

*** ತಾವು ಕಂಡಂತೆ ಯಕ್ಷಗಾನದಲ್ಲಿ ವಿಮರ್ಶಾ ಸ್ವರೂಪ ಹೇಗಿರಬೇಕು?**

ಕಲೆ ಹೇಗೋ ಬೆಳೆಯುತ್ತಾ ಇರುತ್ತದೆ. ವಿಮರ್ಶೆ ಮತ್ತೊಂದು ಕಡೆಯಿಂದ ಬೆಳೆಯುತ್ತಾ ಇರುತ್ತದೆ. ಕಲಾವಿದನಿಗೆ ವಿಮರ್ಶಕನಿಂದ ಒಳ್ಳೆಯ ಅಭಿಪ್ರಾಯ ಪಡೆಯಬೇಕು, ಮೆಚ್ಚಬೇಕು ಎಂದು ಮಾನಸಿಕವಾಗಿ ಇರುತ್ತದೆ. 'ನಾನು ಏನು ಬೇಕಾದರೂ ಮಾಡುತ್ತೇನೆ. ಜನ ನನ್ನನ್ನು ಮೆಚ್ಚಿದ್ದಾರೆ. ನಾನು ವ್ಯವಸಾಯಿ ಕಲಾವಿದ' ಎಂದು ಹೇಳುವವರೂ ಇದ್ದಾರೆ. ಅವರೂ ಒಳಗಿನಿಂದ ವಿಮರ್ಶಕನ ಅಭಿಪ್ರಾಯಕ್ಕೆ ಬೆಲೆ ಕೊಡುತ್ತಾರೆ. ಒಂದು ಪ್ರದರ್ಶನದಲ್ಲಿ ಎತ್ತಿದ ದೋಷವನ್ನು ಮತ್ತೊಂದು ಪ್ರದರ್ಶನದಲ್ಲಿ ಸರಿಪಡಿಸಿಕೊಳ್ಳುವ ಹೊಣೆಗಾರಿಕೆ ಕಲಾವಿದನಿಗೆ ಇರಬೇಕು. ವಿಮರ್ಶೆಗೂ ಮರು ವಿಮರ್ಶೆ ಬೇಕು. ಅದು 'ಆಚಾರ್ಯ ಪೀಠ'ವಾಗಬಾರದು. ಯಕ್ಷಗಾನದ ಸಂಶೋಧನೆಗೆ ವಿಮರ್ಶೆಯ ಬಲವಾದ ಅಡಿಪಾಯ ಬೇಕು. ಪ್ರೀತಿ ಬೇಕು. ನಿರ್ಭೀತಿ ಬೇಕು. ಮಾಧ್ಯಮದ ಎಚ್ಚರವಿಲ್ಲದೆ ಮಾಡುವ ವಿಮರ್ಶೆ 'ಒಟ್ಟಾರೆ ವಿಮರ್ಶೆ'ಯಾಗುತ್ತದೆ. ಅದರಿಂದ ರಂಗಕ್ಕೆ ಪ್ರಯೋಜನವಿಲ್ಲ. ವಿಮರ್ಶಾ ಪಂಥ ಬೆಳೆಯುತ್ತಿದೆ.

*** ಕಲಾವಿದರು ವಿಮರ್ಶೆಯನ್ನು ಹೇಗೆ ಸ್ವೀಕರಿಸಿದರು?**

ಕಲಾವಿದರು ವಿಮರ್ಶೆಯನ್ನು ಸ್ವೀಕರಿಸುವ ರೀತಿ ಬೇರೆ. ತಜ್ಞರು ಸ್ವೀಕರಿಸುವ ರೀತಿ ಬೇರೆ. ಕಲಾವಿದರು ವ್ಯಕ್ತಿ ಪರಿಚಯಗಳನ್ನು ಬಹಳ ಪ್ರೀತಿಯಿಂದ ಓದುತ್ತಾರೆ. ಆದರೆ ಅಭಿಪ್ರಾಯಗಳನ್ನು ಅಷ್ಟಾಗಿ ಓದುವುದಿಲ್ಲ. 'ಅವನು ವೇಷ ಮಾಡ್ತಾನೋ?', 'ಅವನಿಗೆ ತಿರುಗಾಟ ಮಾಡಿದ ಅನುಭವ ಉಂಟೋ..?'.. ಎಂಬ ಪ್ರತಿಕ್ರಿಯೆ ನೀಡುತ್ತಾರೆ, ವಿಮರ್ಶಕನು ಕುಣಿಯಬೇಕಾಗಿಲ್ಲ. ಹಾಡಬೇಕಾಗಿಲ್ಲ. ವೇಷ ತೊಡಬೇಕಾಗಿಲ್ಲ ಎಂಬ ತಿಳಿವಳಿಕೆ ಇದ್ದರೂ, ಅವರು ಅದನ್ನು ಒಪ್ಪುವುದಿಲ್ಲ. ವಿಮರ್ಶಕರ ಅಭಿಪ್ರಾಯವು ಯಕ್ಷಗಾನದ ಒಳಗಿದ್ದವರಿಗೆ 'ಇದು ಗೊತ್ತಿದ್ದ ವಿಷಯವೇ' ಎಂದಾದ್ರೆ, ಹೊರಗಿನವರಿಗೆ 'ಅದು ಯಕ್ಷಗಾನದ್ದು, ನಮಗೆ ಬೇಡ' ಎಂಬ ಭಾವ. ಹಾಗಾಗಿ ಯಕ್ಷಗಾನದ ವಿಮರ್ಶೆ ಗಂಭೀರವಾಗಿ ಇನ್ನೂ ಪರಿಗಣಿತವಾಗಿಲ್ಲ.

*** ವಿಮರ್ಶೆಯ ಕ್ಷೇತ್ರಾಧ್ಯಯನದ ತಮ್ಮ ಅನುಭವ?**

ನಾನು ಸ್ವತಃ ಅರ್ಥದಾರಿಯಾಗಿ, ಯಕ್ಷಗಾನದಲ್ಲಿ ಪ್ರವೃತ್ತನಾಗಿದ್ದು, ತೆಂಕು-ಬಡಗು ತಿಟ್ಟುಗಳಲ್ಲಿ ಏಕಪ್ರಕಾರವಾದ ಸಂಪರ್ಕವು ಯಕ್ಷಗಾನದ ವಿಮರ್ಶೆಯ ಕ್ಷೇತ್ರಾಧ್ಯಯನಕ್ಕೆ ಸಹಕಾರಿಯಾಗಿತು. ಸಂಪರ್ಕ, ತಿರುಗಾಟ, ಅಧ್ಯಯನಗಳಿಗೆ ಸುಲಲಿತ ವಾಯಿತು. ಇಷ್ಟು ವ್ಯಾಪಕ ಸಂಪರ್ಕ ಇಟ್ಟುಕೊಳ್ಳದೆ ವಿಮರ್ಶೆ ಸಾಧ್ಯವಿಲ್ಲ. ವಿಮರ್ಶೆಯಲ್ಲಿ

ಐಚ್ಛಿಕವಾದ ವ್ಯಾಪಕತೆ, ನಿಲುವು ಬೇಕು. ಯಕ್ಷಗಾನದ ವಿಷಯಗಳನ್ನು ಒಂದು 'ವಿದ್ಯಮಾನ' ಎಂದು ಸ್ವೀಕರಿಸಬೇಕು. ವಿಮರ್ಶಕ ದಾಖಲಾತಿಗೆ ತೊಡಗಿದಾಗ ಇತ್ಯಾತ್ಮಕ, ನೇತ್ಯಾತ್ಮಕ ವಿಚಾರಗಳೆರಡನ್ನೂ ಗಮನಿಸಬೇಕು. ವಿಮರ್ಶೆಯನ್ನು ಯಾರು ಒಳಗಿದ್ದುಕೊಂಡೇ ಮಾಡುತ್ತಾನೋ, ಅವನ ಬಗ್ಗೆ ಬಹಳಷ್ಟು ವಿಶ್ವಾಸ, ನಂಬುಗೆಗಳು ಬರುತ್ತವೆ. ನನ್ನನ್ನು ಕಲಾವಿದರು ವಿಶ್ವಾಸದಿಂದ ನೋಡಿದ್ದಾರೆ.

* **ಪತ್ರಿಕೆಗಳಲ್ಲಿ ತಮ್ಮ ವಿಶಿಷ್ಟ 'ವ್ಯಕ್ತಿ ಪರಿಚಯ' ಬರೆಹಗಳು ಜನಪ್ರಿಯ. ಇಂತಹ ಲೇಖನಗಳನ್ನು ಬರೆಯುವಾಗ ಯಾವ ಮಾನದಂಡವನ್ನು ತಾವು ಬಳಸುತ್ತಿದ್ದೀರಿ? ಇದು ಕಲೆಯ ಬೆಳವಣಿಗೆಗೆ ಹೇಗೆ ಸಹಕಾರಿ?**

ಬೇರೆ ರಂಗದ ಕಲಾವಿದರನ್ನು ಹೇಗೆ ಪರಿಚಯಿಸುತ್ತಾರೆ ಎಂಬ ತಿಳಿವಳಿಕೆ ಬೇಕು. ಕಲಾವಿದರ ಪರಿಚಯ ಕಲೆಯ ಪ್ರತಿಷ್ಠೆಗೆ ಕಾರಣ. ಇದು ಅವನನ್ನು ಮೆಚ್ಚುವ ವರ್ಗಕ್ಕೆ ಅಭಿಮಾನಿಗಳಿಗೆ ಸಂತೋಷವಾಗುತ್ತದೆ. ವ್ಯಕ್ತಿಪರಿಚಯವನ್ನು ಓದಿಯೇ ಆಟ ನೋಡಲು, ತಾಳಮದ್ದಳೆಗೆ ಅರ್ಥ ಕೇಳಲು ಬರುವುದಿದೆ. ಅಲ್ಲದೆ ಬಹುಕಾಲ ರಂಗದಲ್ಲಿ ದುಡಿದ ಕಲಾವಿದನಿಗೆ, 'ನಾನು ಮಾಧ್ಯಮದಲ್ಲಿ ಗುರುತಿಸಲ್ಪಟ್ಟೆ' ಎಂಬ ಸಂತೃಪ್ತಿ. ಇಂತಹ ಪರಿಚಯ ಲೇಖನಗಳನ್ನು ಬರೆಯುವಾಗ ಬರಹಗಾರನು ಕಲಾವಿದನ ಸ್ವಭಾವ, ಸ್ವರೂಪ, ಕಲಾ ವ್ಯವಸಾಯ ಮತ್ತು ಗುಣ-ದೋಷಗಳನ್ನು ಗುರುತಿಸಬೇಕು. 'ಅವನ ಹಾಗೆ ಇವನಲ್ಲ' ಅಂತ ತೋರಿಸಬೇಕು. ಈ ಹಿನ್ನೆಲೆಯಲ್ಲಿ ನಾನು, ನನಗೆ ಸಂತೋಷ ಕೊಟ್ಟ, ನಾನು ಒಳಗಿನವನಾಗಿದ್ದು ಹೊರಗಿದ್ದುಕೊಂಡು ಹೇಗೆ ಬರೆಯುವುದು ಎಂಬುದನ್ನು ಆಲೋಚನೆ ಮಾಡಿ ವ್ಯಕ್ತಿ ಪರಿಚಯ ಬರೆದೆ. ಹೆಚ್ಚಿನವರು ಸ್ವೀಕರಿಸಿದ್ದಾರೆ. ಕೆಲವರು ಆಕ್ಷೇಪಿಸಿದ್ದಾರೆ.

* **ವ್ಯಕ್ತಿ ಪರಿಚಯ, ವಿಮರ್ಶಾ ಬರೆಹಗಳನ್ನು ಮಾಧ್ಯಮಗಳು ಹೇಗೆ ಸ್ವೀಕರಿಸಿದುವು?**

ವಸ್ತುವಿನಿಂದ ಲೇಖಕನಿಗೆ ಮಹತ್ವ ಬರುತ್ತದೆ ಲೇಖನದಿಂದ ವಸ್ತುವಿಗೆ ಮಹತ್ವ ಬರುತ್ತದೆ. ಒಂದೆ 'ನವಭಾರತ' ದಿನಪತ್ರಿಕೆಯಲ್ಲಿ ಜರುಗಿದ ತಾಳಮದ್ದಳೆಗಳ 'ಬಿಸಿ'ಯ ಬಗ್ಗೆ ವಿಮರ್ಶೆ, ಬರೆಹಗಳು ಪ್ರಕಟವಾಗುತ್ತಿದ್ದುವು. ಈ ಕುರಿತು ಚರ್ಚೆಗಳಾಗುತ್ತಿದ್ದವು. ಜನರು ಕುತೂಹಲದಿಂದ ಅವನ್ನು ಸ್ವೀಕರಿಸಿದರು. ಪತ್ರಿಕೆಗೆ ಅದೊಂದು ಬೇರೆಯೇ ವಿಧದ ಮಾರುಕಟ್ಟೆ ಸೃಷ್ಟಿಸಿತು. ಯಕ್ಷಗಾನಕ್ಕೂ ಪ್ರಚಾರ ಸಿಕ್ಕಿತು.

ಕಳೆದ ಮೂವತ್ತೈದು ವರುಷಗಳಿಂದ ಉದಯವಾಣಿಯಲ್ಲಿ ವ್ಯಕ್ತಿ ಪರಿಚಯ, ವಿಮರ್ಶೆ, ನಾಟ್ಯಶಾಸ್ತ್ರಕ್ಕೂ ಯಕ್ಷಗಾನಕ್ಕೂ ಸಂಬಂಧ, ಸಂಗೀತ-ಯಕ್ಷಗಾನ, ಛಂದಸ್ಸು, ಅಭಿನಯ.. ಹೀಗೆ ಗರಿಷ್ಠ ತಾಂತ್ರಿಕಾಂಶಗಳ ಕುರಿತ ಬರಹಗಳು ಪ್ರಕಟವಾಗಿವೆ. ಮಣಿಪಾಲದ ಪೈ ಬಳಗದ ದೊಡ್ಡ ಕೊಡುಗೆಯಿದು. ಈ ಅಂಕಣವನ್ನು ಆರಂಭಿಸಿದ ಈಶ್ವರಯ್ಯ ಅವರ ವೈಯಕ್ತಿಕ ಆಸಕ್ತಿ ಮರೆಯುವಂತಹುದಲ್ಲ. ಯಕ್ಷಗಾನ ವಿಮರ್ಶೆಯ

ಬೆಳವಣಿಗೆಯಲ್ಲಿ ಪತ್ರಿಕಾ ಮಾಧ್ಯಮದ ಮಟ್ಟಿಗೆ ಹೇಳುವುದಾದರೆ ಈಶ್ವರಯ್ಯನವರ ಸ್ಥಾನ ದೊಡ್ಡದು. ಅವರು ಕೊಟ್ಟ ಚಾಲನೆಯಿಂದ ಉಳಿದ ಪತ್ರಿಕೆಗಳೂ ಕಲಾ ಬರೆಹಗಳನ್ನು ಪ್ರಕಟಿಸುವಂತಾಯಿತು. ಆಗ ಬರೆಯುವವರ ಸಂಖ್ಯೆ ಕಡಿಮೆ ಇತ್ತು. ಈಗ ಹಾಗಲ್ಲ. ಒಳ್ಳೆಯ ಬರಹಗಾರರು ರೂಪುಗೊಂಡಿದ್ದಾರೆ. ಹಲವು ಪತ್ರಿಕೆಗಳು, ಆಕಾಶವಾಣಿ ಯಕ್ಷಗಾನದ ವಿಮರ್ಶೆಗೆ ಎಡೆ ಮಾಡಿಕೊಟ್ಟಿವೆ. ಅಲ್ಲದೆ ಯಕ್ಷಗಾನಕ್ಕಾಗಿಯೇ ಮೀಸಲಾದ ಪತ್ರಿಕೆಗಳೂ ವಿಮರ್ಶೆಗೆ ಹಾದಿ ಮಾಡಿಕೊಟ್ಟಿವೆ.

*** 'ಕಲಾವಿದ-ವಿಮರ್ಶಕ' ಕೊಂಡಿ ಎಷ್ಟು ಬಿಗಿಯಾಗಿದೆ? ಸಂಬಂಧ ಹೇಗಿದೆ?**

ಈಗ ವಿಮರ್ಶೆ ಒಳ್ಳೆಯ ರೀತಿಯಲ್ಲಿ ಆಗುತ್ತಿದೆ. ಆದರೆ ಯಕ್ಷಗಾನ ಸುಧಾರಿಸ ಬಹುದಾದಷ್ಟು ಸುಧಾರಿಸಲಿಲ್ಲ. ಕಾರಣಗಳು ಹಲವು. ಕಲಾವಿದನಿಗೆ 'ಪುರುಸೊತ್ತಿಲ್ಲ, ವಿದ್ಯಾಭ್ಯಾಸವಿಲ್ಲ..' ಹೀಗೆ ಒಂದು ವರ್ಗ. ಕಾರಣ ಹುಡುಕಿದರೆ, 'ನನಗೆ ಜನಪ್ರಿಯತೆ ಇದೆ. ನಾನು ವಿಮರ್ಶೆಯನ್ನು ಓದಿ ಏನಾಗಬೇಕಾಗಿದೆ' ಎಂಬುದು ಮತ್ತೊಂದು. ಹಾಗಾಗಿ ವ್ಯವಸಾಯ ರಂಗ ಮತ್ತು ವಿಮರ್ಶಕರ ಮಧ್ಯೆ ಕಂದಕ ಇದೆ. ಅದನ್ನು ಸರಿಪಡಿಸುವುದು ಮೊದಲು ಆಗಬೇಕಾದ ಕೆಲಸ.

*** ವಿಶಿಷ್ಟವಾದ, ಬೇರೆಯೇ ಸ್ವರೂಪದ್ದಾದ, ಯಾರದ್ದೇ ಮಾದರಿಯಲ್ಲದ ತಮ್ಮ ಅರ್ಥಗಾರಿಕೆಯನ್ನು ಹಿರಿಯ ಕಲಾವಿದರು ಸ್ವೀಕರಿಸಿದ ಬಗೆ?**

ಎಷ್ಟೋ ಸಲ ಬೇರೆ ಬೇರೆ ಸ್ವಭಾವ, ಸಿದ್ಧಾಂತಗಳು ಒಂಟಿಯಾಗಿರುತ್ತವೆ. ಹಿರಿಯ ಕಲಾವಿದರನ್ನು ನೋಡುವಾಗ (ಶೇಣಿ, ಸಾಮಗ) 'ನಾವು ಅವರ ಹಾಗೆ ಆಗುವುದು ಹೇಗೆ?' ಎಂಬಂತೆ, 'ನಾವು ಅವರ ಹಾಗೆ ಆಗದಿರುವುದು ಹೇಗೆ?' ಎಂಬುದನ್ನು ಅರಿಯಬೇಕು. ನನ್ನ ಅರ್ಥಗಾರಿಕೆಯನ್ನು ಹಿರಿಯರು ಒಪ್ಪಿ, 'ಅದೂ ಒಂದು ರೀತಿ' ಅಂತ ಸ್ವೀಕರಿಸಿದರು. ಹಾಗಾಗಿ ನನಗೆ ಸಮಸ್ಯೆಯಾಗಲಿಲ್ಲ. ಒಂದು ಕಾಲಘಟ್ಟದಲ್ಲಿ ಇದ್ದುದು ಇನ್ನೊಂದು ಕಾಲಘಟ್ಟದಲ್ಲಿ ಇರಬೇಕಾಗಿಲ್ಲ. ಶೇಣಿ-ಸಾಮಗರ ಪಾತ್ರ ಶಿಲ್ಪ ಒಂದು ಅದ್ಭುತ. ಜನರ ಮನಸ್ಸಿನಲ್ಲಿ ಸ್ಥಾಪಿತವಾಗಿದೆ. ಶೇಣಿ, ಸಾಮಗರ ಅರ್ಥಗಾರಿಕೆಯನ್ನು ಮರೆತಾಗ, ಇತರರ ಅರ್ಥಗಾರಿಕೆ ನಮಗೆ ಮೆಚ್ಚುಗೆಯಾಗುತ್ತದೆ. ಅರ್ಥಗಾರಿಕೆಯ ಸ್ವರೂಪದಲ್ಲಿ ಎಲ್ಲಾ ಅಂಶಗಳು ಒಬ್ಬನಲ್ಲಿ ಬರುವುದು ಶೇಣಿಯವರ ಹಾಗೆ ಅಪರೂಪ. ಆದರೆ ಶಿಖರಗಳನ್ನು ನೋಡಿ, ಉಳಿದ ಗುಡ್ಡಗಳ ಮೌಲ್ಯಮಾಪನ ಮಾಡಬಾರದು. ನನ್ನ ಅರ್ಥಗಾರಿಕೆಯನ್ನು ಸಹ ಕಲಾವಿದರು ಪ್ರೀತಿಯಿಂದ ಸ್ವೀಕರಿಸಿದ್ದಾರೆ. ಸಣ್ಣಪುಟ್ಟ 'ಒರಸಾಟ' ಇದ್ದದ್ದೇ!

*** ನಿಮ್ಮ ದೃಷ್ಟಿಯಲ್ಲಿ ಯಕ್ಷಗಾನದಲ್ಲಿ ತತ್‌ಕ್ಷಣ ಆಗಬೇಕಾದ ಕಾರ್ಯ ಯಾವುದು?**

ಯಕ್ಷಗಾನವನ್ನು ಸರಿಪಡಿಸುವುದೆಂದರೆ ಅದರಲ್ಲಿ ಯಕ್ಷಗಾನೀಯವಲ್ಲದ ವಿಷಯ

ಗಳನ್ನು ತೆಗೆದು ಬಿಸಾಡುವುದು. ಈಗ ತೇಪೆ ಹೆಚ್ಚಾಗಿದೆ. ಅದನ್ನು ತೆಗೆಯಬೇಕು. ಬಿಟ್ಟು ಹೋದ ಅಂಶಗಳನ್ನು ಸೇರಿಸುವುದು ಇನ್ನೊಂದು ಕೆಲಸ. ಬಲವಾದ, ಸಂಘಟನಾತ್ಮಕವಾದ ವಿಮರ್ಶಾ ಪಂಥ ಬೆಳೆಯಬೇಕು. ವ್ಯವಸಾಯಿ ರಂಗದ ದಿಕ್ಕನ್ನು ಬದಲಿಸಲು ಶಕ್ಯವಾಗುವಷ್ಟು ಹವ್ಯಾಸಿ ರಂಗಕ್ಕೆ ಕಾಯಕಲ್ಪವಾಗಬೇಕು. ಈಗಿನ ಹವ್ಯಾಸಿ ರಂಗವೆನ್ನುವುದು ವ್ಯವಸಾಯಿ ರಂಗದ ಪ್ರತಿ. ವ್ಯವಸಾಯಿಯು ಹವ್ಯಾಸಿ ರಂಗವನ್ನು ಅನುಕರಣೆ ಮಾಡುವ ಹಾಗಿರಬೇಕು. ಎಲ್ಲಿ ಹವ್ಯಾಸಿ ಚಳುವಳಿ ಬಲವಾಗಿದೆಯೋ, ಅಲ್ಲಿ ವ್ಯವಸಾಯಿ ರಂಗ ಕೂಡಾ ತಿದ್ದಿಕೊಳ್ಳುತ್ತದೆ. ಯಕ್ಷಗಾನವನ್ನು ಹೆಚ್ಚಾಗಿ ನೋಡದ, ಕೇಳದ ಜನವರ್ಗಗಳಿಗೆ ಅದನ್ನು ತಲುಪಿಸಬೇಕು. ಯಕ್ಷಗಾನವನ್ನು ಅಚ್ಚುಕಟ್ಟಾದ ರಂಗಶಿಸ್ತಿಗೆ ಒಳಪಡಿಸಿ, ಹಿತವಾದ ಮಾತು, ಚೊಕ್ಕ ಕುಣಿತ, ಕ್ರಮಬದ್ಧ ವ್ಯವಸ್ಥೆಯ ವೇಷಭೂಷಣಗಳನ್ನು ಅಳವಡಿಸಿ, ಕರ್ನಾಟಕದ ಇತರ ಪ್ರದೇಶಗಳೀಗೆ ಕೊಂಡೊಯ್ಯ ಬೇಕು. ರಾಷ್ಟ್ರೀಯ, ಅಂತಾರಾಷ್ಟ್ರೀಯ ವೇದಿಕೆಗಳಲ್ಲಿ, ಮಾಧ್ಯಮಗಳಲ್ಲಿ ಇದಕ್ಕೆ ಪ್ರಾಶಸ್ತ್ಯ ಸಿಗುವಂತಾಗಬೇಕು. ಕಲಾವಿದರು, ಸಂಘಟಕರು, ಮೇಳಗಳು, ಪೋಷಕರು, ಖಚಿತವಾದ ಕಲಾ ಸಿದ್ಧಾಂತದ ಆಧಾರದಲ್ಲಿ ಯೋಚಿಸಬೇಕು. ಕ್ಷಣಿಕ ರಂಜನೆ, ಜನಪ್ರಿಯತೆ ವಿಶೇಷ ಆಕರ್ಷಣೆಗಳ ಬಗೆಗಲ್ಲ.

**(ಪ್ರಕಟ : ಉದಯವಾಣಿ)**



"ಕನ್ನಡ ಸಾಹಿತ್ಯ ಕ್ಷೇತ್ರದಲ್ಲಿ ಸಾಹಿತ್ಯ ಚರಿತ್ರೆಗಳಲ್ಲಿ ಯಕ್ಷಗಾನ ಕವಿಗಳನ್ನು ಅಲಕ್ಷಿಸಿದ್ದು ಸರಿಯಲ್ಲ. ಯಕ್ಷಗಾನ ಕವಿಗಳನ್ನು ಪ್ರಾದೇಶಿಕಗೊಳಿಸಿ ಅವರನ್ನು ಒಂದು ವಲಯಕ್ಕೆ ಮಾತ್ರ ಸೀಮಿತ ಗೊಳಿಸುವುದು ಸಲ್ಲದು. ಪಾರ್ತಿಸುಬ್ಬನಂತಹ ಯಕ್ಷಗಾನ ಕವಿಗಳಿಗೆ ಕುಮಾರವ್ಯಾಸ, ರತ್ನಾಕರವರ್ಣಿಯವರಂತಹ ಕವಿಶ್ರೇಷ್ಠರ ಮನ್ನಣೆ ಸಿಗಲೇಬೇಕಾಗಿದೆ. ಯಾಕೆಂದರೆ ಕುಮಾರವ್ಯಾಸನ ಬಳಿಕ ಜನಮಾನಸದಲ್ಲಿ ಅಚ್ಚಳಿಯದೆ ನೆಲೆನಿಂತ ಮತ್ತೊಬ್ಬ ಕವಿ ಪಾರ್ತಿಸುಬ್ಬ.

**ಸಮರಸ ಬ್ಲಾಗ್**

# ಅಮೆರಿಕಾದಲ್ಲಿ ತಾಳಮದ್ದಳೆಯ ಹಸಿವು

**ನಾ. ಕಾರಂತ ಪೆರಾಜೆ**

ಯಕ್ಷಗಾನದ ವಿದ್ವಾಂಸ, ವಿಮರ್ಶಕ, ಅರ್ಥದಾರಿ ಡಾ.ಎಂ. ಪ್ರಭಾಕರ ಜೋಶಿ ಅಮೇರಿಕಾ ದೇಶಕ್ಕೆ ಹೋಗಿದ್ದಾರೆ, ಮರಳಿದ್ದಾರೆ! ಇದರಲ್ಲೇನು ವಿಶೇಷ? ಎರಡು ತಿಂಗಳ ಖಾಸಗಿ ಪ್ರವಾಸ. ಸಮಯ, ಸಂದರ್ಭ ಸಿಕ್ಕರೆ ಸಾಹಿತ್ಯ ಉಪನ್ಯಾಸಗಳ ಒಲವಿತ್ತು. ಅಮೇರಿಕಾ ತಲಪುವಾಗ ಹತ್ತು ತಾಳಮದ್ದಳೆಗಳ ಆಯೋಜನೆಯು ಜೋಶಿಯವರಿಗೆ ಆಶ್ಚರ್ಯ ಮೂಡಿಸಿತ್ತು. ಕರಾವಳಿ ಮೂಲದ ಟೆಕ್ಸಾಸ್‌ನಲ್ಲಿರುವ ಪಣಂಬೂರು ವಾಸುದೇವ ಐತಾಳರ ಕ್ಷಿಪ್ರ ಆಯೋಜನೆಯ ಕಾರ್ಯಕ್ರಮ ಸರಣಿ. ಲೇಖಕ ಶ್ರೀವತ್ಸ ಜೋಶಿ, ಬಳಗದ ಹೆಗಲೆಣೆ. ಮಿಂಚಂಚೆ ಸಂಪರ್ಕದ ವ್ಯವಸ್ಥಿತ ಯಕ್ಷ ಪ್ಯಾಕೇಜ್‌ಗಳು!

ತಾಳಮದ್ದಳೆ ಅಂದಾಗ ಇಲ್ಲಿನ ವ್ಯವಸ್ಥೆಗಳನ್ನು ಕಲ್ಪಿಸಿಕೊಳ್ಳಬೇಡಿ. ಕಡಲಾಚೆಯ ಸಂಪನ್ಮೂಲಗಳು ಮತ್ತು ತಂತ್ರಜ್ಞಾನಗಳ ಪೂರ್ಣ ಬಳಕೆ. ಯೂಟ್ಯೂಬಿನಲ್ಲಿ ಲಭ್ಯವಾಗುವ ಗುಣಮಟ್ಟದ ಕೂಟಾಟದ ಕ್ಲಿಪ್ಪಿಂಗ್ಸ್‌ಗಳನ್ನು ಕಂಪ್ಯೂಗೆ ಇಳಿಸಿಕೊಂಡು ಪ್ರಸಂಗ ಪದ್ಯಗಳ ಆಯ್ಕೆ.

ಬೇಕಾದ ಪದ್ಯಗಳನ್ನು ಪ್ರತ್ಯೇಕವಾಗಿ ಮುದ್ರಿಸಿಕೊಂಡು ಜೋಡಣೆ. ಇದನ್ನು ನಿರ್ವಹಿಸಲೆಂದೇ ಒಬ್ಬ ನಿರ್ವಾಹಕ. ಅರ್ಥ ಮುಗಿದಾಗ ಗುಂಡಿ ಒತ್ತಿದರಾಯಿತು, 'ಇ-ಭಾಗವತಿಕೆ'ಯ ನಿರಾಕಾರ ಸೊಗಸಿನ ಸಾಕಾರ. ಎರಡು ಎರಡೂವರೆ ಗಂಟೆಗಳಿಗೆ ಹೊಂದುವಂತೆ 'ಭೀಷ್ಮ ಪರ್ವ' ಮತ್ತು 'ವಾಲಿವಧೆ' ಪ್ರಸಂಗಗಳು.

ಡಾ.ಜೋಶಿಯವರಿಗೆ ಭೀಷ್ಮ, ವಾಲಿ ಪಾತ್ರಗಳು. ಮಿಕ್ಕಂತೆ ಅರ್ಥಗಾರಿಕೆಯ ಸ್ಪರ್ಶವುಳ್ಳ ಸ್ಥಳೀಯರು! ಒಂದೆಡೆ ವಾಲಿವಧೆ ಪ್ರಸಂಗದಲ್ಲಿ 'ತಾರೆ'ಯ ಅರ್ಥವನ್ನು ಮಹಿಳೆಯೋರ್ವರು ನಿರ್ವಹಿಸಿದ್ದರು. ಬಾಲ್ಯದಲ್ಲಿ ಯಕ್ಷಗಾನದೊಂದಿಗೆ ಬೆಳೆದು ಉದ್ಯೋಗ ನಿಮಿತ್ತ ವಿದೇಶದಲ್ಲಿರುವ ಬಂಧುಗಳು ಪ್ರೇಕ್ಷಕರು. ಸರಣಿ ನಿಗದಿ ಆಗುತ್ತಿರುವಾಗಲೇ ಟೊರೆಂಟೋದಲ್ಲಿರುವ ಯಕ್ಷಗಾನದ ಮೇಳವು ಜತೆ ಸೇರಿತು. "ಬಹುಶಃ ಇದು ವಿಶ್ವದಲ್ಲಿಯೇ ಪ್ರಥಮವೇನೋ. ನನಗೂ ಅಲ್ಲೊಂದು ಮೇಳವಿದೆ ಅಂತ ಗೊತ್ತಿರಲಿಲ್ಲ. ವಿದೇಶದಲ್ಲಿ ಮೇಳ ಕಟ್ಟಿದ ನವೀನ ಹೆಗಡೆ, ರಘು ಕಟ್ಟಿನಕೆರೆ ಇವರ ಕೆಲಸ ಶ್ಲಾಘನೀಯ" ಎನ್ನುತ್ತಾರೆ ಡಾ.ಜೋಶಿ.

ವಾಶಿಂಗ್ಟನ್‌ನ ಅಲ್ಬನಿನ ಭಕ್ತಾಂಜನೇಯ ದೇವಸ್ಥಾನದಲ್ಲಿ ಪೂರ್ಣ ಪ್ರಮಾಣದ – ಹಿಮ್ಮೇಳ ಸಹಿತ–ತಾಳಮದ್ದಳೆ. ಪ್ರಸಂಗ 'ಭರತಾಗಮನ.' ಜೋಶಿಯವರ ರಾಮ. ದೇವಳದ ಮುಖ್ಯ ಅರ್ಚಕ, ವಿದ್ವಾನ್ ಬಾಲಕೃಷ್ಣ ಭಟ್ಟರ 'ಭರತ'ನ ಪಾತ್ರ. ಯಾರಿಗೆಲ್ಲಾ ಸರಣಿಗೆ ಬರಲಾಗಲಿಲ್ಲವೋ ಅವರೆಲ್ಲಾ ಜೋಶಿಯವರನ್ನು ಖಾಸಗಿಯಾಗಿ ಮನೆಗೆ ಆಹ್ವಾನಿಸುತ್ತಿದ್ದರು. "ನನ್ನ ಶಾಲಾ ಸಹಪಾಠಿಗಳ ಕುಟುಂಬ, ಅವರ ಸಂಬಂಧಿಕರು, ಮಗಳಂದಿರ ಆಪ್ತ ವರ್ತುಲ... ಹೀಗೆ ಪ್ರತಿ ದಿನ ಒಂದಲ್ಲ ಒಂದು ಮನೆಯಲ್ಲಿ ತುಂಬು ಆತಿಥ್ಯ. ಆವರಿಸಿಕೊಳ್ಳುವ ಆಪ್ತತೆ. ಬಹುತೇಕ ಮನೆಗಳಲ್ಲಿ ಕನ್ನಡದ ಸಂಸ್ಕೃತಿ ಜೀವಂತವಾಗಿದೆ," ಎನ್ನುತ್ತಾ ವಿದೇಶ ನೆಲದ ಅನುಭವವನ್ನು ಜೋಶಿ ಕಟ್ಟಿಕೊಡುತ್ತಾರೆ, "ನಾವು ಇಲ್ಲಿ ಕುಳಿತು ವಿದೇಶವನ್ನು ಹಳಿಯುತ್ತೇವೆ. ನಾವು ಏನನ್ನು, ಎಷ್ಟನ್ನು ತಿಳಿದುಕೊಂಡಿದ್ದೇವೋ ಅದಕ್ಕಿಂತ ಭಿನ್ನವಾದ ಬದುಕು ಅಲ್ಲಿದೆ."

ನಮ್ಮೂರಿನಲ್ಲಿ ಯಾವುದೇ ಕಾರ್ಯಕ್ರಮವಿರಲಿ, ಧ್ವನಿವರ್ಧಕ ವ್ಯವಸ್ಥೆ ಭೀಕರ! ಹೈ ವಾಲ್ಯೂಮ್‌ನಿಂದ ಬಹುತೇಕರ ಕಿವಿ ಸ್ತಬ್ಧವಾಗಿದೆ! ಈ ಒನ್ನೆಲೆಯಲ್ಲಿ ಅಲ್ಲಿನ ಧ್ವನಿವರ್ಧಕದ ವ್ಯವಸ್ಥೆ ಶ್ಲಾಘನೀಯ. ಹೆಚ್ಚಿನವರು ಇಲೆಕ್ಟ್ರಾನಿಕ್ ಇಂಜಿನಿಯರ್‌ಗಳು. ಅವರಿಗೆ ಧ್ವನಿವರ್ಧಕದ ಬಳಕೆಯ ಜ್ಞಾನವಿದೆ. ಅದರ ಅಳವಡಿಕೆ, ನಿರ್ವಹಣೆಯ ವಿಧಾನ, ವಿಕಾರವಾಗಿ ಬೊಬ್ಬಿಡದ 'ಕಿಣಿ'ಗಳನ್ನು ನಾವು ಅಲ್ಲಿಂದ ಕಲಿಯಬೇಕಾದುದು ಬೇಕಾದಷ್ಟಿದೆ. ಪ್ರೇಕ್ಷಕರ ಶ್ರವಣ ಶಕ್ತಿಯನ್ನು ಕಾರ್ಯಕ್ರಮಗಳು ಕಸಿದುಕೊಳ್ಳುವುದಿಲ್ಲ!

ತಾಳಮದ್ದಳೆಯನ್ನು ಹೇಗೆ ಅನುಭವಿಸುತ್ತಾರೆ? ಜೋಶಿ ಹೇಳುತ್ತಾರೆ, "ಏನಿಲ್ಲವೆಂದರೂ ಐವತ್ತರಿಂದ ನೂರು ಮಂದಿಯ ಉಪಸ್ಥಿತಿ ಖಾಯಂ. ಅವರಿಗೆ ತಾಳಮದ್ದಳೆಯನ್ನು ಕೇಳಲು ಹಸಿವಿದೆ. ಶೈಕ್ಷಣಿಕವಾಗಿ ಗಟ್ಟಿಯಾದ ವಿಮರ್ಶಕರು. ಕೊನೆಗೆ ಪ್ರಶ್ನೋತ್ತರ. ತಾಳಮದ್ದಳೆಯನ್ನು ಕೇವಲ ಕೌತುಕವಾಗಿ ನೋಡುವುದಲ್ಲ. ಅದನ್ನು ಅನುಭವಿಸುತ್ತಾರೆ.

ಅಲ್ಲಿ ರಸಿಕತೆ ಪ್ರೌಢವಾಗಿದೆ. ಮಾತುಮಾತಿಗೆ ನಗುವುದು, ಚಪ್ಪಾಳೆಗಳು ಇಲ್ಲವೇ ಇಲ್ಲ! ಒಂದು ಕಲೆಯಾಗಿ ಸ್ವೀಕರಿಸಿದ್ದಾರೆ."

2015 ಆಗಸ್ಟ್ 29ರಿಂದ ಸೆಪ್ಟೆಂಬರ್ 19ರ ತನಕ ಸೈಂಟ್ ಲೂವಿಸ್, ಚಿಕಾಗೋ, ಮೇರಿಲ್ಯಾಂಡ್, ಸನ್‌ಜೋಸ್, ಬರ್ಕ್‌ಲೀ, ಹೂಸ್ಟನ್, ಮೈಮಿ.. ಗಳಲ್ಲಿ ತಾಳಮದ್ದಳೆ. ಕಾರ್ಯಕ್ರಮದ ಆರಂಭಕ್ಕೆ ಔಚಿತ್ಯದ ಕುರಿತು ಸಂಘಟಕರಿಂದ ಮಾತು. ನಂತರ ಕೂಟ. ಕೊನೆಗೆ 'ನೀವು ಊರಿಗೆ ಮರಳಿದಾಗ ಯಕ್ಷಗಾನಕ್ಕೆ ನೀಡಬಹುದಾದ ಪ್ರೋತ್ಸಾಹ'ದ ಟಿಪ್‌ಗಳ ಪ್ರಸ್ತುತಿ. ವ್ಯವಸ್ಥಿತವಾದ ಆಯೋಜನೆ.

ಕೂಟಗಳಲ್ಲದೆ ಮಂಕುತಿಮ್ಮನ ಕಗ್ಗ, ಗಣೇಶ ಮತ್ತು ಗುರು.. ಈ ವಿಚಾರಗಳ ಉಪನ್ಯಾಸ. ಯೂನಿವರ್ಸಿಟಿ ಆಫ್ ಕ್ಯಾಲಿಫೋರ್ನಿಯಾದ ಕಾರ್ಯಕ್ರಮವನ್ನು ಸಂಸ್ಕೃತ ವಿದ್ವಾಂಸ ಪ್ರೊ.ರಾಬರ್ಟ್ ಗೋಲ್ಡ್‌ಮನ್ ಸಂಘಟಿಸಿದ್ದರು. 1970ರ ಸುಮಾರಿಗೆ ಇದೇ ವಿವಿಯ ವಿದ್ಯಾರ್ಥಿನಿ ಮಾರ್ತಾ ಆಸ್ಟನ್ ಸಿಕೋರಾ ಕನ್ನಾಡಿಗೆ ಬಂದಿದ್ದರು. ಯಕ್ಷಗಾನದ ವಿಶೇಷ ಅಧ್ಯಯನ ಮಾಡಿದ್ದು ಗಮನೀಯ. ಸರಣಿಯ ಕೆಲವು ಕಾರ್ಯಕ್ರಮ ಗಳಲ್ಲಿ ಮಾರ್ತಾ ಉಪಸ್ಥಿತರಿದ್ದುದು ಗಮನಾರ್ಹ.

ಒಟ್ಟೂ ಸರಣಿ ಕೂಟದ ಪುಳಕವನ್ನು ಹೊತ್ತು ತಂದ ಜೋಶಿ ಹೇಳುವುದು ಹೀಗೆ: ಹತ್ತೋ ಇಪ್ಪತ್ತು ವರುಷದ ಹಿಂದೆ ಹೋಗಬೇಕಿತ್ತು. ಯಕ್ಷಗಾನ, ಕರಾವಳಿ ಮತ್ತು ಅಲ್ಲಿನ ಮನಸ್ಸುಗಳನ್ನು ಒಂದುಗೂಡಿಸುವ ಚಿಕ್ಕ ಹೆಜ್ಜೆಯೂರಬಹುದಿತ್ತು ಅನ್ನಿಸುತ್ತದೆ. ಏನು ಮಾಡಲಿ, ಕಾಲ ಮಿಂಚಿಹೋಯಿತು. ಒಂದೆಡೆ ಸಮೃದ್ಧ ಕಲಾ ಮಜಲು, ಇನ್ನೊಂದೆಡೆ ಅದು ಬೇಕೆಂಬ ಹಪಾಹಪಿ–ಈ ಎರಡೂ ದಡಗಳನ್ನು ಸೇರಿಸಬಹುದಿತ್ತು!

ಮಂಗಳೂರು, ಮೂಡುಬಿದಿರೆ, ಕಾರ್ಕಳ.. ಮೊದಲಾದ ಪ್ರದೇಶಗಳಲ್ಲಿದ್ದ ಈಗ ಅಲ್ಲಿನವರಾದ ಆಪ್ತರ, ಬಂಧುಗಳ ಭೇಟಿ. ಚಿಕಾಗೋದಲ್ಲಿ ಹಿರಿಮಗಳು ಶ್ವೇತಾ ಸೂರ್ಯನಾರಾಯಣ, ವರ್ಜೀನಿಯಾದಲ್ಲಿ ಕಿರಿ ಮಗಳು ಸ್ವಾತಿ ಕಾರ್ತಿಕ್ ಕುಟುಂಬ ವಾಸ್ತವ್ಯವಿದೆ. ಅವರೊಂದಿಗೆ ಕಳೆಯಲು ಜೋಶಿ ಮೊದಲ ಬಾರಿಗೆ ಅಮೇರಿಕಾಕ್ಕೆ ಹೋಗಿದ್ದರು. ಆದರೆ ಯಕ್ಷಗಾನವು ಅಲ್ಲೂ ಅವರನ್ನು ಕಾಲಯಾಪನೆಗೆ ಬಿಟ್ಟಿಲ್ಲ! "ನನ್ನ ನಿರೀಕ್ಷೆಗೂ ಮೀರಿದ ಗೌರವ, ಊಹಿಸದ ರೀತಿಯ ಸ್ಪಂದನ. ಇದೆಲ್ಲ ಬೆಳೆದು ನಿಂತ ಯಕ್ಷಗಾನ ಕಲೆಗೆ ಸಂದ ಮಾನ. ನಾನು ಅದರ ಪ್ರತಿನಿಧಿಯಷ್ಟೇ. ಕಲೆಯನ್ನು ಪ್ರೀತಿಸುವ ಅಪ್ಪಟ ಸಹೃದಯರ ಋಣವನ್ನು ಹೇಗೆ ತೀರಿಸಲಿ" ಎನ್ನುವಾಗ ಭಾವುಕರಾಗುತ್ತಾರೆ.

ಪ್ರವಾಸ ಮುಗಿಸಿ ಮರಳಿದಾಗ ಕಂಪ್ಯೂನಲ್ಲಿ ರಾಶಿ ರಾಶಿ ಮಿಂಚಂಚೆಗಳು. ಕಾರ್ಯಕ್ರಮದ ಹಿಮ್ಮಾಹಿತಿಗಳು. "ನನಗೊಂದು ಹೊಸ ಅನುಭವ. ವಿದೇಶಿ ಬಂಧುಗಳ ಕೃತಜ್ಞತೆಯ ಭಾರವನ್ನು ಹೊತ್ತು ದೇಶಕ್ಕೆ ಮರಳಿದ್ದೇನೆ. ಇನ್ನೊಂದೆರಡು ತಿಂಗಳು ಇರುತ್ತಿದ್ದರೆ ಕೂಟಗಳ, ಸಂಪರ್ಕಗಳ ಸಂಖ್ಯೆ ಹಿರಿದಾಗುತ್ತಿತ್ತು," ಎನ್ನುತ್ತಾ ಮಾತುಕತೆಗೆ ಮುಕ್ತಾಯ ಹಾಡುತ್ತಾರೆ, "ಆಟವೇ ಮಾತ್ರ ಒಂದು ಫಾರ್ಮ್ ಅಲ್ಲ, ತಾಳಮದ್ದಳೆಯೂ ಒಂದು ಫಾರ್ಮ್ ಎಂದು ತಿಳಿಸಲು ಈ ಟೂರ್‌ನಿಂದ ಸಾಧ್ಯವಾಯಿತು."

**(ಪ್ರಜಾವಾಣಿಯ 'ದಧಿಗಿಣತೋ' ಅಂಕಣ / 26–12–2015)**

# ಕೆನಡಾ ಯಕ್ಷಮಿತ್ರರ ಅರ್ಥಪೂರ್ಣ ಪಯಣ



**Yakshamitra |**
***Toranto, Canada***

**ನಾ. ಕಾರಂತ ಪೆರಾಜೆ**

"ವಿದೇಶದಲ್ಲೂ ಅತ್ಯಂತ ಸುಸಜ್ಜಿತ ಯಕ್ಷಗಾನ ಮೇಳವಿದೆ."

ಯಕ್ಷಗಾನ ವಿದ್ವಾಂಸ, ಅರ್ಥದಾರಿ ಡಾ.ಎಂ.ಪ್ರಭಾಕರ ಜೋಶಿಯವರು ಕೆನಡಾದಿಂದ ಮಿಂಚಂಚೆ ಕಳುಹಿಸಿದರು. ವಿನೋದಕ್ಕೆ ಅಂದಿರಬಹುದೆಂದು ಮರೆತುಬಿಟ್ಟಿದ್ದೆ. ವಾರದಲ್ಲೇ ಕಾರ್ಯಕ್ರಮಗಳ ರಾಶಿ ರಾಶಿ ಚಿತ್ರಗಳು ಕಂಪ್ಯೂನ ಇನ್‌ಬಾಕ್ಸಿನಲ್ಲಿತ್ತು. "ಯಕ್ಷಗಾನವು ಇರುನೆಲೆಯಲ್ಲಿ ಇನ್ನೂ ಅಭಿವೃದ್ಧಿಯಾಗಬೇಕೆನ್ನುವ ತಿಳಿವಳಿಕೆ ಪ್ರಬಲವಾಗಿ ಮೂಡಬೇಕು. ಅಲ್ಲಿ ಈಗಲೇ ಅದು ಬೇರುಬಿಟ್ಟಿರುವುದು ಖುಷಿ ತಂದಿದೆ," ಎಂದು ಮಾತಿಗಿಳಿದರು.

ಕೆನಡಾ ಟೊರೆಂಟೋದ 'ಯಕ್ಷ ಮಿತ್ರ' ಸಂಘಟನೆಯು ಪೂರ್ಣ ಪ್ರಮಾಣದ ಮೇಳ ಸ್ವರೂಪದಲ್ಲಿದೆ. ಪ್ರಾಯಃ ಅದಕ್ಕೀಗ ದಶಮಾನದ ಖುಷಿ. ಸಾಗರ ಮೂಲದ ರಾಘವೇಂದ್ರ ಕಟ್ಟಿನಕೆರೆ ನಿರ್ದೇಶಕರು. ವರುಷಕ್ಕೆ ಏನಿಲ್ಲವೆಂದರೂ ಇಪ್ಪತ್ತರಿಂದ ಇಪ್ಪತ್ತೈದು ಆಟಗಳು. 2016 ಜೂನ್ 2ರಿಂದ 14ರ ತನಕ ಜೋಶಿಯವರ ಪ್ರವಾಸ. ಐದಾರು ದಿವಸ ಟೊರೆಂಟೋ, ಒಟ್ಟಾವಾ, ಮೋಂಟ್ರಿಯಲ್‌ಗಳಲ್ಲಿ ಯಕ್ಷಗಾನದ್ದೇ ಕಾರ್ಯಕ್ರಮ.

ಟೊರೆಂಟೋದ ಕಾರ್ಯಕ್ರಮಕ್ಕೆ ಹೊರಗಿನಿಂದ ಆಮದು ಕಲಾವಿದರಿಲ್ಲ. ಜೋಶಿ ಮಾತ್ರ ಅತಿಥಿ. ಮಿಕ್ಕವರೆಲ್ಲಾ ಅಲ್ಲೇ ಸಿದ್ಧ

ರಾದವರು. ವೀಡಿಯೋ ಕಾನ್ಫರೆನ್ಸ್ ಮೂಲಕ ಸಮಾಲೋಚನೆ. ಯಾವ ಪಾತ್ರವನ್ನು ಯಾವ ಕೋನದಲ್ಲಿ ಚಿತ್ರಿಸಬೇಕೆನ್ನುವ ಪೂರ್ವಭಾವಿ ತರಬೇತಿಗಳು ಪ್ರದರ್ಶನದ ಒಟ್ಟಂದಕ್ಕೆ ಪೂರಕ. 'ರಾವಣ ವಧೆ ಮತ್ತು ಭೀಷ್ಮ ಪರ್ವ' ಪ್ರಸಂಗಗಳ ತಾಳಮದ್ದಳೆ. ಜೋಶಿಯವರಿಗೆ 'ರಾವಣ ಮತ್ತು ಭೀಷ್ಮ'ನ ಪಾತ್ರ. ಮೇಳದಿಂದ 'ವಾಲಿ ವಧೆ' ಪ್ರಸಂಗದ ಪ್ರದರ್ಶನ.

ನಮ್ಮಲ್ಲಿ ಧ್ವನಿವರ್ಧಕದ ವಿಪರೀತ ಬೊಬ್ಬಾಟದಿಂದಾಗಿ ಯಕ್ಷಗಾನವನ್ನು ವೀಕ್ಷಿಸುವುದು, ಆಲಿಸುವುದು ತೀರಾ ಹಿಂಸೆ! ಎಲ್ಲಿಯವರೆಗೆ ಅಂದರೆ ಧ್ವನಿಯ ಅಟ್ಟಹಾಸಕ್ಕೆ ಪ್ರೇಕ್ಷಕರೇ ಎದ್ದು ಹೋಗಿರುವುದನ್ನು ನೋಡಿದ್ದೇನೆ. ಕಲಾವಿದರಿಗೆ ವಾಲ್ಯೂಮ್ ಹೈ ಮತ್ತು ಶಾರ್ಪ್ ಕೊಟ್ಟಷ್ಟು ಸಂತೃಪ್ತಿ. ಎಷ್ಟೋ ಸಲ ಭಾಗವತಿಕೆಯನ್ನು ಚೆಂಡೆ, ಮದ್ದಳೆಗಳ ನುಡಿತಗಳು ನುಂಗಿಬಿಡುತ್ತವೆ! "ಟೊರೆಂಟೋದ ಧ್ವನಿವರ್ಧಕ ವ್ಯವಸ್ಥೆ ತುಂಬಾ ಖುಷಿಯಾಯಿತು. ಕಾರ್ಯಕ್ರಮಕ್ಕೆ ಒಂದರ್ಧ ಗಂಟೆ ಮೊದಲು ಮೈಕ್ ಬ್ಯಾಲೆನ್ಸ್ ಮಾಡಿಬಿಡುತ್ತಾರೆ. ಮಧ್ಯೆ ಮಧ್ಯೆ ಏರಿಸುವ, ಇಳಿಸುವ ಪ್ರಕ್ರಿಯೆ ಇಲ್ಲ. ನಮ್ಮಲ್ಲೂ ಇಂತಹ ಪ್ರಕ್ರಿಯೆಗಳತ್ತ ಯೋಚಿಸಬೇಕು."

ಕನ್ನಡ ಮೂಲದ ಸೀಮಿತ ಪ್ರೇಕ್ಷಕರು. ಜತೆಗೆ ರಂಗದ ಬಣ್ಣ, ನಡೆ, ಕುಣಿತದಲ್ಲಿ ಕಲೆಯನ್ನು ಕಂಡ ವಿದೇಶಿ ಕಲಾಪ್ರಿಯರು. ಪ್ರಸಂಗದ ಪದ್ಯ ಮತ್ತು ಭಾವಾರ್ಥವನ್ನು ಪರದೆಯಲ್ಲಿ ಮೂಡಿಸುವ ತಾಂತ್ರಿಕ ವ್ಯವಸ್ಥೆಗಳು ಕನ್ನಡೇತರರಿಗೆ ಕಥೆಯನ್ನು ಅರ್ಥೈಸಲು ಸುಲಭವಾಗಿತ್ತು. ಕರಪತ್ರ, ಕಟೌಟ್‌ಗಳೆಲ್ಲಾ ಯಕ್ಷಗಾನೀಯ. ತಾಳಮದ್ದಳೆಗೆ ಎರಡು ಗಂಟೆಯ ಕಾಲಾವಧಿ. ಹಿಮ್ಮಾಹಿತಿ ನೀಡುವ ಜಾಗೃತ ಪ್ರೇಕ್ಷಕ ವರ್ಗ. ಪ್ರಶ್ನೋತ್ತರಗಳ ಮೂಲಕ ಸಂದೇಹ ನಿವಾರಣೆ. "ವಾಲಿ ವಧೆ ಪ್ರಸಂಗದಲ್ಲಿ 'ವಾಲಿ-ತಾರೆ' ಪಾತ್ರಗಳ ಸಂವಾದವನ್ನು ಅನೇಕ ಮಂದಿ ಮೆಚ್ಚಿಕೊಂಡಿದ್ದರು. ರಾವಣ ಪಾತ್ರ ಮಾಡಿ ರಾಜನೀತಿಯಲ್ಲಿ ಹೇಗೆ ಮೈತ್ರಿ ಹುಟ್ಟುತ್ತದೆ ಎನ್ನುವ ತರ್ಕಗಳು ಜನ ಮುಟ್ಟಿದೆ. ಭೀಷ್ಮ ಪರ್ವದ 'ಭೀಷ್ಮ' ಪಾತ್ರ ಲೌಕಿಕ ಉದಾಹರಣೆಯನ್ನು ಕೊಡಬಹುದೇ ಎನ್ನುವ ಪ್ರಶ್ನೆಯನ್ನು ಎದುರಿಸಿದೆ," ಎಂದು ಕೆನಡಾ ಕೂಟದ ಅನುಭವ ಹಂಚಿಕೊಳ್ಳುತ್ತಾರೆ;

"ವೇಷ, ಸಂಪ್ರದಾಯದಲ್ಲಿ ರಾಜಿಯಿಲ್ಲದ ನಿಲುವು. ಮೆಚ್ಚಬೇಕಾದ ಪ್ರಗತಿ ಸಾಧಿಸಿದ್ದಾರೆ. ವಿದೇಶದಲ್ಲಿ ಯಕ್ಷಗಾನದ ಹೆಸರಿನಲ್ಲಿ ಏನೇನೋ ಮಾಡಿಲ್ಲ. ಅಲ್ಲಿ ರಂಗಭೂಮಿಯನ್ನು ಮೆಚ್ಚುವ ಕಣ್ಣಿದೆ. ಕಲಾರಸಿಕತೆಯ ಮಟ್ಟ ಚೆನ್ನಾಗಿದೆ. ರಂಗದಲ್ಲಿ ಗಾಢ ಬೆಳಕಿಲ್ಲ. ಅವರು ತಂತ್ರಜ್ಞಾನವನ್ನು ಆಟಕ್ಕೆ ಅಳವಡಿಸಿದ್ದಾರೆ. ತರಬೇತಿಯಿದೆ. ಪ್ರತಿ ನಿಮಿಷವೂ ಯೋಚನೆ, ಯೋಜನೆ. ಮಧ್ಯೆ ಮಧ್ಯೆ ಪ್ರೇಕ್ಷಕರು ಎದ್ದು ಹೋಗುವುದಿಲ್ಲ. ಶಿಳ್ಳೆ, ಚಪ್ಪಾಳೆಗಳಿಲ್ಲ. ಕಾರ್ಯಕ್ರಮದ ಕೊನೆಗೆ ದೀರ್ಘ ಕರತಾಡನದ ಪ್ರಶಂಸೆ."

ಪ್ರಜ್ಞಾಪೂರ್ವಕವಾದ ರಂಗಶಿಸ್ತು. ರಂಗಭೂಮಿಯನ್ನು ಬಳಸುವ ಕ್ರಮ, ನೃತ್ಯದ ತಿದ್ದುಪಕೆ ಇನ್ನಷ್ಟು ಸುಧಾರಿಸಬೇಕಾಗಿದೆ. ಮಾಧ್ಯಮಗಳಲ್ಲಿ ಯಕ್ಷಗಾನ ಪರಿಚಯವಾಗಬೇಕು. ವಿಶ್ವ ಥಿಯೇಟರಿಗೆ ಅಲೌಕಿಕ ಕಲೆಯ ಸೊಬಗನ್ನು ತಿಳಿಸುವ ಕೆಲಸ ಆಗಬೇಕಾಗಿದೆ.

ಕೆನಡಾ, ಅಮೇರಿಕಾದಂತಹ ವಿದೇಶ ನೆಲದಲ್ಲಿ ದುಡಿಯುವ ಕೈಗಳಿಗೆ ಉಣ್ಣಲು ಪುರುಸೊತ್ತಿಲ್ಲ! ಉದ್ಯೋಗದ ಧಾವಂತದಲ್ಲಿ ಇಂತಹ ಆಸಕ್ತಿಗಳಿಗೆ ಸಮಯವನ್ನು ಹೊಂದಿಸುವುದು ದೊಡ್ಡ ಸವಾಲಿನ ಕೆಲಸ.

"ನಮ್ಮಲ್ಲಿಗೆ ತಾಳಮದ್ದಳೆ ತಂಡವನ್ನು ತನ್ನಿ" ಎನ್ನುವ ಬೇಡಿಕೆಯನ್ನು ಜೋಶಿಯವರಲ್ಲಿ ಮುಂದಿಟ್ಟರಂತೆ. "ಇಲ್ಲಿಂದ ಒಯ್ಯುವುದು ದೊಡ್ಡದಲ್ಲ. ಆದರೆ ಅವರನ್ನು ತಯಾರು ಮಾಡಿ, ಅವರಿಂದಲೇ ಪ್ರದರ್ಶನ, ತಾಳಮದ್ದಳೆ ಏರ್ಪಡಿಸುವುದರಿಂದ ಕಲೆಯ ವಿಸ್ತರಣೆ ಸಾಧ್ಯ," ಎನ್ನುತ್ತಾರೆ. ಸಾಂಸ್ಕೃತಿಕ ಮುಂದುವರಿಕೆ ವಿದೇಶಿ ನೆಲದಲ್ಲೂ ಆಗುತ್ತಾ ಇರುವುದು ಶ್ಲಾಘ್ಯ. ಸಣ್ಣ ಮಕ್ಕಳೂ ಯಕ್ಷಗಾನವನ್ನು ಆಸಕ್ತಿಯಿಂದ ನೋಡುತ್ತಾರೆ.

'ವಾಲಿ ವಧೆ' ಪ್ರದರ್ಶನಕ್ಕೆ ಮುನ್ನ 'ಮೌಲ್ಯವರ್ಧನಾ ಶಿಬಿರ' ಜರುಗಿತ್ತು. ವೇಷಗಳ ಪ್ರವೇಶ, ರಂಗಚಲನೆ, ವಾಲಿಯನ್ನು ತಾರೆ ತಡೆಯುವ ರೀತಿ, ಯುದ್ಧಗಳು, ಕೊರಿಯೋಗ್ರಫಿಯ ಬಳಕೆ, ಅರ್ಥಗಾರಿಕೆಯ ಪ್ರಸ್ತುತಿ... ಇವೇ ಮೊದಲಾದ ಮೂಲಭೂತ ಅಂಶಗಳ ಹೂರಣವನ್ನಿಟ್ಟುಕೊಂಡ ಕಾರ್ಯಸೂಚಿ. "ಈ ರೀತಿಯ ಸಮಾಲೋಚನೆಗಳು ಪ್ರದರ್ಶನದ ಯಶಕ್ಕೆ ಸಹಕಾರಿ. ನಮ್ಮಲ್ಲೂ ಇಂತಹ ಮನಃಸ್ಥಿತಿಗಳನ್ನು ರೂಪಿಸಿಕೊಳ್ಳಲೇ ಬೇಕಾಗಿದೆ," ಎನ್ನುವ ಆಗ್ರಹ ಜೋಶಿಯವರದು.

ವಿನಾಯಕ ಹೆಗಡೆ, ಪರಮ್ ಭಟ್, ರಘು ಕಟ್ಟಿನಕೆರೆ, ನವೀನ್ ಹೆಗಡೆ, ಶ್ರೀಕಾಂತ ಹೆಗಡೆ, ನಾಗಭೂಷಣ ಮಧ್ಯಸ್ಥ, ಉದಯ ಶಾಸ್ತ್ರಿ, ವಿಷ್ಣು ಭಟ್ – ಟೊರೆಂಟೋ ಮೇಳದ ಸಾರಥಿಗಳು. ಕಲ್ಲಭಾಗ್ ವಿನಾಯಕ್ ಹೆಗಡೆ, ರಘು ಕಟ್ಟಿನಕೆರೆ – ಭಾಗವತರು. ಎಲ್ಲರೂ ಕನ್ನಾಡಿನವರೇ. ದೂರದಲ್ಲಿದ್ದರೂ ಯಕ್ಷಗಾನದ ಆಸಕ್ತಿಯನ್ನು ಬಿಡದೆ ತಂಡ ಕಟ್ಟಿರುವುದು ಇತರರಗೆ ಸ್ಫೂರ್ತಿ.

"ಇನ್ನೊಮ್ಮೆ ಕೆನಡಾಕ್ಕೆ ಹೋಗುವ ಅವಕಾಶ ಸಿಕ್ಕರೆ ಹೇಗೆ ಸಿದ್ಧತೆ ಮಾಡಿಕೊಳ್ಳುತ್ತೀರಿ?" ಎನ್ನುವ ಕೀಟಲೆ ಪ್ರಶ್ನೆಗೆ ಜೋಶಿಯವರ ಉತ್ತರ ನೋಡಿ, "ಎರಡೂವರೆ ಗಂಟೆ ತಾಳಮದ್ದಳೆಯನ್ನು ಹೇಗೆ ಕ್ರಿಸ್ಪ್ ಆಗಿ ಕೊಡಬಹುದು. ಅಲ್ಲಿನ ಕಲಾವಿದರನ್ನು ಹೇಗೆ ಜೋಡಿಸಬಹುದು ಎನ್ನುವ ಯೋಚನೆಯಿದೆ." ಎಂದರು. ಕೆನಡಾದ ಆದಿವಾಸಿಗಳ ಕಥೆಯನ್ನು ಯಕ್ಷಗಾನಕ್ಕೆ ಅಳವಡಿಸುವ ದೊಡ್ಡ ಯೋಜನೆಯು ಯಕ್ಷಮಿತ್ರಕ್ಕಿದ್ದು ಜೋಶಿ ಬೆಂಬಲ ನೀಡಿದ್ದಾರೆ.

ಕಡಲಾಚೆ ಹಾರಿದ ಜೋಶಿಯವರಿಗೆ ಯಕ್ಷಗಾನವನ್ನು ಮರೆತು ಕುಟುಂಬದೊಂದಿಗೆ ಹಾಯಾಗಿ ವಿಹರಿಸಬಹುದಿತ್ತು. ಆದರೆ ಅಲ್ಲಿನ ಅಭಿಮಾನಿಗಳು ಪ್ರೀತಿಯ ಹಗ್ಗದಿಂದ ಕಟ್ಟಿಬಿಟ್ಟರು. ಜೋಶಿಯವರೊಂದಿಗೆ ಮಾತನಾಡುತ್ತಾ ಇದ್ದಂತೆ ನನಗೆ ಅರಿವಾದುದು ಇಷ್ಟು – "ಪ್ರದರ್ಶನದ ಪೂರ್ವಭಾವಿಯಾಗಿ ಸಮಾಲೋಚನೆ ಮಾಡಿಕೊಂಡರೆ ಉತ್ತಮವಾದ ಪ್ರದರ್ಶನವನ್ನು ಯಕ್ಷಗಾನೀಯವಾಗಿ ಕೊಡಬಹುದು. ನಮ್ಮಲ್ಲಿ ಯಾಕೆ ಸಾಧ್ಯವಾಗುತ್ತಿಲ್ಲ?"

**(ಪ್ರಕಟ : ಪ್ರಜಾವಾಣಿಯ 'ದಧಿಗಿಣತೋ' ಅಂಕಣ / 2–9–2016)**

# ಬಹುಶ್ರುತ ವಿದ್ವಾಂಸ



**ಎನ್. ಸುಬ್ರಹ್ಮಣ್ಯ ಬೈಪಾಡಿತ್ತಾಯ**

ತಾಳಮದ್ದಳೆ ಕ್ಷೇತ್ರದಲ್ಲಿ ಕರಾವಳಿಯ ಅಂಗ್ರಪಂಕ್ತಿಯ ಕಲಾವಿದ ಡಾ.ಜೋಶಿಯವರು. ತಮ್ಮ ಆಳವಾದ ಅಧ್ಯಯನ ಅನುಭವದಿಂದ ಯಾವುದೇ ಪಾತ್ರಗಳನ್ನು ಯಶಪ್ರದವಾಗಿ ನಿರ್ವಹಿಸಬಲ್ಲರು. 'ಲಕ್ಷ ಮೋದಕ ಹವನ, ವಿದ್ವಾಂಸನನ್ನು ಹುಲಿ ಸದೆಬಡಿಯುವುದು, ಬೆಲ್ಲದ ಗಣಪತಿ..' ಮುಂತಾದ ಬಹು ಸ್ವಾರಸ್ಯದ ಚುಟುಕು ದೃಷ್ಟಾಂತಗಳು ಇವರ ಶೈಲಿಯ ಮಾದರಿಗಳು. ರಾವಣ, ಕೌರವ, ವಾಲಿ, ಕಂಸ ಮೊದಲಾದ ಖಳನಾಯಕ ಪಾತ್ರಗಳ ಅರ್ಥಗಾರಿಕೆ ಇವರಿಗೆ ಹೆಚ್ಚು ಒಪ್ಪುತ್ತದೆ. "ಪ್ರಭಾಕರ ಜೋಶಿಯವರು; ಶೇಣಿ ಗೋಪಾಲಕೃಷ್ಣ ಭಟ್, ಸಾಮಗ ಸಹೋದರರು ಹಾಗೂ ಪಂಡಿತ ಪೆರ್ಲ ಕೃಷ್ಣ ಭಟ್ಟರಿಗಿಂತ ಎಷ್ಟೋ ಎಳೆಯವರಾದರೂ ಅವರೆಲ್ಲರ ಜೊತೆಯಲ್ಲಿ ಸರಿದೊರೆಯಾಗಿ ಅರ್ಥಹೇಳುವ ಪ್ರತಿಭಾ ಸಂಪನ್ನ" ಎಂಬುದಾಗಿ ನಮ್ಮ ನಾಡಿನ ಸಾಂಸ್ಕೃತಿಕ ರಾಯಭಾರಿ ದಿ.ಪ್ರೊ.ಕು.ಶಿ.ಹರಿದಾಸ ಭಟ್ಟರು, ಡಾ. ಜೋಶಿಯವರ 'ಕೃಷ್ಣ ಸಂಧಾನ' ಕೃತಿಗೆ ಬರೆದ ಮುನ್ನುಡಿಯಲ್ಲಿ ಕೊಂಡಾಡಿದ್ದಾರೆ. ಅವರೊಂದಿಗೆ ನಡೆಸಿದ ಸಂದರ್ಶನದ ಆಯ್ದ ಭಾಗ ಇಲ್ಲಿದೆ.

*** ಈ ಸಾಂಸ್ಕೃತಿಕ ನೆಲೆಯಲ್ಲಿ ತಮ್ಮ ಮನೆತನದ ಹಿನ್ನೆಲೆಯ ಕುರಿತು ಒಂದಿಷ್ಟು ಹೇಳಬಹುದು?**

ನಮ್ಮ ಅಜ್ಜ ಅನಿರುದ್ಧ ಭಟ್ಟರಿಗೆ ತೆಂಕು ಹಾಗೂ ಬಡಗುತಿಟ್ಟು ಯಕ್ಷಗಾನದ ಮದ್ದಳೆ ವಾದನದ ಅನುಭವವಿತ್ತು. ತಂದೆ ನಾರಾಯಣ ಜೋಶಿಯವರು ಮರಾಠಿ ಮತ್ತು ಸಂಸ್ಕೃತ ಭಾಷೆಗಳಲ್ಲಿ ವಿದ್ವಾಂಸರಾಗಿದ್ದರು. ಚಿಕ್ಕಪ್ಪ ಲಕ್ಷ್ಮಣ ಜೋಶಿಯವರಿಗೆ ಭಾಷಣ ಮಾಡುವುದರಲ್ಲಿ ದೊಡ್ಡ ಹೆಸರಿತ್ತು. ಬಂಧುಗಳಾದ ಶಂಕರ ಡೋಂಗ್ರೆ, ಶಂಕರ ಜೋಶಿ ಇವರಿಂದ ಅರ್ಥಗಾರಿಕೆಯ ಪ್ರಚೋದನೆಯಾಯಿತು. ಹೀಗಾಗಿ ಬಾಲ್ಯದಲ್ಲಿ ನನಗೆ ಬಲವಾದ ಆಸಕ್ತಿ ಮೂಡಿತು.

*** ತಾವು ಆಟ–ಕೂಟಗಳ ವೇದಿಕೆಗಳಲ್ಲಿ ಕಾಣಿಸಿಕೊಂಡ ಆರಂಭದ ಸನ್ನಿವೇಶ?**

ಕಾರ್ಕಳ ತಾಲೂಕಿನ ಮಾಳ ಎಂಬ ಗ್ರಾಮದ ಪರಶುರಾಮ ಯಕ್ಷಗಾನ ಸಂಘ ಹಾಗೂ ಕಾರ್ಕಳ ಅನಂತಶಯನ, ವೆಂಕಟರಮಣ ದೇವಸ್ಥಾನಗಳಲ್ಲಿ ನಡೆಯುತ್ತಿದ್ದ ವಾರದ ತಾಳಮದ್ದಳೆಯಲ್ಲಿ ಪಾಲ್ಗೊಳ್ಳುತ್ತಿದ್ದೆ. ನಲ್ಲೂರು ಭುಜಬಲಿ ಅತಿಕಾರಿ, ಎಸ್. ಕೃಷ್ಣರಾಯರು, ಶೇಡಿ ಗಣಪತಿ ಭಟ್ಟರೇ ಮೊದಲಾದ ಶ್ರೇಷ್ಠರ ಮಧ್ಯದಲ್ಲಿ ಒಂದೆರಡು ಪದ್ಯಗಳ ಸಣ್ಣ ಅರ್ಥವನ್ನು ಹೇಳಲಾರಂಭಿಸಿದೆ. ಸುಮಾರು 1967ರ ವೇಳೆ ನಮ್ಮ ಬಂಧುಗಳಾದ ಮುಂಡಾಜೆ ರಾಮಚಂದ್ರ ಭಟ್ಟರ ಮನೆಯಲ್ಲಿ ನಡೆದ 'ಕೃಷ್ಣ ಸಂಧಾನ' ತಾಳಮದ್ದಳೆಯಲ್ಲಿ ದೇರಾಜೆ ಸೀತಾರಾಮಯ್ಯನವರ 'ಕೃಷ್ಣ'ನಿಗೆ ನನ್ನ 'ಕೌರವ'; 1968ರಿಂದ ಶೇಣಿಯವರು ಹಾಗೂ ದೊಡ್ಡ ಸಾಮಗರ ಜೊತೆ ಅರ್ಥ ಹೇಳಲಾರಂಭಿಸಿದೆ.

*** ಹಿಂದಿನ ಕಾಲದ ತಾಳಮದ್ದಳೆ ವ್ಯವಸ್ಥೆಯ ಕುರಿತು....**

ಸುಮಾರು 1925ರ ವರೆಗೆಲ್ಲ ಈಗಿನ ಸ್ಥಿತಿಗಿಂತ ತುಂಬಾ ಸರಳವಾಗಿತ್ತು. ಪ್ರಚಾರ ವ್ಯವಸ್ಥೆ, ಪ್ರತ್ಯೇಕ ವೇದಿಕೆ, ಧ್ವನಿವರ್ಧಕ ಇದಾವುದೂ ಇಲ್ಲದೆ ಅನೌಪಚಾರಿಕ ಚಟುವಟಿಕೆಯಂತಿತ್ತು. ವಾರ್ಷಿಕೋತ್ಸವ, ಮದುವೆ, ಪೂಜೆ, ಪುಣ್ಯತಿಥಿ ಇಂತಹ ಸಂದರ್ಭಗಳಲ್ಲಿ ಸೇರಿದ ನೆಂಟರಿಷ್ಟರಲ್ಲೇ ಕಲಾವಿದರನ್ನು ಆಯ್ಕೆಗೊಳಿಸಿ ಚಾವಡಿ ತಾಳಮದ್ದಳೆ ನಡೆಯುತ್ತಿತ್ತು. ಕಾಲಕ್ರಮೇಣ ಸಂಘಟನಾ ಸ್ವರೂಪಗಳು ಬದಲಾದುವು. ಕಲಾಭಿರುಚಿಯುಳ್ಳ ಪ್ರೇಕ್ಷಕ ವರ್ಗವೂ ವಿಸ್ತಾರಗೊಂಡವು. ಅರ್ಥಗಾರಿಕೆಯೂ ವಿಕಾಸೋನ್ಮುಖವಾಗಿದೆ. ಸಂವಾದ ಪ್ರಧಾನವೆನಿಸಿ ಜನಪ್ರಿಯ ಜನಪದ ಕಲೆಯಾಗಿ ಬೆಳೆದಿದೆ.

*** ತಮ್ಮ ಅನೇಕ ಸಾಧನೆಗಳಲ್ಲಿ ಒಂದೆನಿಸಿರುವ 'ಶ್ರೀಕೃಷ್ಣ ಸಂಧಾನ' ಸಂಶೋಧನಾ ಗ್ರಂಥ ರಚನೆಗೆ ಮನಮಾಡಿದ ಬಗೆ?**

ದೇವಿದಾಸನೆಂಬ ಪ್ರಸಿದ್ಧ ಕವಿಯ ಕೃತಿಯು ಬಹು ಜನಪ್ರಿಯವೆನಿಸಿದೆ. ಇದಕ್ಕೆ

ಸುದೀರ್ಘವಾದ ರಂಗ ಇತಿಹಾಸವಿದೆ. ಪದ್ಯ ರಚನಾ ದೃಷ್ಟಿಯಿಂದ ಉನ್ನತಮಟ್ಟದ ಅಂಶಗಳು ಕಾಣಬಹುದಾಗಿದೆ. ರಾಜ್ಯಾಧಿಕಾರ, ಕುಟುಂಬ ನೀತಿ, ಕೌರವ-ಪಾಂಡವ ದಾಯಾದಿಗಳ ಕಲಹ, ಕೃಷ್ಣನ ಲೀಲಾನಾಟಕ,... ಇವೆಲ್ಲ ಬಹು ಕುತೂಹಲವಾದ ವಿಚಾರ. ಸಂವಾದ-ಮಾತುಗಾರಿಕೆಗೆ ವಿಪುಲವಾದ ಅವಕಾಶಗಳಿವೆ. ಅರ್ಥದಾರಿ ಬಡಕಬೈಲು ಪರಮೇಶ್ವರಯ್ಯ ಅವರು 'ಕಿಟ್ಣರಾಜಿ ಪರ್ಸಂಗೋ' ಎಂಬುದಾಗಿ ತುಳು ಬಾಷೆಯಲ್ಲಿ ಈ ಕೃತಿ ರಚಿಸಿದ್ದಾರೆ. ರಂಗ ಪ್ರಯೋಗದಲ್ಲಿ ಇದರ ಅಧ್ಯಯನ ಅವಶ್ಯಕತೆಯಿದೆ ಎಂಬ ಆಭಿಪ್ರಾಯ ಪ್ರಚೋದನೆಯಿಂದ ಇದರ ಸಂಶೋಧನೆಗೆ ಮನ ಮಾಡಿದೆ.

**(ಕೃಪೆ : 'ಸಾಧಕ ಸಂಪದ' ಗ್ರಂಥದಿಂದ ಆಯ್ದ ಭಾಗ)**



... "ಕರಾವಳಿ ಹಲವು ಭಾಷೆಗಳ ಸೌಹಾರ್ದದ ನೆಲೆವೀಡು. ಎಲ್ಲರೂ ತುಳು ಮಾತನಾಡುತ್ತಾರೆ. ತುಳುವರಂತೂ ಕನ್ನಡಿಗರೆನ್ನಲು ಹೆಮ್ಮೆಪಡುತ್ತಾರೆ. ಇಂಥಲ್ಲಿ ಹರಕೆ ಬಯಲಾಟ ಮೇಳಗಳು ತುಳು ಪೌರಾಣಿಕ ಯಕ್ಷಗಾನ ಆಡಲು ಆಡಿಸಲು, ನೋಡಲು ಪ್ರೋತ್ಸಾಹ ನೀಡಬೇಕಾಗಿದೆ..."

# ಯಕ್ಷಗಾನಕ್ಕೋರ್ವ ಡಾಕ್ಟರ್



**ರಾಜ್‌ಕುಮಾರ್ ಎಂ ಪೈವಳಿಕೆ**

ಯಕ್ಷಗಾನದಲ್ಲಿ ಕೆಲವೊಂದು ವಿಷಮ ಪಾತ್ರಗಳು ಎಂಬ ವರ್ಗೀಕರಣ ಏದೆ. ಬಳಕೆಯಲ್ಲಿ ಹೇಗಿದೆ ಎನ್ನುವುದಕ್ಕಿಂತ ಅಂತಹ ಪಾತ್ರಗಳನ್ನು ಹಾಗೆ ಕಲ್ಪಿಸುವುದಕ್ಕೆ ಸಾಧ್ಯವಿದೆ. ವಿತಂಡವಾದವೇ ಇದರ ನಿಲುವು. ಅಪ್ರಾಕೃತವಾದ ಸಿದ್ಧಾಂತವನ್ನು ಪ್ರತಿಪಾದಿಸುವಂತಹ ಪಾತ್ರಗಳು. ಒಂದೊಂದು ಪಾತ್ರಗಳು ಪ್ರಸಂಗಕ್ಕೆ ಹೊಂದಿಕೊಂಡು ನಿಲುವಿನಲ್ಲಿ ಬದಲಾವಣೆಯನ್ನು ತೋರ್ಪಡಿಸುವುದೂ ಇದೆ. ವಿಷಮವಾದವನ್ನೇ ನಿರೂಪಿಸುವಂತಹ ಪಾತ್ರಗಳನ್ನು 'ಖಳಪಾತ್ರಗಳು' ಎಂದು ವರ್ಗೀಕರಿಸು ವುದಕ್ಕೆ ಬರುವುದಿಲ್ಲ. ಎಲ್ಲಾ ಬಗೆಯ ಪಾತ್ರಗಳನ್ನು ಕೆಲವೊಮ್ಮೆ ವಿತಂಡವಾದವನ್ನೇ ನಿಲುವಾಗಿ ಸ್ಥಾಪಿಸುತ್ತವೆ. ಅಂತಹ ಪಾತ್ರಗಳ ನಿರೂಪಣೆಗೂ ವಿಶೇಷ ಅರ್ಹತೆಗಳಿರಬೇಕು.

ವಿಷಮವನ್ನು ಸಮವಾಗಿ ಬಿಂಬಿಸುವ ಪಾತ್ರಗಳು – ಒಂದು ರೀತಿಯಲ್ಲಿ ಜಾರುವ ಒದ್ದೆ ನೆಲದಲ್ಲಿ ಭದ್ರವಾಗಿ ಸ್ಥಿರವಾಗಿ ನಿಲ್ಲುವ ನಿಲುಮೆಯನ್ನು ಹೊಂದುವಂತಹ ಪಾತ್ರಗಳು! ಇವುಗಳನ್ನು ನಿರ್ವಹಿಸ ಬೇಕಾದರೆ ತಲೆಯಲ್ಲಿ ಸ್ವಲ್ಪ 'ಜನವಾಸ' ಇರಬೇಕು. ಪ್ರಬಲವಾದ

ಎದುರಾಳಿಯನ್ನು ಇಕ್ಕಟ್ಟಿಗೆ ಸಿಲುಕಿಸುವುದರೊಂದಿಗೆ ಸಹಜ ಸಿದ್ಧಾಂತವನ್ನು ಒರೆಗೆ ಹಚ್ಚಿ, ಆ ಸಿದ್ಧಾಂತದ ಪರೋಕ್ಷ ಪ್ರತಿಪಾದನೆ ಹೇಗೆ ಸಾಧ್ಯ ಎಂದು ತೋರುವಂತಹ ಪಾತ್ರಗಳು, ಅದು ಅಂಗದ ಸಂಧಾನದ 'ಪ್ರಹಸ್ತ', ವಾಮನ ಚರಿತ್ರೆ, ಕಚದೇವಯಾನೆ ಮುಂತಾದ ಪ್ರಸಂಗಗಳ 'ಶುಕ್ರಾಚಾರ್ಯ', ಸತ್ಯ ಹರಿಶ್ಚಂದ್ರದ 'ವಿಶ್ವಾಮಿತ್ರ', ಭೀಷ್ಮ ಪರ್ವದ 'ಕೌರವ' – ಹೀಗೆ ಹಲವು ಪಾತ್ರಗಳು ವಿಶಿಷ್ಟ ನಿಲುವಿಗೆ ಬದ್ಧವಾದ ಪಾತ್ರಗಳ ನಿರ್ವಹಣೆಗೆ ವಿಶೇಷ ಅರ್ಹತೆಗಳೊಂದಿಗೆ ಸಿದ್ಧಹಸ್ತರು.

ಇವರ ಪ್ರತಿಭೆಯನ್ನು ಕೇವಲ ಪಾತ್ರ ನಿರ್ವಹಣೆಯಿಂದ ಮಾತ್ರ ತುಲನೆ ಮಾಡುವುದಕ್ಕೆ ಅಸಾಧ್ಯ. ಯಕ್ಷಗಾನದ ವಿಷಯಕ್ಕೆ ಬಂದಾಗ ಹಲವು ಮುಖಗಳಲ್ಲಿ ಜೋಷಿಯವರ ಹೆಸರು ಬಹಳಷ್ಟು ಬರೆಯಲ್ಪಟ್ಟಿದೆ. ಇದು ಯಕ್ಷಗಾನ ಅಭಿಮಾನದ ಪ್ರಾಮಾಣಿಕ ದ್ಯೋತಕ. ತಾಳಮದ್ದಲೆ ಅರ್ಥದಾರಿಗಳಾಗಿ ಇಂದು ಹಿರಿಯ ಕಲಾವಿದರಾಗಿ ಜೋಶಿಯವರು ಮುಂದಿದ್ದಾರೆ.

ಯಕ್ಷಗಾನದ ಅರ್ಥಗಾರಿಕೆ ಪರಂಪರೆಗಳಲ್ಲಿ ರೂಪ ಹಲವಿದೆ. ಸಾಮಗದ್ವಯರ ಶೈಲಿ ಒಂದಾದರೆ ಶೇಣಿಯವರು ಮತ್ತು ದೇರಾಜೆ ಸೀತಾರಾಮಯ್ಯನವರು ರೂಪಿಸಿದ ಪರಂಪರೆ ಮತ್ತೊಂದು. ತಮ್ಮ ವಿದ್ವತ್ತಿನಿಂದಲೇ ಸಾಂಪ್ರದಾಯಿಕ ಅರ್ಥಗಾರಿಕೆಯಲ್ಲಿ ಹೆಸರಾದ ಪೆರ್ಲ ಕೃಷ್ಣ ಭಟ್, ಕುಂಬಳೆ ಸುಂದರ ರಾವ್.. ಹೀಗೆ ಹಲವು ಮುಖಗಳ ವೈವಿಧ್ಯತೆಯಲ್ಲಿ ಜೋಶಿಯವರ ಶೈಲಿ ತೀರ ಭಿನ್ನವಾಗಿ ನಿಲ್ಲುತ್ತದೆ.

'ಕರ್ಮಬಂಧ' ಪ್ರಸಂಗದ 'ಕೌರವ'ನ ಪಾತ್ರ ವಹಿಸುತ್ತಾ ಜೋಶಿಯವರು, ಅಜ್ಜ ಭೀಷ್ಮನ ಜತೆಗಿನ ಸಂವಾದದ ಒಂದು ಸಂದರ್ಭ : "ಗಾಂಧಾರಿ ಸಿಟ್ಟಿನಲ್ಲಿ ತನ್ನ ಬಸುರನ್ನು ಬಡಿದು ಆ ಬಸುರಿನ ನಂಜು ಸಿಡಿದು ಕೌರವರು ನೂರು ಮಂದಿಯಾದರು" ಎಂದು ಭೀಷ್ಮ ಮೊದಲೇ ಹೇಳಿರುತ್ತಾನೆ. ಅದಕ್ಕೆ ಪ್ರತಿಯಾಗಿ ಇವರ ಕೌರವ ಹೇಳುವ ಮಾತು –

"ನನ್ನ ತಮ್ಮಂದಿರು ಹುಟ್ಟಿದ್ದಲ್ಲ, ತಾಯಿಯ ನಂಜು ಸುರಿದು ಚೂರು ಚೂರಾಗಿ ಬಿದ್ದದ್ದು ಅಂತ ಹೇಳುವವರಿದ್ದಾರೆ. ಅದೆಲ್ಲ ಹೇಳುವುದೇ ನಂಜಿನಿಂದ. ಅದೆಲ್ಲ ಪ್ರೀತಿಯಿದ್ದರೆ ಒಂದು ತರಹ ಕಾಣುವುದು. ಅವರನ್ನು ಆಗುವುದಿಲ್ಲ ಅಂತಾ ಅದ್ರೆ ಹಾಗೆ ಕಾಣುವುದು. ಅವತಾರ ಪುರುಷರ ಹುಟ್ಟೆಲ್ಲವೂ ವಿಚಿತ್ರ ಅಲ್ಲವೇ ಅಜ್ಜಾ? ನೀವು, ನಾನು, ಕೃಷ್ಣ, ಧರ್ಮರಾಯ, ಈಗಿನ ಕಾಲದಲ್ಲಿ ಎಲ್ಲ ವಿಚಿತ್ರವಾಗಿ ಹುಟ್ಟಿದವರು."

ಒಬ್ಬನೇ ನಿಶಿತಕಾಲದಲ್ಲಿ ಬಂದೆಯಾ ಅಂತ 'ಭೀಷ್ಮ' ಕೇಳಿದಾಗ 'ಕೌರವ'ನ ಮಾತು ಹೀಗಿದೆ – "ಯಾರೇ ಒಬ್ಬ ಭೀಷ್ಮನಲ್ಲಿಗೆ ಹೋಗುತ್ತಾನೆ ಅಂತ ಸುದ್ದಿಯಾದರೆ ಸಾಕು, ಈ ಕಾಲದಲ್ಲಿ ಅವನ ಸುದ್ದಿಗೆ ಯಾರೂ ಹೋಗುವುದಿಲ್ಲ. ಹಾಗಾಗಿ ನಾನು ಬರುವ ಮೊದಲೆ ಎಲ್ಲ ಪ್ರಚಾರ ಮಾಡಿ ಬಂದಿದ್ದೇನೆ, ಭೀಷ್ಮನಲ್ಲಿಗೆ ಹೋಗ್ತೇನೆ ಅಂತ. ಭೀಷ್ಮನಲ್ಲಿಗೆ ಹೋಗ್ತಾನೆ ಎಂಬ ಸುದ್ದಿಯೇ ಅಷ್ಟೊಂದು ಭದ್ರತೆ?". ಆವಾಗ ಭೀಷ್ಮ ಆ ಮಾತಿಗೆ ಅವಿಶ್ವಾಸವನ್ನು ವ್ಯಕ್ತ ಪಡಿಸುತ್ತಾ ಹೇಳುತ್ತಾನೆ – "ಆ ಮಾತಿನಲ್ಲಿ ವಿಶ್ವಾಸ

ಬರುವುದಿಲ್ಲ ನನಗೆ. ನೀನು ನಿನ್ನ ಮುಖ ನೋಡು."

ಕೌರವನ ಪ್ರತಿಕ್ರಿಯೆ ಹೀಗಿರುತ್ತದೆ – "ನನ್ನ ಮುಖ, ಅದು ನನಗೇ ಕಾಣುವುದಿಲ್ಲ. ಕಷ್ಟ ಅದು. ಮತ್ತೆ ಕನ್ನಡಿ, ನಿಮ್ಮ ಮುಂದೆ ನೋಡ್ಲಿಕ್ಕೆ ಸಿದ್ಧನಿಲ್ಲ ನಾನು." ಭೀಷ್ಮ ಛೇಡಿಸುತ್ತಾನೆ – "ನಿನಗೆ ನೋಡ್ಲಿಕ್ಕೆ ಕನ್ನಡಿಯಾದರೂ ಕಾಣಬಹುದು. ನಿನ್ನ ಅಪ್ಪನಿಗೆ ಪ್ರತಿಬಿಂಬ ಬಿಡು, ಕನ್ನಡಿಯೇ ಕಾಣುವುದಿಲ್ಲ..! ನಾನು ದೋಷ ಹೇಳಿದ್ದಲ್ಲ ಸ್ಥಿತಿ ಹೇಳಿದ್ದು."

ಕೌರವನ ಪ್ರತಿಕ್ರಿಯೆ ಹೀಗಿರುತ್ತದೆ – "ನಾನು ಉತ್ತರಿಸುವುದಿಲ್ಲ. ಒಬ್ಬನು ಅಂಧನಾಗಿರುವುದು ಹಾಸ್ಯಕ್ಕೆ ವಿಷಯವಾಗುತ್ತದೆ ಎಂದಾದರೆ ಕ್ಷಮಿಸ್ಬೇಕು, ನಾನು ಅಭಿಮಾನದಿಂದ ಹೇಳ್ತೇನೆ, ನಾನು ಕುರುಡನ ಮಗ. ಅಂದರೆ ಒಂದು ಮಾತು.. ಕುರುಡರಿಗೆ ನೂರು ಮಕ್ಕಳಾದರೆ, ಕಣ್ಣಿದ್ದವರಿಗೆ ಎಷ್ಟಾಗಬೇಕು? ಲೋಕದಲ್ಲಿ ಒಂದು ಪ್ರಶ್ನೆ. ಆದರೆ ಕಣ್ಣಿಂದ ಮಕ್ಕಳಾಗುವುದಲ್ಲ. ಅದು ಅವನವನ ಸಾಮರ್ಥ್ಯದಿಂದ.."

ಮುಂದೆ ಇದೇ ಪ್ರಸಂಗದಲ್ಲಿ – "ಪೊರೆಯುವ ಮಹಿಮನು ವಿಪಿನಾಂತರದೊಳು ಚಲಿಸುವ..." ಎಂಬ ಪದಕ್ಕೆ ಕೌರವನ ಅರ್ಥದ ವಿತಂಡವಾದದ ಮಂಡನೆಯ ಸೊಗಸು ಹೀಗಿದೆ. "ಪಾಂಡವರು ಧರ್ಮಾತ್ಮರಾದ್ದರಿಂದ ಕೃಷ್ಣ ಅವರ ಕಡೆಗೆ ಇದ್ದಾನೆ. ಇದು ಭಾಗವತ ಧರ್ಮ. ಪುಸ್ತಕದಲ್ಲಿ ಬರೆದಿಟ್ಟದೆ ಆದರೆ ಇದು ಹಳತಾಗಿ ವರ್ಷ ಎಷ್ಟಾಯಿತು? ಭಕ್ತರನ್ನು ಕಾಪಾಡುತ್ತಾನೆ ಎಂಬುದು ಪುಸ್ತಕದ ಮಾತು. ಅದು ಧೈರ್ಯಕ್ಕೆ ಬೇಕು. ದೇವರಿದ್ದಾನೆ... ಕಾಪಾಡ್ತಾನೆ. ಆದರೆ ವಾಸ್ತವದಲ್ಲಿ ಹಾಗಿಲ್ಲ. ಪಾಂಡವರನ್ನು ಮುಳುಗಿಸ್ತಾನೆ, ಅವರಿಗೆ 'ಸ್ವಾಯ' ಇಲ್ಲ. ದೃಷ್ಟದಲ್ಲಿ ಪಾಲಿಸಿದ ಹಾಗೆ ಕಾಣುವುದು ಅದು. ಅದೃಷ್ಟದಲ್ಲಿ ದೇವರಿರುವುದು ನನ್ನ ಕಡೆ. ಭಕ್ತರ ಅವಸ್ಥೆ ಹೀಗಾದರೆ ಇನ್ನು ಭಕ್ತರ ಸಂತಾನ ಹುಟ್ಟಲಿಕ್ಕಿಲ್ಲ. ಯಾಕೆ? ಪೊರೆಯುವ ಮಹಿಮನು, ಹೌದೋ? ಪರಮಾತ್ಮನ ಪರಮ ಭಕ್ತರು, ಸದಾ ಅವನಿಂದ ಪೊರೆಯಲ್ಪಡತಕ್ಕವರು, ಯಾವಾಗಲೂ ಅವನ ಅನುಗ್ರಹಕ್ಕೆ ಒಳಗಾದವರು, ಹುಟ್ಟಿದ್ದು ಕಾಡಿನಲ್ಲಿ, ಪಾಂಡವ ವಿರೋಧಿಯಾಗಿ, ಪಾಂಡವರ ಉತ್ಕರ್ಷವನ್ನು ಸಹಿಸದ, ನೀವು ಹೇಳುವಂತೆ ಭೂಭಾರಕ್ಕೆ ಕಾರಣನಾದ, ಕಂಸನಂತೆ ಕೆಟ್ಟವನಾದ ನಾನು ಹುಟ್ಟಿದ್ದು ಅರಮನೆಯಲ್ಲಿ. ಹದಿನಾರು ವರ್ಷದ ವರೆಗೆ ಗೆಡ್ಡೆಗೆಣಸು ತಿಂದುಕೊಂಡು, ಋಷಿಗಳ ಜತೆಗೆ ಕಳೆದವರು; ಅವರಿಗೆ ಅಜ್ಜನತ್ರ ಮಾವನತ್ರ, ಗುರುಗಳತ್ರ ಮಾತನಾಡುವ ಯೋಗ ಉಂಟಾ? ಬಂಗಾರದ ಬತ್ತವನ್ನು ಬಾಯಲ್ಲಿಟ್ಟುಕೊಂಡು ಹಂಸತೂಲಿಕಾ ತಲ್ಪದಲ್ಲಿ ಮಲಗಿದವ ನಾನು. ಈಗಲೂ ಹೇಳ್ತೇನೆ. ಏಳು ಹಂಸತೂಲಿಕ ತಲ್ಪದ ಅಡಿಯಲ್ಲಿ ಒಂದು ಮುಳ್ಳು ಇದ್ದರೆ ಮೇಲೆ ಮಲಗಿದ ನನಗೆ ಮೈಗೆ ತಾಗ್ತದೆ. ನನಗೆ ನಿದ್ದೆ ಬರುವುದಿಲ್ಲ. ಅಷ್ಟು ಸುಖದಲ್ಲಿ ಬೆಳೆದವನು. ಅಯ್ತು ಇಲ್ಲಿಗೆ ಬಂದರು, ಇರಲಿ ಪಾಪ ಅಂತ ನೀವು ಹೇಳಿದಿರಿ. ನಾನು ಹೇಳಿದೆ. ದೊಡ್ಡ ಮನೆಯಲ್ಲವೋ? ನೂರು ಏನು? ನೂರ ಐದು ಏನು? ಇದ್ದರು ಇಲ್ಲಿ. ಏನು ಮಾಡಿದರು? ಭಕ್ತರು ಮಾಡುವ ಕೆಲಸ. ಮರದಿಂದ ಬೀಳಿಸುವುದು, ನೀರಲ್ಲಿ ಮುಳುಗಿಸುವುದು. ಹೊಯಿಗೆಯಲ್ಲಿ

ಹೊರಳಿಸುವುದು, ಅದಕ್ಕೆ ಪ್ರತಿಯಾಗಿ ಭಕ್ತರಲ್ಲದವರು ಮಾಡುವುದು. ವಿಷ ಕೊಡುವುದು, ಬೆಂಕಿ ಕೊಡುವುದು... ಭಕ್ತರಲ್ಲದವರಲ್ವೋ.. ಮಾಡಿದರು. ಆಯ್ತು ವಾರಣಾವತ ಕೊಟ್ಟಿತು. ಅಲ್ಲಿಂದ ಹೋದ್ರೋ. ಮತ್ತೆ ಇದ್ದದ್ದೆಲ್ಲಿ, ಕುಂಬಾರನ ಮನೆಯಲ್ಲಿ. ಒಂದೊಂದು, ಮನೆ ಮಾಡ್ಲಿಕ್ಕಾದ್ರೂ ಒಂದು ಬ್ರಾಹ್ಮಣರು ಯಾರೂ ಸ್ಥಳ ಕೊಡ್ಲಿಲ್ಲ. ಎರಡು ವರ್ಷವೂ ಕುಂಬಾರನ ಮನೆಯಲ್ಲಿ. ಅಲ್ಲಿ ಭೂತ ಬಲಿ. ಬಕಾಸುರ ಅಲ್ಲಿಯ ಭೂತ. ಅದಕ್ಕಿಟ್ಟ ಆ ಕುಂಕುಮ ಚೆಲ್ಲಿದ ಅನ್ನವನ್ನು ತಿಂದಿದ್ದಾನೆ ಅವನು. ಪರಮಾತ್ಮನ ಭಕ್ತರಿಗೆ ಸಿಗುವ ಅನ್ನ ನೋಡು – ಭೂತಕ್ಕೆ ಇಟ್ಟದ್ದು! ಅಲ್ಲಿಂದ ಬ್ರಾಹ್ಮಣ ವೇಷ ಹಾಕಿಬಂದ್ರು. ಎರಡನೆ ಸಲ ಪಾಲು ಕೊಟ್ಟಿತು. ಇಟ್ಟುಕೊಳ್ಳಿಲ್ಲ. ದ್ಯೂತಕ್ಕೆ ಕರಿಯಿತು. ಆಡುವಾಗ ಪರಮಾತ್ಮ ಭಕ್ತಾನುಗ್ರಹಕಾರಕ. ಕೊನೆಗಾದರೂ ಪರಮಾತ್ಮ ಒಂದು ದಾಳವನ್ನಾದರೂ ಅವರ ಕಡೆಗೆ ಹಾಕಿದನೋ., ನಾನೂ ಎಷ್ಟು ದೊಡ್ಡ ಅಪಾಯ ಮೈಗೆ ಎಳೆದು ಹಾಕಿಕೊಂಡೆ, ಎಲ್ಲ ರಾಜ್ಯವನ್ನು ಗೆದ್ದಾದ ಮೇಲೆ ಹೇಳಿದೆ, ದ್ರೌಪದಿಯನ್ನು ಒಡ್ಡಿದರೆ, ಈವರೆಗೆ ನಾನು ಎಲ್ಲ ಗೆದ್ದದ್ದು ಉಂಟಲ್ಲ, ಅದು ಒಂದು ರಾಶಿ, ದ್ರೌಪದಿ ಒಂದು ರಾಶಿ, ಒಂದೇ ಒಂದು ಆಟ ಗೆದ್ದರೆ ಎಲ್ಲ ನಿನಗೆ ಅಂತ, ಏನು ಅಪಾಯ ನೋಡಿ? ಹನ್ನೆರಡು ವರ್ಷ ಹದಿಮೂರು ವರ್ಷ ನಾನು ಹೋಗ್ಬೇಕಿತ್ತು. ಹೇಯ್.. ಆ ದೇವರಿಗೆ ಗೊತ್ತುಂಟು ಇವನ ಹಣೆಬರಹ, ಹಿಂದಿನ ಜನ್ಮದಲ್ಲಿ ಏನು ಪಾಪಕರ್ಮ ಮಾಡಿದ್ದಾರೋ ಏನೋ. ಆಟ ತಿರುಗಿದ್ದೆ, ಮತ್ತೆ ಗೆಡ್ಡೆಗೆಣಸು ತಿಂದದ್ದೇ?..."

ಪಂಚವಟಿ ಪ್ರಸಂಗದ 'ಶೂರ್ಪನಖಿ' ಇವರಿಗೆ ಅತ್ಯಂತ ಪ್ರಸಿದ್ಧಿಯನ್ನು ತಂದುಕೊಟ್ಟ ಪಾತ್ರ. ಹಾಗೇನೆ ಅಂಗದ ಸಂಧಾನದ 'ಪ್ರಹಸ್ತ'. ಇವರ ಪ್ರತಿಯೊಂದು ವಿಷಮ ಪಾತ್ರಗಳು ಕೂಡ ಉಲ್ಲೇಖನೀಯ. ಬಹಳ ವಿಚಿತ್ರವಾದ ದೃಷ್ಟಿಕೋನದಿಂದ ರೂಪುಗೊಳ್ಳುವ ಪಾತ್ರ ಸರಳವಾದ ನಿರೂಪಣೆಯಿಂದ ಕೂಡಿರುತ್ತದೆ. ಪಾತ್ರಗಳಲ್ಲಿ ಇವರು ತೋರುವ ದೃಷ್ಟಿಕೋನಗಳು, ಇವರ ಅರ್ಥಗಾರಿಕೆಯನ್ನು ಒಂದು ಸಲ ಹಿಂಬಾಲಿಸಿದರೆ ಸಾಕು, ಆ ವಾದ ಸರಣಿ ನಮ್ಮನ್ನೇ ಭ್ರಾಂತಿಗೊಳಗಾಗುವಷ್ಟು ನೈಪುಣ್ಯತೆಯನ್ನು ಗಳಿಸುತ್ತದೆ. ಕೌರವನ ವಿತಂಡವಾದವೂ ಸಹ ಹುಬ್ಬೇರಿಸುವಂತೆ ಮಾಡುತ್ತದೆ. ಜತೆಗೆ ಪಾತ್ರವಾಗಿ ಪಾತ್ರದೊಳಗೆ ಇವರಾಡುವ ಆಟ. ಅದು ಪಾತ್ರದೊಂದಿಗಿನ ಸರಸ ಅಂತಲೂ ಹೇಳಬಹುದು, ಅದು ಬಹಿರಂಗದಲ್ಲಿ ವಿಡಂಬನೆಯಾಗಿ ಹೊರಹೊಮ್ಮುವ ಪರಿ ಹಲವು ಸಲ ಅದ್ಭುತ ವಾಗ್ವೈಖರಿಯನ್ನು ಸೃಷ್ಟಿಸಿಬಿಡುತ್ತದೆ.

ಜೋಶಿಯವರ ಅರ್ಥಗಾರಿಕೆ ಕೇಳುವಾಗ ಅಂತರಂಗದಲ್ಲಿ ಆ ಪಾತ್ರದೊಂದಿಗೆ ಬಹಳಷ್ಟು ಸರಸವಾಡುತ್ತಿದ್ದಾರೆ ಎಂದು ಮನವರಿಕೆಯಾಗಿ ಬಿಡುತ್ತದೆ. ಸರಳವಾದ ಶಬ್ದ ಪ್ರಯೋಗಗಳು, ಗ್ರಾಮ್ಯ ಜನಪದ ಉದಾಹರಣೆ, ಉಪಮೆಗಳು ಕಲ್ಪನೆಯ ಮೇಲಾಟಗಳು ಇದು ತಾಳಮದ್ದಲೆಯ ಪಾತ್ರವೈಭವದ ಸೊಗಸುಗಾರಿಕೆಯನ್ನು ತೆರೆದುಕೊಡುತ್ತದೆ. ಒಂದು ರೀತಿಯ ಉಡಾಫೆ ಶೈಲಿಯಲ್ಲಿ ಮಾತುಗಳನ್ನು ಒಪ್ಪಿಸುತ್ತಾ ಸಹಜವಾಗಿ ಎದುರಾಳಿಯನ್ನು ಕಟ್ಟಿಹಾಕಿಬಿಡುತ್ತಾರೆ. ಹಾಸ್ಯ ವಿಡಂಬನೆಯ ಹದವಾದ

ಮಿಶ್ರಣ ಬೆರೆತಾಗ (ಇದು ಭಾಷಣ, ಪ್ರವಚನಗಳಲ್ಲಿಯೂ ಧಾರಾಳವಾಗಿ ಅನುಭವಿಸಬಹುದು) ಅರ್ಥಗಾರಿಕೆ ಅಷ್ಟು ಸುಲಭವೇ ಅಂತ ಅನ್ನಿಸಿಬಿಡುತ್ತದೆ. ಪ್ರತಿಯೊಂದು ಪಾತ್ರ ಕಟ್ಟುವಾಗಲೂ ಯಕ್ಷಗಾನ ಕಲೆಯ ಬಗೆಗಿನ ಪ್ರಾಮಾಣಿಕ ಕಾಳಜಿ ಅನುಭವಕ್ಕೆ ಬರುತ್ತದೆ. ಅದು ಕಿರಿಯ ಕಲಾವಿದರಿಗೆ ಸಹಕಾರಿ.

ಸಮಗ್ರ ಯಕ್ಷಗಾನದ ವಿಚಾರಕ್ಕೆ ಬಂದರೆ, ಜೋಶಿಯವರು ಹಲವಾರು ವಾಘೆಯನ್ನು ಹಿಡಿದ ಸಾರಥಿಯಂತೆ ಕಂಡುಬರುತ್ತಾರೆ. ವಿಮರ್ಶಕ, ಬರಹಗಾರ, ಅಂಕಣಕಾರ, ಯಕ್ಷಗಾನದ ಪ್ರಾಮಾಣಿಕ ಚಿಂತಕ, ಸಣ್ಣ ಚಟುವಟಿಕೆಯನ್ನೂ ಸಹ ಬೆನ್ನು ತಟ್ಟುವ ಪ್ರೇರಕ ಮನೋಭಾವ. ಹಾಗಾಗಿ ಇವರ ಪ್ರತಿಭೆಯನ್ನು ಅರ್ಥಗಾರಿಕೆಗೆ ಮಾತ್ರ ಸೀಮಿತಗೊಳಿಸುವ ಹಾಗಿಲ್ಲ. ಪ್ರಾಧ್ಯಾಪಕರಾಗಿ ಅಧ್ಯಾಪನದ ಬಹಳಷ್ಟು ಗುಣಗಳು ಯಕ್ಷಗಾನದ ಉನ್ನತಿಗೂ ಸಹಕಾರಿಯಾಗಿದೆ. ಇವರು ಭಾಷಣಕ್ಕೆ ನಿಂತರೆ ನೆರೆದ ಸಭೆಯಲ್ಲಿ ಕಿವಿಗಳು ನೆಟ್ಟಗಾಗುತ್ತವೆ. ಅಂತಹ ಆಕರ್ಷಕ ಸರಳ ಶೈಲಿಯದು. ಯಕ್ಷಗಾನದ ಬಹಳಷ್ಟು ಕಲಾವಿದರಿಗೆ ಅಭಿನಂದನಾ ಭಾಷಣವನ್ನು ಮಾಡಿದ ದೊಡ್ಡ ಮನಸ್ಸು ಇವರದ್ದು.

ಯಕ್ಷಗಾನದಲ್ಲಿ ಹಲವಾರು ಹವ್ಯಾಸಗಳನ್ನು ಹುಟ್ಟು ಹಾಕಿ ಬೆಳೆಸಿದವರು. ಸಂಶೋಧಕರಾಗಿ, ಲೇಖಕರಾಗಿ ಕಲೆಯ ಕೋನ ಕೊನವನ್ನು ಎಳೆದು, ಬರೆದು ತೋರಿಸಿದವರು. ತಾಳಮದ್ದಳೆಯ ಅರ್ಥಗಾರಿಕೆಗೆ ಪ್ರಸಿದ್ಧಿಯಾದರೂ ಗೆಜ್ಜೆ ಕಟ್ಟಿ ಕುಣಿದದ್ದನ್ನೂ ಕಂಡಿದ್ದೇನೆ. ಒಂದು ವಿದ್ಯಾಸಂಸ್ಥೆಯ ಪ್ರಾಧ್ಯಾಪಕರೂ, ಪ್ರಾಂಶುಪಾಲರೂ ಆಗಿ ಯಕ್ಷಗಾನದಂತಹ ಕಲೆಯಲ್ಲಿ ಇವರು ತಳೆದ ಆಸಕ್ತಿ ನಿಜಕ್ಕೂ ಯಕ್ಷಗಾನವು ವಿದ್ಯಾಸಂಪನ್ನರ ಕಲೆ ಎಂದು ಕರೆಸಿಕೊಳ್ಳುವುದಕ್ಕೆ ಸಾಧ್ಯವಾಗುತ್ತದೆ.

ಹಲವರು ಯಕ್ಷಗಾನದಲ್ಲಿ ತಮ್ಮ ಸಾಧನೆಯಿಂದ 'ಡಾಕ್ಟರೇಟ್' ಪಡೆದಿರಬಹುದು. ಇದೆಲ್ಲಕ್ಕಿಂತ ಭಿನ್ನವಾದ ಪದವಿ ಗ್ರಹಣ ಜೋಶಿಯವರದ್ದು. ಡಾಕ್ಟರೇಟ್ ಎಂಬ ಶಬ್ದಕ್ಕೆ ಹೆಚ್ಚು ಹತ್ತಿರವಾಗಬಲ್ಲ ಸೇವೆ ಇವರದ್ದು. ಯಕ್ಷಗಾನದ ವಿಷಯಕ್ಕೆ ಸಂಬಂಧಿಸಿದಂತೆ 'ಯಕ್ಷಗಾನದ ಡಾಕ್ಟರ್' ಆಗಿಯೇ ಇವರ ಸೇವೆ ಪರಿಗಣಿಸಲ್ಪಡುತ್ತದೆ ಎನ್ನುವುದೇ ಸೂಕ್ತ. ಒಬ್ಬ ಸಮರ್ಥ ಡಾಕ್ಟರ್ ಅಥವಾ ವೈದ್ಯ ಅನ್ನಿಸಿಕೊಳ್ಳುವುದು ದೇಹದ ಒಳಗೆ ಹೊರಗೆ ತಿಳಿದುಕೊಂಡಾಗ. ಹಾಗಾಗಿ ಯಕ್ಷಗಾನದ ಒಳ-ಹೊರಗು ಬಲ್ಲ ಇವರನ್ನು ಆ ಮಟ್ಟಿಗೆ ಇವರು ಸಮರ್ಥ ಡಾಕ್ಟರ್ ಎನಿಸಿಕೊಳ್ಳುವುದಕ್ಕೆ ಹೆಚ್ಚು ಅರ್ಹರಾಗಿರುತ್ತಾರೆ.



# ಶೇಣಿ ಹಾಗೂ ಪ್ರಚಲಿತ ಯುಗಗಳ ಕೊಂಡಿ



**ಎಂ. ಶಾಂತಾರಾಮ ಕುಡ್ವ**

... ಡಾ. ಎಂ. ಪ್ರಭಾಕರ ಜೋಶಿಯವರು ತಾಳಮದ್ದಳೆ ಕ್ಷೇತ್ರದ ಶೇಣಿಯುಗ ಹಾಗೂ ಈಗಿನ ಪ್ರಚಲಿತ ಯುಗಗಳೆರಡರ ನಡುವಿನ ಕೊಂಡಿ. ವಿಶಾಲ ಹಾಗೂ ಧೃಢವಾದ ಪಾಂಡಿತ್ಯದ ಆಗರ. ಯಕ್ಷಗಾನದ ಪ್ರಥಮ ಜಾಲತಾಣ www.yakshagana.comನ ಸ್ಥಾಪಕರು.

... ಡಾ.ಜೋಶಿಯವರ ಅರ್ಥಗಾರಿಕೆ ಸುಂದರ ಹಾಗೂ ಆಕರ್ಷಕ. ಗೌರವರ್ಣದ, ಶುಭ್ರ ಫೈರಾನ್, ಕಾಶ್ಮೀರಿ ಶಾಲು ಧರಿಸಿ, ಕನ್ನಡಕಧಾರಿಯಾಗಿ ವೇದಿಕೆಯಲ್ಲಿ ಅರ್ಥಕ್ಕೆ ಕುಳಿತರೆಂದರೆ, ಅಂದು ಪ್ರೇಕ್ಷಕರಿಗೆ ಸಾಹಿತ್ಯದ ರಸದೌತಣ. ಯಾವುದೇ ಪಾತ್ರಗಳನ್ನಾದರೂ ಸಮರ್ಥವಾಗಿ ನಿರ್ವಹಿಸಬಲ್ಲ ಸಮರ್ಥ. ಸಂದರ್ಭೋಚಿತವಾಗಿ ಗಾದೆ, ಒಗಟು, ಮಂಡಿಗೆ ಗಾದೆ, ಸುಭಾಷಿತ, ಸಮಕಾಲೀನ ಸಾಹಿತ್ಯಗಳ ಬಳಕೆ, ಸಂಸ್ಕೃತ ಶ್ಲೋಕಗಳನ್ನು ತಮ್ಮ ಅರ್ಥಗಾರಿಕೆಯಲ್ಲಿ ಅಳವಡಿಸಿ, ಪಾತ್ರ ಪೋಷಣೆ ಮಾಡುವುದರಲ್ಲಿ ಜೋಶಿಯವರಿಗೆ ಸಮಾನ ಯಾರೂ ಇಲ್ಲ ಎಂದರೆ, ಅದು ಉತ್ಪ್ರೇಕ್ಷೆಯ ಮಾತಾಗದು.

... ಎದುರಾಳಿ ಯಾವುದೇ ವಾದ, ವಿವಾದ ಮಾಡಿದರೂ, ಜೋಶಿ

ಯವರ ಬತ್ತಳಿಕೆಯಿಂದ ತಕ್ಷಣ ಉತ್ತರ ಬಂದುಬಿಡುತ್ತದೆ. ಎದುರು ಅರ್ಥದಾರಿಗಳು ಅಬದ್ಧ ಮಂಡನೆ, ಕುತರ್ಕ, ಪ್ರಸಂಗ ಮೀರಿದ ವಾದ ಮಾಡಿದರೆ, ಅಲ್ಲೇ ಅವರನ್ನು ತಿದ್ದುವ ಶೈಲಿ ಅನುಕರಣೀಯ. ಅರ್ಥದಲ್ಲಿ ನವರಸಗಳ ಪ್ರಸ್ತುತಿಯಿದ್ದರೂ, ಹಾಸ್ಯರಸವೇ ಪ್ರೇಕ್ಷಕರನ್ನು ಅಪಾರವಾಗಿ ರಂಜಿಸುವುದು. ಕೂಟವೊಂದರ ಪ್ರಸಂಗದಲ್ಲಿ ಬರುವ ಎಲ್ಲಾ ಕಲಾವಿದರಿಗೂ ಅವಕಾಶ ದೊರಕಬೇಕು ಎಂಬ ಆಶಯದ ಅರ್ಥದಾರಿ.

ಪ್ರಸಂಗದ ನಡೆ, ಪದ್ಯಕ್ಕೆ ಸರಿಯಾಗಿ ಪಾತ್ರಗಳ ಒಳಗು ಹೇಗಿರಬೇಕು ಎಂಬುದನ್ನು ಅರಿತಿರುವುದು ಮಾತ್ರವಲ್ಲ, ಅದು ಹೀಗೆಯೇ ಎಂದು ಹೇಳಬಲ್ಲ ಸಾಮರ್ಥ್ಯ. ಯಕ್ಷಗಾನಕ್ಕೆ ಸಂಬಂಧಪಟ್ಟ ಯಾವುದೇ ಜಿಜ್ಞಾಸೆಗಳಿಗೆ ಜೋಶಿಯವರು 'ಇದಮಿತ್ಥಂ' ಎಂದು ಅಂಕಿತ ಹಾಕಿದರು ಅದೇ ಸಿದ್ಧಾಂತ!

ದೊಡ್ಡ ಸಾಮಗರು, ಶೇಣಿ ಗೋಪಾಲಕೃಷ್ಣ ಭಟ್, ಪೆರ್ಲ ಕೃಷ್ಣ ಭಟ್, ರಾಮದಾಸ ಸಾಮಗ, ತೆಕ್ಕಟ್ಟೆ ಆನಂದ ಮಾಸ್ತರ್, ಕುಂಬ್ಳೆ ಸುಂದರ ರಾವ್, ಮಾರೂರು ಮಂಜುನಾಥ ಭಂಡಾರಿ, ಉಡುವೆಕೋಡಿ ಸುಬ್ಬಪ್ಪಯ್ಯ, ದೇರಾಜೆ ಸೀತಾರಾಮಯ್ಯ, ಪೊಳಲಿ ಶಂಕರನಾರಾಯಣ ಶಾಸ್ತ್ರಿ, ಕುಬಣೂರು ಬಾಲಕೃಷ್ಣ ರಾವ್, ಮಟ್ಟಿ ಸುಬ್ಬ ರಾವ್, ಮೂಡಂಬೈಲು ಗೋಪಾಲಕೃಷ್ಣ ಶಾಸ್ತ್ರಿ – ಇವರಂಥಹ ಮಹಾನ್ ಕಲಾವಿದರ ಒಡನಾಟ ಹೊಂದಿ, ಅವರೊಂದಿಗೆ ಅರ್ಥ ಹೇಳಿ ಮಿಂಚಿದ ಹಿರಿಮೆ ಜೋಶಿಯವರದ್ದು. ಆಗಿನ ಕಲಾವಿದರ ಪಟ್ಟಿಯಲ್ಲಿ ಜೋಶಿಯವರು, ಶೇಣಿ, ಪೆರ್ಲ, ಸಾಮಗರೊಂದಿಗೆ ಕೂಟಗಳಲ್ಲಿ ಅನಿವಾರ್ಯ ಕಲಾವಿದರಾಗಿದ್ದರು.

ಈಗಲೂ ತಾಳಮದ್ದಳೆ ಕೂಟಗಳಲ್ಲಿ ಪ್ರಧಾನ ಅರ್ಥದಾರಿಗಳಾಗಿ ಭಾಗವಹಿಸಿ, ಕಿರಿಯ ಕಲಾವಿದರಿಗೆ ಮಾರ್ಗದರ್ಶನ ನೀಡುತ್ತಿದ್ದಾರೆ. ಹಿಂದಿನ ಕೂಟಗಳನ್ನು ನೆನಪಿಸುವಂತೆ ಮಾಡುತ್ತಿದ್ದಾರೆ. 'ವಾಲಿ, ಸುಗ್ರೀವ, ಶ್ರೀರಾಮ, ಧರ್ಮರಾಯ, ಭೀಮ ರಾವಣ, ಕೌರವ, ಶ್ರೀಕೃಷ್ಣ, ತಾಮ್ರಧ್ವಜ, ಅತಿಕಾಯ, ಅರ್ಜುನ, ಭರತ, ಭೀಷ್ಮ, ಶೂರ್ಪನಖಿ, ಪರಶುರಾಮ, ವಿಶ್ವಾಮಿತ್ರ, ಬೃಹನ್ನಳೆ, ಮಂಡನಮಿಶ್ರ.' ಮುಂತಾದ ಪಾತ್ರಗಳು ಜೋಶಿಯವರಿಗೇ ಮೀಸಲು.

ಉತ್ತಮ ಭಾಷಣಕಾರರೂ ಆಗಿರುವ ಜೋಶಿಯವರ ಭಾಷಣ ಆಲಿಸುವುದೇ ಒಂದು ಸೊಗಸು. ಯಾವುದೇ ವಿಷಯದ ಮೇಲೆಯೂ ಭಾಷಣ ಮಾಡುವ, ಆ ಮೂಲಕ, ಪ್ರೇಕ್ಷಕರನ್ನು ಸೆಳೆಯುವ ಅದ್ಭುತ ಕಲೆ ಸಿದ್ಧಿಸಿದೆ. ವಿಮರ್ಶೆ ವಸ್ತುನಿಷ್ಠ. ಅಪ್ರಿಯವಾದರೂ ಸತ್ಯವನ್ನೇ ಹೇಳಿ ವಿಮರ್ಶಿಸುವವರು. ಇದ್ದ ವಿಷಯ ನೇರವಾಗಿ ಹೇಳುವಲ್ಲಿ ಯಾವುದೇ ಕಾಂಪ್ರಮೈಸ್ ಇಲ್ಲದಿರುವುದೇ ವಿಮರ್ಶೆಯ ವೈಶಿಷ್ಟ್ಯ ಡಾ. ಶಿವರಾಮ ಕಾರಂತರ ನಂತರದ ಶ್ರೇಷ್ಠ ವಿಮರ್ಶಕರಿವರು.

ಯಕ್ಷಗಾನ ಕಮ್ಮಟಗಳಲ್ಲಿ ಸಂಪನ್ಮೂಲ ವ್ಯಕ್ತಿ. ಯಕ್ಷಗಾನದ ಪರಂಪರೆ, ಅದು ನಡೆದು ಬಂದ ದಾರಿ, ಇತ್ತೀಚೆಗೆ ಬದಲಾವಣೆಗೊಂಡಿರುವ ಕೆಲವು ಸಂಪ್ರದಾಯಗಳ ಸಾಧಕ – ಬಾಧಕಗಳಲ್ಲಿ ಇರುವ ಜ್ಞಾನ ಅಪಾರ. ಕಮ್ಮಟಗಳಲ್ಲಿ, ಹಿಂದಿನ ಹಾಗೂ

ಈಗಿನ ಭೇದಗಳ ಕುರಿತು ಯಾವುದೇ ಪ್ರಶ್ನೆ ಎದುರಾದರೆ, ತಕ್ಷಣ ಉತ್ತರಿಸಬಲ್ಲ ಪಾಂಡಿತ್ಯ. ಸರಿ – ತಪ್ಪುಗಳ ವಿಮರ್ಶೆಯನ್ನು ಇವರಷ್ಟು ಸಮರ್ಥವಾಗಿ ಮಾಡುವವರು ವಿರಳ. ಯಕ್ಷಗಾನದಲ್ಲಿ ಸುಧಾರಣೆಯ ಹೆಸರಲ್ಲಿ ಮೂಲಸ್ವರೂಪಕ್ಕೆ ಧಕ್ಕೆಯಾದ ಸಂದರ್ಭಗಳಲೆಲ್ಲಾ, ಅದನ್ನು ವಿರೋಧಿಸಿದ್ದಾರೆ. ಕೆಲವೊಮ್ಮೆ ಖಾರವಾಗಿ ಮಾತಾಡಿದರೂ, ಕೂಡಲೇ ಸೌಮ್ಯವಾಗಿ ವರ್ತಿಸಿ, ಯಾರೊಂದಿಗೂ ವಿರೋಧ ಹೊಂದಿಲ್ಲದ ಜೋಶಿಯವರು ಕೂಟದಲ್ಲಿದ್ದರೆ ಸಹಕಲಾವಿದರಿಗೆ ಉತ್ಸಾಹ.

**(ಕೃಪೆ : ಬಯಲಾಟ ಡಾಟ್ ಕಾಮ್ ಜಾಲತಾಣದಲ್ಲಿ ಪ್ರಕಟಿತ –ಆಯ್ದ ಭಾಗವಿದು)**



"ಪಾಯಸವನ್ನು ಆಕರ್ಷಕಗೊಳಿಸಲು, ಅದಕ್ಕೆ ಬೆಳ್ಳುಳ್ಳಿ ಒಗ್ಗರಣೆ ಕೊಡುವುದು ಪಾಕ ಸುಧಾರಣೆ ಅಲ್ಲ. ರುಚಿ ಕೆಡಿಸುವ ಕೃತ್ಯ. ಯಕ್ಷಗಾನದಲ್ಲೂ ಇಂತಹ ಹಲವು ಸಂಕರಗಳು ಆಗುತ್ತಿವೆ."

**ಕಟೀಲಿನಲ್ಲಿ ಜರಗಿದ ಸಂಮಾನ ಸ್ವೀಕಾರದಲ್ಲಿ**

# ಕೆನಡಾದಲ್ಲಿ ಜೋಶಿ ಅರ್ಥಯಾತ್ರೆ



ವಿವಿಧ ಸಂಘಟನೆಗಳ ಸಹಯೋಗದಲ್ಲಿ ಕೆನಡಾದ ಯಕ್ಷಮಿತ್ರ ಟೋರಂಟೋ ಸಂಯೋಜಿಸಿದ್ದ ಯಕ್ಷಗಾನ ಮತ್ತು ತಾಳಮದ್ದಳೆ ಸರಣಿಯ ಸಮಾರೋಪ ಕೆನಡಾ ದೇಶದ ರಾಜಧಾನಿ ಒಟ್ಟಾವಾದಲ್ಲಿ ಜೂನ್ ಹನ್ನೊಂದರಂದು ನಡೆಯಿತು. ವಿದೇಶದ ಮೊಟ್ಟಮೊದಲ ಕನ್ನಡ ಮೂಲದ ಕೇಂದ್ರ ಸಂಸತ್ ಸದಸ್ಯರಾಗಿ ಚುನಾಯಿಸಲ್ಪಟ್ಟಿರುವ ಶ್ರೀ ಚಂದ್ರ ಆರ್ಯ ಕಾರ್ಯಕ್ರಮ ಉದ್ಘಾಟಿಸಿದರು. ಯಕ್ಷಗಾನದ ವಿದ್ವಾಂಸರೂ ಖ್ಯಾತ ಅರ್ಥದಾರಿಗಳೂ ಆದ ಡಾ. ಎಂ. ಪ್ರಭಾಕರ ಜೋಶಿಯವರು ಎರಡು ವಾರ ಯಕ್ಷಮಿತ್ರರೊಡನೆ ಪ್ರವಾಸ ಮಾಡಿ ಟೊರೆಂಟೋ ಮತ್ತು ಒಟ್ಟಾವ ನಗರಗಳಲ್ಲಿ ಸ್ಥಳೀಯ ಯಕ್ಷಗಾನ ಅಭಿಮಾನಿಗಳೊಂದಿಗೆ ಸೇರಿ ತಾಳಮದ್ದಳೆ ನಡೆಸಿಕೊಟ್ಟು ಕೆನಡಾಕ್ಕೆ ವೃತ್ತಿಪರ ಅರ್ಥಗಾರಿಕೆಯನ್ನು ಪರಿಚಯಿಸಿ ಇತಿಹಾಸ ನಿರ್ಮಿಸಿದರು. ಈ ಸರಣಿಯ ಸಮಾರೋಪಕ್ಕೊಂದು ಒಟ್ಟಾವ ಕನ್ನಡ ಸಂಘ ಮತ್ತು ಕೆನಡಾದ ಯಕ್ಷಮಿತ್ರ ಟೊರೊಂಟೋ ಮತ್ತು ಒಟ್ಟಾವ ಕನ್ನಡ ಸಂಘ ಮತ್ತು ಕೆನಡಾದ ಯಕ್ಷಮಿತ್ರ ಟೊರೆಂಟೋ ಮೇಳ ಜಂಟಿಯಾಗಿ ಜೂನ್ 11ರಂದು ರಾವಣ ವಧೆ ತಾಳಮದ್ದಳೆ ಮತ್ತು ವಾಲಿವಧೆ ಯಕ್ಷಗಾನ ಆಟ ಹಮ್ಮಿಕೊಂಡಿದ್ದವು. ರಾವಣ ವಧೆ ತಾಳಮದ್ದಳೆಯಲ್ಲಿ ಜೋಶಿಯವರು ರಾವಣನಾಗಿ ಅರ್ಥ ಹೇಳಿ ಜನರು ಆಶ್ಚರ್ಯಪಡುವಂತೆ ದುರಂತ ನಾಯಕನೂ ಭಕ್ತನೂ ಆಗಿ ರಾವಣನನ್ನು ಚಿತ್ರಿಸಿದರು.

ಅರ್ಥಕ್ಕೆ ತಲೆದೂಗಿದ ಪ್ರೇಕ್ಷಕವೃಂದ ತಾಳಮದ್ದಳೆಯನ್ನು ಉತ್ತರ ಅಮೇರಿಕಾಕ್ಕೆ ತಂದಿದ್ದಕ್ಕಾಗಿ ಜೋಶಿಯವರನ್ನು ಹೃತ್ಪೂರ್ವಕ ಅಭಿನಂದಿಸಿತು. ಕನ್ನಡಿಗ ಎಂ.ಪಿ. ಶ್ರೀ ಚಂದ್ರ ಆರ್ಯ ಅವರು ಕನ್ನಡ ಕಲೆ ಯಕ್ಷಗಾನವನ್ನು ಕೆನಡಾದಲ್ಲಿ ಹೆಚ್ಚು ಪರಿಚಯಿಸಬೇಕು, ಮೇಳದ ಮತ್ತು ಜೋಶಿಯವರ ಪ್ರಯತ್ನ ಮುಂದುವರಿಯಲಿ ಎಂದು ಹಾರೈಸಿದರು.

ಸನ್ಮಾನ ಸ್ವೀಕರಿಸಿ ಸರಣಿಯ ಸಮಾರೋಪದ ಕುರಿತು ಮಾತನಾಡುತ್ತಾ ಜೋಶಿಯವರು ಸರಣಿಯನ್ನು ಸಂಯೋಜಿಸಿದ ಯಕ್ಷಮಿತ್ರರನ್ನೂ ಮತ್ತು ಕಾರ್ಯಕ್ರಮವನ್ನು ಆಯೋಜಿಸಿದ ಕನ್ನಡ ಕೂಟವನ್ನು ಶ್ಲಾಘಿಸಿ ತಾಳಮದ್ದಳೆಯಲ್ಲಿ ಸಹಕರಿಸಿದ ಕಲಾವಿದರು ಮತ್ತು ಸಂಯೋಜಕರಿಗೆ ಕೃತಜ್ಞತೆ ವ್ಯಕ್ತಪಡಿಸಿದರು. ವಿದೇಶದಲ್ಲಿ ಮೊಟ್ಟಮೊದಲ ಸಂಪೂರ್ಣ ಯಕ್ಷಗಾನ ಮೇಳವನ್ನು ಸ್ಥಾಪಿಸುವುದು ದೊಡ್ಡ ಕೆಲಸ ಎಂದು ಶುಭ ಕೋರಿದರು. ನೂರಾರು ವರ್ಷಗಳಿಂದ ಯಕ್ಷಗಾನ ಕಲೆಯಲ್ಲಿ ಏನು ಬೆಳೆದಿದೆಯೋ ಅದರ ಫಲವಾಗಿ ಕಲಾವಿದರಾದ ತನ್ನಂತಹವರಿಗೆ ಅವಕಾಶ ಮತ್ತು ಗೌರವ ಸಲ್ಲುತ್ತಿದೆ. ಕಲಾವಿದರ ಕಾಲು ಹಿರಿಯ ಕಲಾವಿದರ ಭುಜದ ಮೇಲೆ ಇರುವುದರಿಂದ ನಾವು ಮೇಲೆ ಕಾಣುವುದು. ಅನೇಕ ಗ್ರಂಥಗಳಿಗೆ ಮತ್ತು ಕಲಾವಿದರಿಗೆ ನಾನು ಋಣಿ ಎಂದರು.

ಸುಮಾರು ಜೂನ್ ಮೂರರಿಂದ ಪ್ರಾರಂಭವಾದ ಡಾ. ಜೋಶಿಯವರ ಕೆನಡಾ ತಿರುಗಾಟ ಟೊರೆಂಟೋದ ತಾಳಮದ್ದಳೆ 'ಭೀಷ್ಮಪರ್ವ'ದೊಂದಿಗೆ ಆರಂಭವಾಯಿತು. ಬಹುಶಃ ಇದು ಕೆನಡಾದಲ್ಲಿ ಸಂಪೂರ್ಣ ಹಿಮ್ಮೇಳದೊಡನೆ ನಡೆದ ಮತ್ತು ವೃತ್ತಿಪರ ಅರ್ಥದಾರಿಗಳು ಭಾಗವಹಿಸಿದ ಮೊಟ್ಟಮೊದಲ ತಾಳಮದ್ದಳೆ. ವಿಶೇಷ ಎಂದರೆ ತಾಳಮದ್ದಳೆ ಮತ್ತು ಯಕ್ಷಗಾನವನ್ನು ನಡೆಸಿಕೊಟ್ಟದ್ದು ಉತ್ತರ ಅಮೇರಿಕಾದ್ದೇ ಆದ ಯಕ್ಷಮಿತ್ರ ಟೊರೆಂಟೋ ಮೇಳ. ಯಕ್ಷಮಿತ್ರ ಟೊರೆಂಟೋ ಮೇಳ 2009ರಲ್ಲಿ ಕೆನಡಾದಲ್ಲಿ ಸ್ಥಾಪಿತವಾದ ಭಾರತದ ಹೊರಗಿರುವ ಏಕೈಕ ಹಿಮ್ಮೇಳ, ಮುಮ್ಮೇಳ, ವೇಷಭೂಷಣ ಇತ್ಯಾದಿಗಳಿಂದ ಸುಸಜ್ಜಿತವಾದ ವಿದೇಶೀ ಯಕ್ಷಗಾನ ಮೇಳವಾಗಿದ್ದು ಡಾ. ಜೋಶಿಯವರನ್ನು ಆಹ್ವಾನಿಸಿ ಕಾರ್ಯಕ್ರಮ ಆಯೋಜಿಸಿತ್ತು. ಯಕ್ಷಗಾನದ ಶ್ರೇಷ್ಠ ಕವಿಯಾದ ದೇವಿದಾಸ ರಚಿತ ಕೃಷ್ಣಸಂಧಾನ ಮತ್ತು ಹಲಸಿನಹಳ್ಳಿ ನರಸಿಂಹ ಶಾಸ್ತ್ರಿಗಳ ಭೀಷ್ಮ ಪರ್ವದ ಆಯ್ದ ಪದ್ಯಗಳನ್ನು ಸಂಯೋಜಿಸಿ 'ಭೀಷ್ಮ ಭಕ್ತಿ' ತಾಳಮದ್ದಳೆ ನಡೆಯಿತು. ಭೀಷ್ಮನಾಗಿ ಡಾ. ಜೋಶಿಯವರು ಭಕ್ತಶ್ರೇಷ್ಠ ಭೀಷ್ಮನ ಪಾತ್ರವನ್ನು ಸೃಷ್ಟಿಸಿದರು. ಯಕ್ಷಮಿತ್ರದ ಕಲಾವಿದರುಗಳಾದ ವಿನಾಯಕ ಹೆಗಡೆ ಮತ್ತು ರಾಘವೇಂದ್ರ ಕಟ್ಟಿನಕೆರೆ ಭಾಗವತಿಕೆ ಮಾಡಿ ಶ್ರೀಧರ ಮಧ್ಯಸ್ಥ ಮದ್ದಳೆ ನುಡಿಸಿ ಹಿಮ್ಮೇಳ ನಡೆಸಿಕೊಟ್ಟರು. ನವೀನ ಹೆಗಡೆ ಕೌರವನಾಗಿ, ಕವಿರಾಯ ಉಡುಪ ಕೃಷ್ಣನಾಗಿ, ನಾಗಭೂಷಣ ಮಧ್ಯಸ್ಥ ಅರ್ಜುನನಾಗಿ, ಕೃಷ್ಣಪ್ರಸಾದ ಬಾಳಿಕೆ ಕರ್ಣನಾಗಿ ಪ್ರೇಕ್ಷಕರು ಮೆಚ್ಚುವಂತೆ ಅರ್ಥ ಹೇಳಿದರು. ನಂತರ ಯಕ್ಷಗಾನ ವಾಲಿವಧೆ ಪ್ರಸ್ತುತಪಡಿಸಲಾಯಿತು. ವಾಲಿವಧೆಯಲ್ಲಿ ನವೀನ ಹೆಗಡೆ ವಾಲಿಯಾಗಿ, ಶ್ರೀಕಾಂತ ಹೆಗಡೆ ರಾಮನಾಗಿಯೂ ಕೃಷ್ಣಪ್ರಸಾದ

ಬಾಳಿಕೆ ಲಕ್ಷ್ಮಣನಾಗಿಯೂ, ಮಧುಸೂದನ ಭಟ್ ಬ್ರಾಹ್ಮಣನಾಗಿಯೂ ಕವಿರಾಜ ಉಡುಪ ಹನುಮಂತ ಮತ್ತು ಕು. ವಿಶಾಲ ಭಟ್ ಅಂಗದನಾಗಿ ಅರ್ಥ ಹೇಳಿ ತಾಳಮದ್ದಳೆಯನ್ನು ಸಂಪನ್ನಗೊಳಿಸಿದರು. ಮೇಳದ ಯಜಮಾನರಾದ ಶ್ರೀ ಪರಮೇಶ್ವರ ಭಟ್ ದೊಡ್ಡಮಾಣಿ ಮತ್ತು ಟೊರೆಂಟೋ ಕನ್ನಡ ಸಂಘದ ಅಧ್ಯಕ್ಷೆ ಶ್ರೀಮತಿ ಉಷಾ ಜಯರಾಮ ಮತ್ತು ಪದಾಧಿಕಾರಿಗಳು ಭಾರತದಿಂದ ಬಂದು ಕೆನಡಾಕ್ಕೆ ಕನ್ನಡ ತಾಳಮದ್ದಳೆ ಪರಿಚಯಿಸಿದ ಡಾ. ಎಂ. ಪ್ರಭಾಕರ ಜೋಶಿಯವರನ್ನು ಸನ್ಮಾನಿಸಿ ಮಾನಪತ್ರ ನೀಡಿ ಗೌರವಿಸಿದರು.

ಇದಲ್ಲದೇ ಈ ಸರಣಿಯ ಅಂಗವಾಗಿ ಶೃಂಗೇರಿ ವಿದ್ಯಾಭಾರತಿ ಪ್ರತಿಷ್ಠಾನ 'ಗೀತೆಯ ಬೆಳಕು' ಎಂಬ ಜೋಶಿಯವರ ಕನ್ನಡ–ಇಂಗ್ಲಿಷ್ ಉಪನ್ಯಾಸ ಏರ್ಪಡಿಸಿತ್ತು. ಕೆನಡಾದಲ್ಲಿ ನಾಟ್ ನಾಟ್ ಎಂಬ ಕನ್ನಡ ಚಲನಚಿತ್ರ ಹೊರತರುತ್ತಿರುವ ನಿರ್ದೇಶಕರುಗಳಾದ ಶ್ರೀಮತಿ ಬೃಂದಾ ಮತ್ತು ಶ್ರೀ ಮುರಳಿ ಇವರು ಜೋಶಿಯವರ ಭಾರತೀಯ ದರ್ಶನಗಳ ಪರಿಚಯ ಎಂಬ ಕಾರ್ಯಾಗಾರ ಒಂದನ್ನು ಯಕ್ಷಮಿತ್ರದ ಸಹಯೋಗದಲ್ಲಿ ಹಮ್ಮಿಕೊಂಡಿದ್ದರು. ಇದಲ್ಲದೇ ಯಕ್ಷಗಾನ ಪದಕೋಶವನ್ನು ಬರೆದು ಕನ್ನಡ ಯಕ್ಷಗಾನದ ಹಿರಿಯ ತಜ್ಞರೆಂದೇ ಗುರುತಿಸಲ್ಪಡುವ ಡಾ. ಎಂ. ಪ್ರಭಾಕರ ಜೋಶಿಯವರು ಯಕ್ಷಗಾನ ಪ್ರದರ್ಶನದ ಮೌಲ್ಯವರ್ಧನ ಶಿಬಿರವನ್ನು ನಡೆಸಿಕೊಟ್ಟು ಯಕ್ಷಗಾನದ ಗುಣಮಟ್ಟವನ್ನು ಹೆಚ್ಚಿಸುವುದು ಹೇಗೆ, ಔಚಿತ್ಯ, ಅರ್ಥ ಇತ್ಯಾದಿಗಳ ಬಗ್ಗೆ ವಿವರಿಸಿದರು. ಒಟ್ಟಾರೆ ಕಾರ್ಯಕ್ರಮಗಳಿಗೆ 300ಕ್ಕೂ ಹೆಚ್ಚು ಜನ ಸೇರಿ ಯಶಸ್ವಿಗೊಳಿಸಿದರು. ಇದೆಲ್ಲದರ ಚಿತ್ರೀಕೃತ ಆವೃತ್ತಿ ಅಂತರ್ಜಾಲದಲ್ಲಿ ಸದ್ಯದಲ್ಲಿ ಲಭ್ಯವಾಗಲಿದ್ದು ಆಸಕ್ತರು ನೋಡಬಹುದು.

**ಕೆನಡಾ ಪ್ರತಿನಿಧಿ**

(ಯಕ್ಷಮಿತ್ರ ಕಲಾರಂಗ ಪರವಾಗಿ)



# ಅತ್ರಿ ಬುಕ್ ಸೆಂಟರ್

ಮುಖಪುಟ ಪರಿಚಯ ಪುಸ್ತಕ ವಿಭಾಗ ನಕ್ಷಾ ಸಂಗ್ರಹ ಚಿತ್ರಪುಟ ಧ್ವನಿಯಲೋಕ

ಫೇಸ್‌ಬುಕ್‌ನಲ್ಲಿ ನಾವು



Athree ...

Like Page

## ಅಮೇರಿಕಾದಿಂದ ಪ್ರಭಾಕರ ಜೋಶಿ ಬರೆಯುತ್ತಾರೆ

**ಜಿ.ಎನ್. ಅಶೋಕವರ್ಧನ**

ನಾಗರಪಂಚಮಿಯಂದು ಪಣಂಬೂರಿನ ನಂದನೇಶ್ವರ ದೇವಳದ ತಾಳಮದ್ದಳೆಗೆ ಹೋಗಿದ್ದೆ. ಅಲ್ಲಿನ ರಂಗಸ್ಥಳದ ಬೆಂಬರಹ ಪ್ರಭಾಕರ ಜೋಶಿಯವರನ್ನು ಮೊದಲು ಕಾಣಿಸಿತ್ತು. ಆದರೆ ಸಂಘಟಕರು ಸ್ವಾಗತದಲ್ಲೇ ಜೋಶಿಯವರ ಅನಿವಾರ್ಯ ಗೈರುಹಾಜರಿಯನ್ನು ಘೋಷಿಸಿದಾಗ, ತಿಂಗಳ ಹಿಂದೆ ಅವರು ಹೇಳಿದ್ದು ನೆನಪಾಯ್ತು "ಕಡೆಗೂ ನಾನು ಅಮೇರಿಕಾಕ್ಕೆ ಒಮ್ಮೆ ಹೋಗಿಬರುವುದೆಂದು ನಿಘಂಟು ಮಾಡಿದೆ ಮಾರಾಯ್ರೇ!" ಜೋಶಿಯವರ ಇಬ್ಬರೂ ಮಗಳಂದಿರು ಅಮೇರಿಕಾ ವಾಸಿಗಳು. ಸುಚೇತಾ ಜೋಶಿಯವರು (ಶ್ರೀಮತಿ ಪ್ರಭಾಕರ ಜೋಶಿ) ತನ್ನ ಅಧ್ಯಾಪಕ ವೃತ್ತಿಯ ನಡುವೆಯೂ ಮಗಳಂದಿರ ಬಾಣಂತನ ಸುಧಾರಿಸಲು ಒಂಟಿಯಾಗಿ ಅಮೇರಿಕಾಕ್ಕೆ ಹೋಗಿ ಬರುವುದನ್ನು ರೂಢಿಸಿಕೊಂಡು ಕೆಲವು ವರ್ಷಗಳೇ ಸಂದಿವೆ. ಆದರೆ ಪ್ರಭಾಕರ ಜೋಶಿ ತನ್ನ ಯಕ್ಷಗಾನ ಕೇಂದ್ರಿತ ಬಹುಮುಖೀ ಚಟುವಟಿಕೆಯನ್ನು ಬದಿಗೊತ್ತಿ ಇದುವರೆಗೂ ವಿದೇಶಯಾನ ಬಯಸಿರಲಿಲ್ಲ.

ಮೊನ್ನೆ ಶುಕ್ರವಾರದ ನನ್ನ ಜಾಲತಾಣದ ಸೈಕಲ್ ಲೇಖನಕ್ಕೆ ಜೋಶಿಯವರ ಚುಟುಕು ಪ್ರತಿಕ್ರಿಯೆ ಬಂತು. ಅದಕ್ಕೆ ನಾನು ವೈಯಕ್ತಿಕ ಪತ್ರ ಬರೆಯುತ್ತಾ ಒಂದು ಯೋಚನೆಯನ್ನು ಹೀಗೆ ವಿಸ್ತರಿಸಿದೆ: "... ನೀವು ಅಮೇರಿಕಾ ತಲಪಿಯಾಯ್ತು ಎಂದು ಭಾವಿಸುತ್ತೇನೆ... ನೀವು ಅಲ್ಲಿನ ಸಾಂಸ್ಕೃತಿಕ ಕಲಾಪಗಳಲ್ಲಿ ತೊಡಗಿಕೊಂಡಾಗ, ವಿವರಣಾತ್ಮಕ ಟಿಪ್ಪಣಿಗಳನ್ನು ಹೀಗೇ ಮಿಂಚಂಚೆ ಮೂಲಕ ಕಳಿಸುತ್ತಿದ್ದರೆ ನಾನಿಲ್ಲಿ ಸಾರ್ವಜನಿಕಗೊಳಿಸಬಲ್ಲೆ". ಇದನ್ನು ಒಪ್ಪಿಕೊಂಡು ಅವರು ಮೊದಲು



ಕಳಿಸಿದ್ದು ಸುರತ್ಕಲ್ ಮೂಲದ ವಾಸುದೇವ ಐತಾಳರ ಪತ್ರ. ಒಂದೂವರೆ ದಶಕದ ಹಿಂದೆ, ಇನ್ನೂ ನಮ್ಮಲ್ಲಿ ಗಣಕ, ಮಿಂಚಂಚೆ, ಜಾಲತಾಣವೆಲ್ಲ 'ಅಂತೆ ಕಂತೆ'ಗಳಾಗಿದ್ದಾಗಲೇ ಯಕ್ಷಗಾನದ ಬಗ್ಗೆ ತನ್ನದೇ ಒಂದು ಜಾಲತಾಣ ತೆರೆದು, ನಡೆಸಿದವರು ಈ ವಾಸುದೇವ ಐತಾಳ. ಆ ಜಾಲತಾಣದ ವಿಷಯಕ ವಿವರ ಮತ್ತು ಸಂಪಾದನಾ ಜವಾಬ್ದಾರಿಯನ್ನು ಸಮರ್ಥವಾಗಿ ನಡೆಸಿಕೊಟ್ಟವರು ಜೋಶಿ. ಆ ವಾಸು ಐತಾಳರು ಈಗ ಜೋಶಿಯವರೇ ಅಮೇರಿಕಾಕ್ಕೆ ಬರುತ್ತಾರೆಂದ ಮೇಲೆ ಸುಮ್ಮನೆ ಕೂರುವುದುಂಟೇ? ಈಗಾಗಲೇ ಅಲ್ಲಿನ ಆರೆಂಟು ವ್ಯಕ್ತಿ, ಕನ್ನಡ ಸಂಘಗಳನ್ನು ಸಂಪರ್ಕಿಸಿ ತಾಳಮದ್ದಳೆ, ಉಪನ್ಯಾಸ, ಸಂವಾದಗಳ ಪಟ್ಟಿಯನ್ನು ಸಿದ್ಧಪಡಿಸಿದ್ದಾರೆ. ಇನ್ನಷ್ಟು ಮಿತ್ರರ ಮೂಲಕ ಕಲಾಪಗಳನ್ನು ಸಂಯೋಜಿಸುವ ನಿಟ್ಟಿನಲ್ಲಿ ಮುಂದುವರಿದಿದ್ದಾರೆ. ಈ ಕಲಾಪಗಳಲ್ಲಿ ತೊಡಗಿದ ಮತ್ತು ಅದರಿಂದ ಸಂಗ್ರಹವಾದ ಅನುಭವಗಳನ್ನು ಸ್ವತಃ ಜೋಶಿಯವರೇ ಅನುಕೂಲದಲ್ಲಿ ಪತ್ರಮುಖೇನ ನನಗೆ ಬರೆಯುವುದಾಗಿ ತಿಳಿಸಿದ್ದಾರೆ. ಅದರಲ್ಲಿ ಸಾರ್ವತ್ರಿಕ ಮೌಲ್ಯದ ಅಂಶಗಳನ್ನು, ಅಗತ್ಯವಿದ್ದರೆ ಕನ್ನಡಿಸಿ, ಅನಿಯತವಾಗಿ ಇಲ್ಲಿ ಸಾರ್ವಜನಿಕ ಗೊಳಿಸುವ ಕೆಲಸವನ್ನು ನಾನು ಪ್ರೀತಿಯಿಂದ ವಹಿಸಿಕೊಂಡಿದ್ದೇನೆ.

ಆಗಸ್ಟ್ ಹನ್ನೊಂದರಂದು ಅಮೇರಿಕಾದಲ್ಲಿಳಿದೆ. ಮಗಳಂದಿರಾದ ಶ್ವೇತಾ ಸೂರ್ಯನಾರಾಯಣ ಮತ್ತು ಸ್ವಾತಿ ಕಾರ್ತಿಕ್ ಭಟ್ ಇವರ ಮನೆಗಳ ಭೇಟಿ ಪ್ರಧಾನ ಲಕ್ಷ್ಯ. ಖಂಡಾಂತರ ಪಯಣದ ಸುಸ್ತು ಪರಿಹಾರಕ್ಕೆ ಎರಡು ದಿನ ವಿಶ್ರಾಂತಿ. ಬಹಳ ಕಾಲವಾಯ್ತು – ಹೀಗೆ ಮನೆಯಲ್ಲೇ, ಕುಟುಂಬದವರೊಡನೇ ಪೂರ್ಣ ವಿಶ್ರಾಂತಿ ಅನುಭವಿಸದೆ! ಹದಿನೈದರ ನಂತರ ನನ್ನ ತಿರುಗಾಟ (ಚಿಕ್ಕಮೇಳ) ಶುರುಮಾಡಿದ್ದೇನೆ! ಒಂದು ದಿನ ಚಾಂಟಿಲಿಯಲ್ಲಿ, ಪ್ರಕಾಶ ಭಟ್ಟರ ಕುಟುಂಬದೊಡನೆ. ಉತ್ತರಕನ್ನಡದ ಸಹೃದಯಿಗಳು, ನಿರ್ದಿಷ್ಟ ಕಲಾಪವೇನೂ ಇರಲಿಲ್ಲ, ಲೋಕಾಭಿರಾಮ.

... ಮತ್ತೊಂದು ದಿನ ನನ್ನ ಬಂಧು ವಿದ್ವಾನ್ ಸತ್ಯನಾರಾಯಣ ಮರಾಠೆ (ಕಾರ್ಕಳದ ದುರ್ಗದವರು), ಚಾಂಟಿಲಿಯಲ್ಲಿ ಪೌರೋಹಿತ್ಯವನ್ನು ನಡೆಸುತ್ತಾರೆ. ಅವರು ನಡೆಸಿಕೊಟ್ಟ ಒಂದು ಪೂಜೆಗೂ ಅನಂತರ ಅವರ ಮನೆಗೂ ಕೊಟ್ಟ ಭೇಟಿ ಕುತೂಹಲಕರ ವಾಗಿತ್ತು. ಇವರು ಮಾಡಿಸುವ ಪೂಜೆ ಇಂಗ್ಲಿಷಿನಲ್ಲಿ ವಿವರಣಾತ್ಮಕವಾಗಿಯೂ ಇರುತ್ತದೆ.

ಇಂದು ನಾನು ವಾಶಿಂಗ್ಟನ್ ಡೀಸಿ – ಅಮೇರಿಕಾದ ರಾಜಧಾನಿಗೆ ಭೇಟಿ ಕೊಟ್ಟೆ. ಸಾಲಿನಲ್ಲಿ ಮೂರು ಸ್ಮಾರಕಗಳು – ಲಿಂಕನ್ ಸ್ಮಾರಕ, ವಾಶಿಂಗ್ಟನ್ ಯುದ್ಧ ಸ್ಮಾರಕ ಸ್ತಂಭ ಮತ್ತು ಇವನ್ನು ಪ್ರತಿಫಲಿಸುವ ಸರಸಿ (http://nationalmall.org/explore-national-mall/monuments-memorials/lincoln=memorial-reflecting-pool). ಎಲ್ಲ ಚೊಕ್ಕ, ಮಿತ ಉಲ್ಲೇಖಗಳ ಗಂಭೀರ ವಿಚಾರಪರ ಸ್ಮರಣಿಕೆಗಳು.

ನ್ಯೂಸಿಯಂ (NEUSEUM) – ಒಂದು ವಿಶೇಷ ಪ್ರದರ್ಶಿಕೆ. ಎಲ್ಲ ಪ್ರದರ್ಶನಾಲಯ ಗಳು ಭೂತಕಾಲದ ಸಂಗತಿಗಳನ್ನು ಹಿಡಿದಿಟ್ಟರೆ, ಇದು ವರ್ತಮಾನದ ಸಂಗತಿಗಳನ್ನೇ

ನಿರಂತರ ಹಿಡಿದಿಡುವ ವ್ಯವಸ್ಥೆ. ಆರು ಮಾಳಿಗೆಗಳ ಈ ಸ್ಮಾರಕ/ಪ್ರದರ್ಶನ ಒಂದು ಅದ್ಭುತ. ಇದರಲ್ಲಿ ಹಳೆಯ ವಾರ್ತಾಪತ್ರಿಕೆಗಳು, ಛಾಯಾಚಿತ್ರಗಳು, ಪತ್ರಿಕೋದ್ಯಮದ ತತ್ವ ಹಾಗೂ ಇತಿಹಾಸ, ಸುದ್ದಿ ಎಂದರೇನು ಎನ್ನುವ ಚಲನಚಿತ್ರ, ವರದಿಗಾರಿಕೆಯ ಮಹಿಳಾ ಪತ್ರಕರ್ತಳೊಬ್ಬಳಿಗೆ ವರದಿಗಾರಿಕೆಯನ್ನು ಪರಿಚಯಿಸುವ ನಾಲ್ಕು ಆಯಾಮದ ಚಿತ್ರ, ಪುಲಿಟ್ಜರ್ ಪ್ರಶಸ್ತಿ ವಿಜೇತ ವರದಿ ತುಣುಕುಗಳು, 9–11, ಬರ್ಲಿನ್ ಗೋಡೆಯ ನಾಲ್ಕು ತುಣುಕುಗಳೊಡನೆ ಸುದ್ದಿಗಳು, ವಿಶ್ವ–ವಾರ್ತಾ ಸ್ವಾತಂತ್ರ್ಯವನ್ನು ಬಿಂಬಿಸುವ ಗ್ರಾಫುಗಳು ಹೀಗೆ ಹೇಳಿದಷ್ಟೂ ಮುಗಿಯದು. ಎಲ್ಲವನ್ನೂ ಅಚ್ಚುಕಟ್ಟಾಗಿ ಶೈಕ್ಷಣಿಕ ಉಪಯುಕ್ತತೆ ಮತ್ತು ವಿಷಯಕ ಸಮೃದ್ಧಿಯನ್ನು ಗಮನದಲ್ಲಿಟ್ಟು ಸಂಯೋಜಿಸಿದ್ದಾರೆ.

ಈ ಎಲ್ಲ ಭೇಟಿಗಳಿಗೂ ಆತ್ಮೀಯ ಸೋದರ ಬಂಧು – ಶ್ರೀವತ್ಸ ಜೋಶಿ, ನನಗೆ ಸಂಪನ್ಮೂಲ ವ್ಯಕ್ತಿ, ಮಾರ್ಗದರ್ಶಿ ಮತ್ತು ಅತಿಥೇಯ. ಇವೆಲ್ಲಕ್ಕೆ ಎಂ. ಮಂಗಳವೇಢೆ– ಶ್ರೀವತ್ಸನ ಸ್ನೇಹಿತ, ನಮಗೆ ಜತೆಗೊಟ್ಟಿದ್ದರು. ಎಲ್ಲ ಬಹುಕಾಲ ನೆನಪಿನಲ್ಲುಳಿಯುವ ಅನುಭವ. ನಾವು ಸೈಂಟ್ ಲೂಯಿಸ್ ಮತ್ತು ಚಿಕಾಗೋಗಳಲ್ಲಿ ವಾಲಿಮೋಕ್ಷ ತಾಳಮದ್ದಳೆ ನಡೆಸಿದೆವು. ಪಣಂಬೂರಿನ ವಾಸು ಐತಾಳ ಮತ್ತು ಶ್ರೀವತ್ಸ ಜೋಶಿ ಸಂಯೋಜಿಸಿದ್ದರು. ಇಂಥ ತಾಳಮದ್ದಳೆ ಸರಣಿ ಅಮೇರಿಕಾ ಸಂಯುಕ್ತ ರಾಷ್ಟ್ರದಲ್ಲಿ ಹಿಂದೆ ಆದದ್ದಿಲ್ಲ. ಸೈಂಟ್ ಲೂಯಿಸ್ಸಿನ ಸಂಗಮ ಕನ್ನಡ ಕೂಟ, ಮಹಾತ್ಮ ಗಾಂಧಿ ಸ್ಟಡಿ ಸೆಂಟರಿನ ಆಶ್ರಯದ ಹಿಂದೂ ದೇವಾಲಯದ ವಠಾರವನ್ನು ಬಳಸಿದ್ದರು. ಅಲ್ಲಿ ಸ್ಥಳೀಯವಾಗಿ ಗುಂಡ್ಮಿ ಅರವಿಂದ ಹೆಬ್ಬಾರ್ (ಸಾಲಿಗ್ರಾಮದ ಹಂದೆ ಕುಟುಂಬದ ಸದಸ್ಯ), ಗೋಪಿನಾಥ ಜೋಶಿ ಮತ್ತು ಗೆಳೆಯರು ಸಹಕರಿಸಿದ್ದರು. ಬಹು ಚೊಕ್ಕ ವ್ಯವಸ್ಥೆಯ ದೇವಾಲಯದಲ್ಲಿ ಶಿವ, ಪಾರ್ವತಿ, ವೆಂಕಟೇಶ, ಲಕ್ಷ್ಮಿ, ಗಣೇಶ, ಷಣ್ಮುಖ, ಅಯ್ಯಪ್ಪಾದಿ ದೇವ ಬಿಂಬಗಳಿವೆ.

ಚಿಕಾಗೋದ ನೇಪರ್‌ವಿಲ್ಲೆ ಗ್ರಂಥಾಲಯದಲ್ಲಿ ಶ್ವೇತಾ ಸೂರ್ಯನಾರಾಯಣ, ಕಜೆ ಮುರಳೀಧರ ಭಟ್ ಮತ್ತು ಗೆಳೆಯರು ವಿದ್ಯಾರಣ್ಯ ಕನ್ನಡ ಕೂಟದ ಹೆಸರಿನಲ್ಲಿ ವ್ಯವಸ್ಥೆ ಮಾಡಿದ್ದರು. ಎಲ್ಲಕ್ಕೂ ಭಾಗವತಿಕೆ ವಿದ್ಯುನ್ಮಾನ ಮಾಧ್ಯಮದ್ದು! E-ಭಾಗವತಿಕೆ (ಧ್ವನಿಮುದ್ರಿತ ಭಾಗವತಿಕೆಯನ್ನು ಗಣಕದ ಮೂಲಕ ಹಾಡಿಸಿದ್ದು) ಶ್ರೀನಿವಾಸ ಭಟ್ –ಸುಗ್ರೀವ, ಆದಿತ್ಯ ಭಟ್–ರಾಮ ಮತ್ತು ಸೌಮ್ಯ ಆದಿತ್ಯ – ತಾರೆಯಾಗಿ ಭಾಗವಹಿಸಿದ್ದರು.

ಜನ ಕಾರ್ಯಕ್ರಮವನ್ನು ತುಂಬ ಸಂತೋಷದಿಂದ ಸವಿದರು. ನನಗಂತೂ ದೂರ ಪರಿಚಯದ ಅನೇಕರು – ಬಸ್ತಿ ಶೆಣೈಯವರು, ಕುಲ್ಯಾಡಿ ಪೈಗಳು, ಕಸ್ತೂರಿ ಪೈಗಳು, ಕಜೆ ಕುಟುಂಬ, ಕೋಲ್ಪೆ ಕುಟುಂಬ, ಉಳಿಪಾಡಿಯ ಹೆಗ್ಡೆಗಳು ಮುಂತಾಗಿ ನನ್ನ ಸಮಾನ ಆಸಕ್ತರನ್ನು ಭೇಟಿಯಾದದ್ದು ಉಲ್ಲಾಸದಾಯಕ ಅನುಭವ. ನೀವು ನಮ್ಮಲ್ಲಿ ಬಂದಿದ್ದೀರಿ, ನೀವು ನನ್ನ ಅಕ್ಕನ ಲೆಕ್ಚರ್, ನಿಮ್ಮ ಸ್ವರವ ಕೇಳಿದ್ದೇನೆ ಇತ್ಯಾದಿ ಮಾತುಗಳು ಹಳೆ ಸಂಬಂಧಗಳ ನವೀಕರಣವನ್ನೇ ಮಾಡಿದಂತಾಯ್ತು. ಎರಡೂ ನಗರಗಳ ಗ್ರಂಥಾಲಯಗಳು, ನದೀ ತೀರದ ವಿಹಾರ, ಸರೋವರಗಳ ದರ್ಶನ, ಮಾಲ್‌ಗೆ ಭೇಟಿ ಎಲ್ಲವೂ ಹರ್ಷದಾಯಕವಾಗಿದ್ದುವು...

**ಬ್ಲಾಗ್ ಬರಹ (ಅಪೂರ್ಣ)**

## ಅಡಿಯಿಂದ ಮುಡಿಯವರೆಗೆ

**ಡಾ. ಪಾದೆಕಲ್ಲು ವಿಷ್ಣು ಭಟ್ಟ**

ಯಕ್ಷಗಾನ ವಿಮರ್ಶೆಯ ಕ್ಷೇತ್ರದಲ್ಲಿ ತಮ್ಮದೇ ಆದ ಮಾರ್ಗ ನಿರ್ಮಾಣ ವನ್ನು ಮಾಡಿ ಅದರಲ್ಲಿ ಸಾಕಷ್ಟು ದೂರ ಕ್ರಮಿಸಿದ ಡಾ.ಎಂ.ಪ್ರಭಾಕರ ಜೋಶಿಯವರ ವಿಮರ್ಶಾ ಲೇಖನಗಳ ಸಂಕಲನ 'ಮುಡಿ' ಕೃತಿ. ನಮ್ಮ ಪರಿಸರದ ಇಬ್ಬರು ಯಕ್ಷಗಾನ ವಿಮರ್ಶಕರು ಡಾ. ಜೋಶಿ ಮತ್ತು ಡಾ.ರಾಘವ ನಂಬಿಯಾರ್. ಇವರಿಬ್ಬರೂ ಕಾರ್ಕಳದಿಂದ ಬಂದವರೆಂಬುದು ಒಂದು ವಿಶೇಷ. ಇಬ್ಬರೂ ಒಂದೇ ಕಾಲೇಜಿನಲ್ಲಿ ಓದಿದವರು; ಇಬ್ಬರೂ ಬಾಲ್ಯದಿಂದಲೇ ಯಕ್ಷಗಾನಾಸಕ್ತಿಯನ್ನು ಬೆಳೆಯಿಸಿಕೊಂಡವರು; ಇಬ್ಬರೂ ಲೇಖಕರಾಗಿ ಪ್ರಸಿದ್ಧರಾದವರು. ವಿಭಿನ್ನ ವಿಷಯಗಳನ್ನು ಅಧ್ಯಯನ ಮಾಡಿ ಇಬ್ಬರೂ ಯಕ್ಷಗಾನ ಕ್ಷೇತ್ರದಲ್ಲಿಯೇ ಡಾಕ್ಟರೇಟ್ ಪದವಿ ಪಡೆದವರು (ಡಾ. ಜೋಶಿಯವರು ವಾಣಿಜ್ಯ ಶಾಸ್ತ್ರ ವಿಷಯದಲ್ಲಿ ಸ್ನಾತಕೋತ್ತರ ಪದವೀಧರರಾದರೆ, ಡಾ. ನಂಬಿಯಾರರು ಸಂಸ್ಕೃತ ಸಾಹಿತ್ಯ ವಿಷಯದಲ್ಲಿ ಸ್ನಾತಕೋತ್ತರ ಪದವೀಧರರು).

ಯಕ್ಷಗಾನ ಕ್ಷೇತ್ರದಲ್ಲಿ ಸಂಶೋಧನೆ ಬಹಳ ವರುಷಗಳಿಂದ ನಡೆದಿದೆ. ವಿಮರ್ಶೆಯೂ ಬಹಳ ವರುಷಗಳಿಂದ ನಡೆಯುತ್ತಿದೆ. ಡಾ.ಜೋಶಿಯವರು ವಿಮರ್ಶೆಯ ಮಾರ್ಗದಲ್ಲೂ, ಸಂಶೋಧನೆಯ ಮಾರ್ಗದಲ್ಲೂ ನಡೆದವರು. ಎಷ್ಟೋ ಬಾರಿ ಈ ಕ್ಷೇತ್ರದ ಬರಹಗಳನ್ನು ಗಮನಿಸಿದಾಗ ಸಂಶೋಧನೆ ಮತ್ತು ವಿಮರ್ಶೆ ಎಂಬ ಎರಡು ವಿಷಯ

ಗಳನ್ನು ಗೆರೆಯೆಳೆದು ವಿಂಗಡಿಸಿಕೊಳ್ಳುವಂತಿಲ್ಲ. ಎರಡರ ಅಂಶಗಳೂ ಒಟ್ಟು ಸೇರಿದ ಲೇಖನಗಳು ಬಹಳಷ್ಟಿವೆ. ಜೋಶಿಯವರ 'ಶ್ರೀಕೃಷ್ಣ ಸಂಧಾನ' ಪ್ರಸಂಗ ಕೃತಿಯ ಅಧ್ಯಯನ ಮಾಡಿ ಮಂಗಳೂರು ವಿಶ್ವವಿದ್ಯಾನಿಲಯದಿಂದ ಪಿಎಚ್.ಡಿ. ಪದವಿಯನ್ನು ಪಡೆದವರು. 'ಕೃಷ್ಣಸಂಧಾನ– ಪ್ರಸಂಗ ಮತ್ತು ಪ್ರಯೋಗ' ಪ್ರೌಢ ಪ್ರಬಂಧವು ಪುಸ್ತಕ ರೂಪದಲ್ಲಿ ಹೊರಬಂದಿದೆ (ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ / 1999).

ಈ ಕೃತಿಯು ಪ್ರಕಟಗೊಂಡು ಹದಿನೇಳು ವರ್ಷಗಳಾದರೂ (ಈಗ 2016) ಈ ಮಾದರಿಯ ಕೃತಿಗಳು ಬಂದಿಲ್ಲವೆಂಬುದು ಈ ಕೃತಿಯ ಅನನ್ಯತೆಯನ್ನು ಸಾರುತ್ತದೆ. ಹೀಗಿರುವುದಕ್ಕೆ ಈ ರೀತಿಯ ವಿಸ್ತೃತಾಧ್ಯಯನ–ವಿಮರ್ಶೆ ಸುಲಭಸಾಧ್ಯವಲ್ಲವೆಂದು ಹೊಸ ಸಂಶೋಧಕರು ಭಾವಿಸಿದ್ದಾರೆಂದು ತಿಳಿಯಬೇಕಷ್ಟೇ ಹೊರತು ಬೇರೇನಲ್ಲ. ಯಕ್ಷಗಾನ ಕ್ಷೇತ್ರದ ಸಂಶೋಧಕರು ಈ ಗ್ರಂಥವನ್ನು ಒಂದು ಬಹುಮುಖ್ಯ ಆಧಾರಗ್ರಂಥ ವೆಂದು ಪರಿಗಣಿಸಿರುವುದರಲ್ಲಿ ಸಂಶಯವಿಲ್ಲ. ಈ ಹಿನ್ನೆಲೆಯಿಂದ 'ಯಕ್ಷಗಾನ ವಿಮರ್ಶೆ'ಗೆ ಒಂದು ಸ್ವರೂಪವನ್ನು ಕೊಟ್ಟವರು ಡಾ. ಜೋಶಿಯವರು ಎಂದರೆ ತಪ್ಪಾಗದು.

ಯಕ್ಷಗಾನ ವಿಮರ್ಶೆಯ ಲೇಖನಗಳನ್ನು ಪತ್ರಿಕೆಗಳಲ್ಲಿ ಮತ್ತು ಸಂಸ್ಮರಣ ಗ್ರಂಥಗಳಲ್ಲಿ ಪ್ರಕಟಿಸಿ ಹಾಗೆಯೇ ಬಿಡದೆ, ಅವುಗಳನ್ನು ಒಟ್ಟು ಸೇರಿಸಿ ಪುಸ್ತಕ ರೂಪದಲ್ಲಿ ಒಂದರ ಹಿಂದೊಂದರಂತೆ ಪ್ರಕಟಿಸಿದರು. ಮೊದಲ ಯಕ್ಷಗಾನ ವಿಮರ್ಶೆಯ ಲೇಖನ ಸಂಕಲನ 'ಜಾಗರ' (ಪ್ರಕಟಣೆ 1984), ಅನಂತರ 'ಕೇದಗೆ' (ಪ್ರ : 1986), 'ಮಾರುಮಾಲೆ' (ಪ್ರ: 1990), 'ಪ್ರಸ್ತುತ' (ಪ್ರ : 1993), 'ವಾಗರ್ಥ' (ಪ್ರ. : 1998) ಕೃತಿಗಳ ಅನಂತರ ಇದೀಗ 'ಮುಡಿ' (ಪ್ರ : 2006) ಸಿದ್ಧವಾಗಿದೆ.

ಈ ಕೃತಿಯಲ್ಲಿ ಇಪ್ಪತ್ತನಾಲ್ಕು ಲೇಖನಗಳಿವೆ. 'ವಾಗರ್ಥ' ಪ್ರಕಟಣೆಯ ಅನಂತರ 1998 ರಿಂದ 2004ರ ವರೆಗೆ ಇವರು ಬರೆದು ಬೇರೆ ಬೇರೆಡೆಗಳಲ್ಲಿ ಪ್ರಕಟಗೊಂಡ ಯಕ್ಷಗಾನದ ವಿವಿಧ ವಿಷಯಗಳಿಗೆ ಸಂಬಂಧಿಸಿದ ಲೇಖನಗಳಿದರಲ್ಲಿವೆ. ಯಕ್ಷಗಾನದ ಬಗೆಗಿನ ತಾತ್ವಿಕ ವಿವೇಚನೆಗಳು, ಆಧುನಿಕತೆಗೂ ಯಕ್ಷಗಾನಕ್ಕೂ ಸಂಬಂಧಿಸಿದ ಲೇಖನಗಳು, ತಾಳಮದ್ದಳೆ ಮತ್ತು ರಂಗಪ್ರದರ್ಶನ ಸಂಬಂಧಿ ಲೇಖನಗಳು ಮತ್ತು ಇತರ ಸಮಾನ ರಂಗಕಲೆಗಳೊಂದಿಗೆ ತುಲನಾತ್ಮಕ ಪರಿಶೀಲನೆ ಮಾಡಿದ ಲೇಖನಗಳು ಇಲ್ಲಿವೆ. 'ಮುಡಿ' ಎಂದು ಯಕ್ಷಗಾನ ಪರಿಸರದೊಳಗಿನದೇ ಆದ ಶಬ್ದವನ್ನಾಯ್ದು ಪುಸ್ತಕ ಶೀರ್ಷಿಕೆಯನ್ನಾಗಿ ಇಲ್ಲಿ ಇರಿಸಿರುವುದು ಗಮನಾರ್ಹವಾಗಿದೆ. ಯಕ್ಷಗಾನದ 'ಅಡಿ'ಯಿಂದ ಅದರ 'ಮುಡಿ'ಯ ವರೆಗೆ ಚೆನ್ನಾಗಿ ಅರಿವುಳ್ಳ ಡಾ.ಎಂ.ಪ್ರಭಾಕರ ಜೋಶಿ ಯವರು ಯಕ್ಷಗಾನದ ಬಗೆಗೆ ಹತ್ತು ಹಲವು ಹೊಸ ಹೊಳಹುಗಳನ್ನು ವ್ಯಕ್ತಪಡಿಸಿ ಒಳ್ಳೆಯ ವಿಮರ್ಶೆಯ ಮಾತುಗಳನ್ನು ಹೇಳಿದ್ದಾರೆ. ವಿಶ್ವದ ಬಹು ಸಂಖ್ಯೆಯ ಕಲೆಗಳಲ್ಲಿ ಹಲವರ ಬಗೆಗೆ ಅಧ್ಯಯನ–ಪರಿಚಯವುಳ್ಳ ಡಾ. ಜೋಶಿಯವರು ಹೇಳಿದ ಮಾತುಗಳಲ್ಲಿ ವಿಶಿಷ್ಟತೆಯಿರುವುದನ್ನು ಯಕ್ಷಗಾನಾಸಕ್ತರೆಲ್ಲ ಗಮನಿಸಬೇಕು.

ಇಲ್ಲಿನ ಲೇಖನಗಳಲ್ಲಿ ಕೆಲವು ವಿಮರ್ಶೆಯ ಹಲವು ಒಳನೋಟ, ಹೊಳಹುಗಳನ್ನು ಹೊಂದಿವೆ. ಕೆಲವು ತುಲನಾತ್ಮಕ ವಿಮರ್ಶೆಗೆ ಉತ್ತಮ ಮಾದರಿಗಳಾಗಿವೆ. ಕೆಲವು ಕೇವಲ ಸಾಂದರ್ಭಿಕ ಬರಹಗಳಾಗಿವೆ. ಆದರೆ ಇವೆಲ್ಲವುಗಳಿಗೂ ಅವುಗಳೇ ಆದ ಮಹತ್ವವಿದೆ. ಯಕ್ಷಗಾನದಲ್ಲಿ ಆಗುತ್ತಿರುವ ಪರಿವರ್ತನೆಗಳು, ಕಾಲಮಿತಿಯ ಪ್ರಯೋಗಗಳು, ಕಲಾವಿದರ ಹಿತರಕ್ಷಣೆ – ಸಂಘಟನೆಯದೇ ಮೊದಲಾದ ವಿಷಯಗಳಿರಬಹುದು– ಇವನ್ನು 'ಇವೆಲ್ಲ ತತ್ಕಾಲೀನ ಸಮಸ್ಯೆ'ಗಳೆಂದು, ಬಹಳ ದೊಡ್ಡ ವಿಮರ್ಶೆ–ಸಂಶೋಧನೆಯ ವಿಷಯಗಳಲ್ಲವೆಂದೂ, ತತ್ಕಾಲದ ಜನ ಸುಲಭದಲ್ಲಿ ಹೇಳಿ ಬಿಡಬಹುದು. ಆದರೆ ಇಂತಹುಗಳನ್ನು ಆಯಾ ಕಾಲಗಳಲ್ಲೇ ದಾಖಲು ಮಾಡದೆ ಹೋದರೆ ಇನ್ನೊಂದು ಕಾಲದಲ್ಲಿ ಯಕ್ಷಗಾನ ಹಾದು ಬಂದ ಕಾಲಿಕ ವೈಚಿತ್ರ್ಯ – ವೈಶಿಷ್ಟ್ಯಗಳ ನೈಜಚಿತ್ರಣ ದೊರಕದೇ ಹೋಗಬಹುದು.

ತತ್ಕಾಲೀನವಾಗಿ ಇಲ್ಲಿ ಕೊಡಲಾದ ನಿರ್ಣಯಗಳಾಗಲಿ, ವಿಮರ್ಶೆಯ ಮಾತುಗಳಾಗಲಿ ಸದ್ಯಕ್ಕೆ ಗ್ರಾಹ್ಯವಲ್ಲವೆಂದೂ ತೋರಬಹುದು. ಇವೆಲ್ಲವೂ ಮುಂದೊಂದು ಕಾಲಕ್ಕೆ ಸಂಶೋಧನೆಗೆ ಸಾಮಗ್ರಿಗಳಾಗಲಿವೆ. ಆ ದೃಷ್ಟಿಯಿಂದ ಈಗ ಯಕ್ಷಗಾನದ ಬಗೆಗೆ ಬರುವ ಒಂದು ಸಣ್ಣ ಬರವಣಿಗೆ, ತುಣುಕು ಲೇಖನವೂ ಮುಖ್ಯವೇ ಆಗುತ್ತದೆ. ಈ ಲೇಖನಗಳಲ್ಲಿ ಹೆಚ್ಚಿನವು ಗಾತ್ರದಲ್ಲಿ ಸಣ್ಣವಾದರೂ ತತ್ಕಾಲೀನ ವಿಷಯಗಳನ್ನು ದಾಖಲಾತಿ ಮಾಡುತ್ತವೆ. ದಾಖಲಾತಿಯೆಂಬುದು ಇತಿಹಾಸ ರಚನೆಯ ಮತ್ತು ವಿಸ್ತಾರವಾದ ಕಾಲಿಕಯಾನದ ದೃಷ್ಟಿಯಿಂದ ಮುಖ್ಯವಾದುದಾಗಿದೆ. ಸಮಕಾಲೀನ ವಿಮರ್ಶೆಗಿಂತ ಭಿನ್ನವಾದ, ಬೇರೆಯೇ ವಿಮರ್ಶೆ ಇನ್ನೊಂದೇ ಕಾಲದಲ್ಲಿ ಬರಬಹುದಾದರೂ ತತ್ಕಾಲೀನ ವಿಮರ್ಶೆಗೆ ಐತಿಹಾಸಿಕ ಮುಖ್ಯತೆ ಇದ್ದೇ ಇದೆ.

ಹತ್ತಾರು ವಿವಿಧ ಕಲೆಗಳ ಬಗೆಗೆ ಸಾಮಾನ್ಯ ಪರಿಚಯವುಳ್ಳ, ಪಾರಂಪರಿಕ ಮತ್ತು ಸಮಕಾಲೀನ ವಿಷಯಗಳ ಬಗೆಗೆ ಸಮಾನ ಆಸಕ್ತಿಯಿಂದ ವ್ಯವಹರಿಸಿ ವಿಮರ್ಶಿಸಬಲ್ಲ ಸಹೃದಯನಾದ ಸಮಕಾಲೀನ ಸಂಶೋಧಕನೊಬ್ಬನು 'ಇದು ದಾಖಲಿಸಬೇಕಾದ ವಿಷಯ' ಎಂಬ ನಿರ್ಣಯಕ್ಕೆ ಬಂದು ಆ ವಿಷಯವನ್ನು ಲೇಖನ ರೂಪಕ್ಕೆ ತರುವುದೆಂದರೆ ದೀರ್ಘಕಾಲೀನವಾದ ಕಲಾ ಇತಿಹಾಸ ಮಾರ್ಗದಲ್ಲಿ ಆ ವಿಷಯವು ಗಮನಿಸತಕ್ಕುದೆಂದೇ ಆಗಿದೆ. ಇಂತಹ ವಿಷಯಗಳಲ್ಲಿ ಸಣ್ಣದು – ದೊಡ್ಡದೆಂದಿಲ್ಲ. ಕಾಲದ ಯಾತ್ರೆಯಲ್ಲಿ ಸಣ್ಣ ವಿಷಯ ಮುಂದೆ ದೊಡ್ಡದಾಗಬಹುದು; ದೊಡ್ಡ ವಿಷಯ ಸಣ್ಣದಾಗಬಹುದು. ಬಿಟ್ಟ ಮಂಡೆಯ, ಮೈಬಿಟ್ಟ, ನಾಟಕ ರೂಪದ ವೇಷಗಳನ್ನು ರಂಗಸ್ಥಳಕ್ಕೆ ತಂದು ಯಕ್ಷಗಾನದ ಶ್ರೇಷ್ಠ ಸುಧಾರಕರೆಂದು ಹೆಸರು ಪಡೆದ ಕಲಾವಿದರನ್ನು ತಲೆಮಾರಿನ ಅನಂತರ ಸತ್ಸಂಪ್ರದಾಯಗಳನ್ನು ಕೆಡಿಸಿ ಪರಂಪರೆಯ ವಿನಾಶಕ್ಕೂ, ಸ್ವೇಚ್ಛಾಚಾರದ ರಂಗಕ್ರಿಯೆಗಳಿಗೂ ಕಾರಣವಾದವರೆಂದು ಟೀಕಿಸಿಲ್ಲವೇ? ಆದುದರಿಂದ ಎಷ್ಟೋ ಸಮಕಾಲೀನ ವಿಷಯಗಳನ್ನು ತತ್ಕಾಲಗಳಲ್ಲಿ ಪೂರ್ಣವಾಗಿ ಅರ್ಥ ಮಾಡಿಕೊಳ್ಳಲಾಗುವುದಿಲ್ಲ. ಆದುದರಿಂದ ವಿಷಯಗಳ ಪ್ರಾಂಜಲವಾದ ದಾಖಲಾತಿ ಅಧ್ಯಯನ ಪರಂಪರೆಯು

ಮುಂದುವರಿಯುವ ದೃಷ್ಟಿಯಿಂದ ಅತ್ಯವಶ್ಯ.

ಪತ್ರಿಕೆಗಳನ್ನು ನೋಡಿದರೆ ಯಕ್ಷಗಾನದ ಬಗೆಗೆ ಚಿಕ್ಕ, ದೊಡ್ಡ ಲೇಖನಗಳನ್ನು ಬರೆದವರು ಸುಮಾರು ಐನೂರು ಮಂದಿ ಇರಬಹುದು. ಸಾಂದರ್ಭಿಕವಾಗಿ ಒಂದೊಂದೇ ಲೇಖನಗಳನ್ನು ಬರೆದು ಲೇಖಕರಲ್ಲದೆಯೂ ಲೇಖಕರಾದವರು ಸುಮಾರು ಅಷ್ಟೇ ಸಂಖ್ಯೆಯಲ್ಲಿರಬಹುದು. ನನ್ನ 'ಯಕ್ಷಗಾನ ಗ್ರಂಥಸೂಚಿ'ಯಲ್ಲಿರುವ ಯಕ್ಷಗಾನದ ಬರಹಗಾರರ ಸೂಚಿಯಲ್ಲಿ 755 ಹೆಸರುಗಳು ದಾಖಲಾಗಿವೆ. (2006), ಈಗ (2016ರಲ್ಲಿ) ಈ ಸಂಖ್ಯೆ ಸುಮಾರು 1500ರಷ್ಟು ದಾಟಿರಬಹುದೆಂದು ಊಹಿಸುವಂತಿದೆ. ಇಷ್ಟು ಸಂಖ್ಯೆಯ ಬರಹಗಾರರೊಳಗೆ ಯಕ್ಷಗಾನಕ್ಕೆ ಸಂಬಂಧಿಸಿದಂತೆ ಪುಸ್ತಕಗಳನ್ನು ರಚಿಸಿದವರು ಕೆಲವರೇ ಆದರೂ ಇದೊಂದು ಸಣ್ಣ ವಲಯದಲ್ಲಿ ಈ ಕ್ಷೇತ್ರ ಎಷ್ಟು ಮಂದಿಗೆ ಬರವಣಿಗೆಯ ಮತ್ತು ವಿಷಯ ದಾಖಲಾತಿಯ ಪ್ರೇರಣೆಯನ್ನು ನೀಡಿದೆ ಎಂದರೆ ಆಶ್ಚರ್ಯವಾಗುತ್ತದೆ.

ಇದು ಯಕ್ಷಗಾನದ ವಿಶಿಷ್ಟವಾದ ಶಕ್ತಿ ಮತ್ತು ಆಕರ್ಷಣೆಯೆಂದೇ ಹೇಳಬೇಕಾಗುತ್ತದೆ. ಯಕ್ಷಗಾನದ ಈ ಶಕ್ತಿಯ ಒಳಮರ್ಮಗಳೇನೆಂಬುದನ್ನು ತಿಳಿಯುವ ಪ್ರಯತ್ನವೇ ಜೋಶಿಯವರ ಎಲ್ಲ ಬರವಣಿಗೆಗಳ ಹಿಂದಿನ ಮುಖ್ಯ ಉದ್ದೇಶ. ಈ ಶಕ್ತಿಯನ್ನು ತಿಳಿಯುವಲ್ಲಿ, ಅರ್ಥಮಾಡಿಕೊಳ್ಳುವಲ್ಲಿ ನಾವು ಎಡವಬಾರದೆಂಬುದು ಅವರ ಕಾಳಜಿ. ಇದರಲ್ಲಿ ಇನ್ನೂ ತಿಳಿಯುವ ಭಾಗ ಬಹಳ ಇದೆ – ಈಗ ತಿಳಿದುದು ಅಂಶ ಮಾತ್ರ ಎಂಬ ನಿಲುವಿನಲ್ಲಿ ವಿಮರ್ಶೆಯ ವಿನಯವಿದೆ. ಇನ್ನಷ್ಟು ತಿಳಿಯಲು ವಿಸ್ತಾರವಾದ ಅಧ್ಯಯನ, ದೇಶದ ಮತ್ತು ವಿಶ್ವದ ಕಲಾಪ್ರಕಾರಗಳ ಪರಿಜ್ಞಾನ ಇರಲೇಬೇಕೆಂಬ ನಿಲುವಿನಲ್ಲಿ ವಾಸ್ತವತೆಯ ಅರಿವಿದೆ.

ಈ ಹಿನ್ನೆಲೆಯಿಂದ 'ಮುಡಿ'ಯ ಲೇಖನಗಳನ್ನೂ, ಇತರ ಕೃತಿಗಳ ಲೇಖನಗಳನ್ನೂ ಗಮನಿಸಬೇಕು. ಅವರ ಯಕ್ಷಗಾನ ಸಂಬಂಧಿಯಾದ ಎಲ್ಲ ಬರವಣಿಗೆಗಳು ಯಕ್ಷಗಾನವೆಂಬ ನಮ್ಮ ನಾಡಿನ ಅತ್ಯಾಶ್ಚರ್ಯಕರವಾದ ಕಲಾಸಂಪ್ರದಾಯವೊಂದನ್ನು 'ಅಡಿಯಿಂದ ಮುಡಿಯ ವರೆಗೆ' ಸಮಗ್ರವಾಗಿ ನೋಡುವ ಪ್ರಯತ್ನ. ಈ ಪ್ರಯತ್ನದಲ್ಲಿ ಅವರ ಇನ್ನಷ್ಟು ಲೇಖನಗಳು ಬರಲಿ; ಕೃತಿಗಳು ಬರಲಿ. ಲೇಖನಗಳನ್ನು ಬರೆಯುವ ಮತ್ತು ಹೊಸ ಹೊಳಹುಗಳನ್ನು ನೀಡುವ ಚಿಂತನಶಕ್ತಿಯೂ, ಅಧ್ಯಯನ ಬಲವೂ ಅವರಿಗಿದೆ. ಹೊಳೆದುದನ್ನು ಸ್ಪಷ್ಟವಾಗಿ ನಿರೂಪಿಸುವ ಅಭಿವ್ಯಕ್ತಿ ಸಾಮರ್ಥ್ಯವೂ ಇದೆ. ಆದುದರಿಂದ ಅವರ ಮೂಲಕ ಹೆಚ್ಚಿನ ಬರವಣಿಗೆಯನ್ನು ನಿರೀಕ್ಷಿಸುವುದು ತಪ್ಪಲ್ಲ. ಈ ಲೇಖನಗಳನ್ನೆಲ್ಲ ಓದುವವರ ಸಂಖ್ಯೆ ಕಡಿಮೆಯೇ ಇರಬಹುದು. ಆದರೆ ಇವುಗಳ ನಿಜವಾದ ಬೆಲೆಯನ್ನು ಕಾಲವು ತಿಳಿಸಿಕೊಟ್ಟೀತು.

**(ಉಡುಪಿ ಯಕ್ಷಗಾನ ಕೇಂದ್ರದ ನೂತನ ಭವನ 'ಶಿವಪ್ರಭಾ' ಉದ್ಘಾಟನೆಯ ಸಮಾರಂಭದಲ್ಲಿ (2006) ಬಿಡುಗಡೆಗೊಂಡ ಡಾ.ಎಂ.ಪ್ರಭಾಕರ ಜೋಶಿಯವರ 'ಮುಡಿ' ಯಕ್ಷಗಾನ ಲೇಖನ ಸಂಕಲನ ಕೃತಿಯ ಪರಿಚಯ ಭಾಷಣದ ಪರಿಷ್ಕೃತ ವಿಸ್ತೃತ ರೂಪ)**

# ಜೋಶಿಯವರ ಅಕ್ಷರಯಾನ

**ಕೃಷ್ಣಪ್ರಕಾಶ ಉಳಿತ್ತಾಯ**

ನಾಡು ಕಂಡ 'ವಿದ್ವಾಂಸ – ಡಾ. ಎಂ. ಪ್ರಭಾಕರ ಜೋಶಿ' ಅವರ ಕೆಲವು ಕೃತಿಗಳ ಪರಿಚಯಾತ್ಮಕ ಸೊಲ್ಲು ಇಲ್ಲಿದೆ.

**ಯಕ್ಷಗಾನ ಸ್ಥಿತಿಗತಿ**

ಪ್ರತಿಷ್ಠಿತ ಪಾರ್ತಿಸುಬ್ಬ ಪ್ರಶಸ್ತಿ ಪುರಸ್ಕೃತ, ಯಕ್ಷಗಾನದ ಚಿಂತನಾ ಕ್ರಮಕ್ಕೆ ಹೊಸತೊಂದು ಆಯಾಮ ಕೊಟ್ಟವರು ಡಾ.ಪ್ರಭಾಕರ ಜೋಶಿಯವರು. ಇವರು ಯಕ್ಷಗಾನ ಕ್ಷೇತ್ರದ ಒಂದು ಗಟ್ಟಿ ಧ್ವನಿ. ಅವರ ಈಚೆಗಿನ ಕೃತಿ 'ಯಕ್ಷಗಾನ ಸ್ಥಿತಿಗತಿ'ಯ ಇಪ್ಪತ್ತೆರಡು ಬರಹ ಇದನ್ನು ಶ್ರುತಪಡಿಸುತ್ತದೆ. ವೇಷ ಕಟ್ಟುವುದರಿಂದ ಹಿಡಿದು ಚುಟ್ಟಿ ಇಡುವವರೆಗೆ; ಚಕ್ರತಾಳ ಹಿಡಿಯುವುದರಿಂದ ತೊಡಗಿ ಗಾನದ ವರೆಗಿನ ಮಾಹಿತಿ ತನ್ನೊಳಗು ಮಾಡಿಕೊಂಡು, ಯಕ್ಷಗಾನದ ಸರ್ವಂಕಷ ಅರಿವಿನೊಡನೆ ಅರಳಿನಿಂತ ಜೋಶಿಯವರು ಯಕ್ಷಗಾನ ಕ್ಷೇತ್ರದ ಬಹುದೊಡ್ಡ ಸೊತ್ತು. ಈ ಕೃತಿ ನಮ್ಮ ಆಲೋಚನೆಯನ್ನು ಹೆಚ್ಚು ಮಾಡುವಲ್ಲಿ ಸಂಶಯವಿಲ್ಲ. ಜೋಶಿಯವರು ವಿವಿಧ ಕಡೆಗಳಲ್ಲಿ ಮಾಡಿದ ಉಪನ್ಯಾಸ, ಲೇಖನಗಳ ಸಂಕಲನವೇ 'ಯಕ್ಷಗಾನ ಸ್ಥಿತಿ ಗತಿ' ಕೃತಿ. ಈ ಬರಹ ಗುಚ್ಛದ ಸ್ಥೂಲ ಅವಲೋಕನ.

'ರಂಗ ಭಾಷೆ' ಅದರ ಪ್ರಾಮುಖ್ಯತೆ. ಅದರ ಅರಿವು ಮತ್ತು ಅದು ಒಂದು ಕಲೆಯ ಅರ್ಥೈಸುವಿಕೆಯಲ್ಲಿ ಮಾಡುವ ಉಪಕಾರ ಇವುಗಳನ್ನೆಲ್ಲಾ ವ್ಯಾಖ್ಯಾನಿಸುತ್ತಾ ಗಂಭೀರವಾಗಿ ಯಕ್ಷಗಾನದ ರಂಗ ಭಾಷೆಯನ್ನು ಕುರಿತು ಪ್ರಥಮ ಅಧ್ಯಾಯದಲ್ಲಿ ಹೇಳುತ್ತಾರೆ. "ರಂಗದ ಒಂದು ಸರಳ ಪೀಠ(ರಥ)ವೇ ರಥ, ಪರ್ವತ, ದೇವಾಲಯ, ಆಕಾಶ ಎಲ್ಲವೂ ಆಗಬಹುದು. ಕಲೆಯ ಸಿರಿತನ ಹೊರತು ಬಡತನವಲ್ಲ. ಅದರ ಬದಲು ವಾಸ್ತವದ ಸೀನು ಸೀನರಿಗಳನ್ನು ತಂದರೆ ಅದು ವಿಕೃತಿ ಕಲಾಸ್ವಭಾವ ವಿರೋಧಿಯಾಗುತ್ತದೆ".

ಇಂದಿನ ಅತ್ಯಾಧುನಿಕತೆಯಲ್ಲಿ ಯಕ್ಷಗಾನವನ್ನು ಪ್ರಭಾವಿಸುವ ಹಲವಾರು ಸನ್ನಿವೇಶಗಳಲ್ಲಿ ಕತೆ ತನ್ನ ಮೂಲ ಸ್ವರೂಪವನ್ನು ಉಳಿಸಿಕೊಂಡೇ ಅಥವಾ ಬಾಹ್ಯದಿಂದ ಸ್ವೀಕರಿಸುವ ಪ್ರಕ್ರಿಯೆಯಲ್ಲಿರಬೇಕಾದ ಜಾಗ್ರತೆ ಮತ್ತು ಅಗತ್ಯತೆಯನ್ನು ಜೋಶಿಯವರು ಹೇಳುತ್ತಾರೆ "ತನ್ನತನವನ್ನು ಜಿಗುಟುತನದಿಂದ ಕಾಪಾಡಿಕೊಳ್ಳುತ್ತಾ ಸ್ವೀಕೃತ ಪ್ರಭಾವಗಳನ್ನು ಅರಗಿಸಿ ತನ್ನ ರೂಪದಲ್ಲಿ ಎರಕಗೊಳಿಸುತ್ತಾ ತನ್ನೊಳಗಿಂದ ಬೆಳೆಯುತ್ತಾ ನಾಜೂಕಾಗುತ್ತಾ ಹೊಸ ವಸ್ತು ಆಶಯ ಅಭಿವ್ಯಕ್ತಿಗಳತ್ತ ಸತತವಾಗಿ ತುಡಿಯಬೇಕಾದುದು ಕಲೆಗೆ ಸಹಜ. ಅದಕ್ಕೆ ತನ್ನ ಹೆಮ್ಮೆ ಮತ್ತು ಅತೃಪ್ತಿ ಎರಡೂ ಬೇಕು. ಅದು ವಿಕಾಸಕ್ಕೆ ಪ್ರೇರಕ ವಾದ ದ್ವಂದ್ವಾತ್ಮಕ ಶಕ್ತಿ".

ಯಕ್ಷಗಾನದ ಹಾಡುಗಾರಿಕೆಯನ್ನು ವಿವೇಚಿಸುತ್ತಾ ಡಾ.ಪ್ರಭಾಕರ ಜೋಶಿಯವ ರೆನ್ನುವುದು – "ಯಕ್ಷಗಾನ ಸಂಗೀತವೆನ್ನುವುದು ಕರ್ಣಾಟಕೀ ಸಂಗೀತದ ಒಂದು ಪ್ರಾಚೀನ ಘನೀಕೃತ ರೂಪವೆಂದು. ವೆಂಕಟಮುಖಿಯ ಎಪ್ಪತ್ತೆರಡು ಮೇಳಕರ್ತ ರಾಗಗಳ ವಿಭಾಗೀಕರಣಕ್ಕಿಂತಲೂ ಮೊದಲೇ ಇದ್ದ ಈ ಶೈಲಿಯಲ್ಲಿ ಸುಮಾರು ನಲವತ್ತರಷ್ಟು ರಾಗಗಳ ಬಳಕೆ ಇದ್ದುದು ಕಾಲ ಕಾಲಕ್ಕೆ ಸೇರ್ಪಡೆ, ಪರಿವರ್ತನೆಗಳಾಗಿವೆ ಯಾದರೂ ಈಗಲೂ ಇದು 'ಯಕ್ಷಗಾನ ಸಂಗೀತ' ಎಂದು ಹೇಳುವ ಸ್ಪಷ್ಟರೂಪ ಅದಕ್ಕೆ ಉಳಿದು ಬಂದಿದೆ".

ಯಕ್ಷಗಾನ ತೆಂಕಣ ಮಟ್ಟಿನ ಹಿಮ್ಮೇಳದ ನೈತಿಕ ಕೇಂದ್ರದ personification ಆದ ನೆಡ್ಲೆ ನರಸಿಂಹ ಭಟ್ಟರ ಈ ಹೇಳಿಕೆಯನ್ನು ಡಾ. ಜೋಶಿಯವರು ಭಾಗವತಿಕೆಯ ಕುರಿತು ವಿವೇಚಿಸುವಾಗ ಹೇಳುತ್ತಾರೆ: "ಹಿಮ್ಮೇಳವನ್ನು ರಿಪೇರಿ ಮಾಡಬೇಕು". ಜೋಶಿಯವರು ಹೀಗೆ ಹೇಳುತ್ತಾರೆ. "..ಭಾಗವತನ ಸ್ಥಾನವು ಮುಖ್ಯವೆಂದು ಹೇಳುವಾಗ ಆತನ ಹೊಣೆಯನ್ನು ನಿರ್ವಹಿಸಲು ಬೇಕಾದಂತಹ ಅರಿವು ಮತ್ತು ಅಭ್ಯಾಸಗಳೇ ಮುಖ್ಯವೆಂಬುದು ಭಾವ. ವ್ಯಕ್ತಿಗತವಾಗಿ ಆತನೇ ಕೇಂದ್ರವಲ್ಲ. ಪ್ರದರ್ಶನ ಕಲಾಕೃತಿ ಯಾಗಲು ಹಿಮ್ಮೇಳದವರಿಗೆ ತಮ್ಮ ಕೆಲಸವೇನು, ತಿಳಿವು ಸಿದ್ಧತೆ ಇಲ್ಲದಾಗ ಹಿಮ್ಮೇಳವೇ ಗೊಂದಲಗಳಿಗೆ ಕಾರಣವಾಗುತ್ತದೆ". ಡಾ.ಜೋಶಿಯವರು ಗಂಭೀರವಾದ ಆತಂಕವನ್ನು ವ್ಯಕ್ತಪಡಿಸುತ್ತಾರೆ. "ಹಿಮ್ಮೇಳಕ್ಕೆ ತಾನೇನೆಂಬ ಅರಿವಿಲ್ಲ, ತಾನೇನು ಅಲ್ಲವೋ ಅದಾಗುವ ಆಸೆ". ಭಾಗವತಿಕೆಯ ಮೇಲೆ ಇತರ ಪ್ರಭಾವಗಳನ್ನು ವಿಶ್ಲೇಷಿಸುತ್ತಾ ...:"ಯಕ್ಷಗಾನದ ಪದ್ಯಗಳ ಸಹಜ ಛಂದೋಲಯದ ಅಂದ, ಸಂಧಿ, ಸಮಾಸ ಬಂಧದ ಸೊಗಸು. ಉಚ್ಚಾರ ನಿಖರತೆಯ ರೂಪವು (ಹೇಳುವಣಿಗೆ) ಚೂರು ಚೂರಾಗಿ ರೇಷ ಬಟ್ಟೆಯೊಂದನ್ನು ಏಳೆಂಟು ಕಡೆ ಹರಿದು ಅದರಲ್ಲಿ ಆನೆ ಕುದುರೆ ಬೊಂಬೆ ಮಾಡುವ ಮಕ್ಕಳಾಟಿಕೆಯಂತೆ ಕಾಣುತ್ತದೆ – ಹೊಸ ಹಾಡುಗಾರಿಕೆ. ಈ 'ಹೊಸ ಪದ್ಧತಿ(?) ತೆಂಕು ಬಡಗು ತಿಟ್ಟುಗಳನ್ನೆಲ್ಲ ವ್ಯಾಪಿಸಿರುವುದು ಆಘಾತಕಾರಿ.

ಯಕ್ಷಗಾನದಲ್ಲಿ ವಸ್ತು ಮಂಡನೆ ಎಂಬ ಪ್ರಬಂಧದಲ್ಲಿ ಮುಖ್ಯವಾಗುವುದು ಡಾ.ಜೋಶಿಯವರು ಪ್ರಸ್ತಾವಿಸಿದ ಯಕ್ಷಗಾನವೆಂಬುದು ಶೈಲಿ ಬದ್ಧವಾದ (stylized

style based) ಒಂದು ರಂಗಭೂಮಿ ಎಂಬುದು. "ಇದಕ್ಕೆ ಸುದೀರ್ಘವಾದ ಒಂದು ಪರಂಪರೆಯೂ ಅಂಗೋಪಾಂಗಗಳಲ್ಲಿ ಖಚಿತವಾದ ಸ್ವರೂಪವೂ ಇದೆ." ಯಾವುದೇ ಬದಲಾವಣೆ ಕ್ರಾಂತಿ ಇತ್ಯಾದಿ ಮಾಡಬೇಕಿದ್ದರೆ ಮೇಲೆ ಹೇಳಿದ ಯಕ್ಷಗಾನೀಯ ಶೈಲಿಯಲ್ಲೇ ಇರಬೇಕೆಂಬುದು ಆಶಯ ಲೇಖಕರದ್ದು.

ಯಕ್ಷಗಾನ ಕ್ಷೇತ್ರದ ಕ್ಲಾಸಿಕ್ ಗ್ರಂಥಗಳೆಂದು ಪರಿಗಣಿಸಬಹುದಾದ ಗ್ರಂಥಗಳ ಪೈಕಿ ಇದೂ ಒಂದು. ಗಂಭೀರ–ತಳಸ್ಪರ್ಶಿ ಅಧ್ಯಯನದ ಹಿನ್ನೆಲೆ, ರಂಗದ ಅನುಭವಗಳ ಹಿನ್ನೆಲೆಯಲ್ಲಿ ಮೂಡಿದ ಗ್ರಂಥ 'ಯಕ್ಷಗಾನ ಸ್ಥಿತಿಗತಿ'. ಯಕ್ಷಗಾನ ಕಲೆಯ ಅಧ್ಯಯನಾಸಕ್ತರಿಗೆ ಜತೆ ಜತೆಗೇ ಸಂಶೋಧಕರಿಗೂ ಉಪಯುಕ್ತವಾಗುವಂತಹ ರಚನೆ ಈ ಪುಸ್ತಕ.

**ಯಕ್ಷಗಾನದ ಅಭಿಮಾನ: 'ಕುಕ್ಕಿಲ ಸಂಪುಟ'**

ಜೋಶಿಯವರ ಸಂಪಾದಿತ ಗ್ರಂಥ 'ಕುಕ್ಕಿಲ ಸಂಪುಟ'. ಒಂದು ಮಾತು ಮೊದಲೇ ಹೇಳಿಬಿಡುತ್ತೇನೆ. ಈ ಗ್ರಂಥವನ್ನು ಓದಿದವರಿಗೆ ಯಕ್ಷಗಾನ ಕಲೆಯ ಮೇಲಿನ ಅಭಿಮಾನ ಇಮ್ಮಡಿಯಾಗುವುದರಲ್ಲಿ ಅನುಮಾನವಿಲ್ಲ. ಪುತ್ತೂರಿನ ಕರ್ನಾಟಕ ಸಂಘವು ಪ್ರಕಾಶಿಸಿದ ಈ ಪುಸ್ತಕದ ಬೆಲೆ ರೂಪಾಯಿ ನೂರ ಎಂಭತ್ತು. ಕನ್ನಡದ ಹೆಮ್ಮೆಯ ಸಂಶೋಧಕ ವಿದ್ವಾಂಸ ಕುಕ್ಕಿಲ ಕೃಷ್ಣ ಭಟ್ಟರ (1911–1988) ಬಿಡಿ ಬರಹಗಳ ಮತ್ತು ಸಂಸ್ಮರಣಾ ಲೇಖನಗಳು ಸಂಪುಟದ ಹೂರಣ.

ಕುಕ್ಕಿಲ ಕೃಷ್ಣ ಭಟ್ಟರ ಒಟ್ಟು ಇಪ್ಪತ್ತಾರು ಲೇಖನಗಳು ಅಸಾಧಾರಣ ವಿದ್ವತ್ತೆ, ತಲಸ್ಪರ್ಶಿ ಸಂಶೋಧನೆ ಮತ್ತು ಭಾಷಾ ಸೌಂದರ್ಯದಲ್ಲಿ ಅನನ್ಯತೆಯನ್ನು ತೋರುತ್ತದೆ. ಪ್ರಸ್ತಾವನೆಯಲ್ಲಿ ಜೋಶಿಯವರೆನ್ನುವಂತೆ – "..ದಿ.ಕೃಷ್ಣ ಭಟ್ಟರ ಬರವಣಿಗೆಯು ಗಾತ್ರದಲ್ಲಿ ದೊಡ್ಡದಲ್ಲ. ಆದರೆ ಅವರು ಬರೆದುದೆಲ್ಲವೂ ಘನವಾದುದು, ಆ ಕ್ಷೇತ್ರದಲ್ಲಿ ಆಚಾರ್ಯ ಕೃತಿಗಳೆಂದು ಮನ್ನಣೆ ಗಳಿಸಿವೆ.."

ಯಕ್ಷಗಾನ ಬಯಲಾಟದ ಸಭಾಲಕ್ಷಣ ಎಂಬ ಬರಹದಲ್ಲಿ (13ನೇ ಪುಟ) ಸಭಾಲಕ್ಷಣದಲ್ಲಿ ಬರುವ "ಆ ಹೂ ಹೂ" – ಇದು ಯಕ್ಷಗಾನದಲ್ಲಿ ಹಾಸ್ಯಗಾರನೂ ಬಳಸುವ ಭಾಷಾ ಪ್ರಯೋಗ – ವೈದಿಕ ಶಬ್ದವೆಂದೂ ಮತ್ತು ಆಪ್ಟೆಯವರ ಸಂಸ್ಕೃತ ನಿಘಂಟುವಿನ ಅರ್ಥ – ದೇವರನ್ನು ಆಮಂತ್ರಿಸುವ ವೈದಿಕ ಶಬ್ದವೆಂದೂ ತಿಳಿಸಿದ್ದಾರೆ. ಪೂರ್ವರಂಗದಲ್ಲಿ ಇದರ ಬಳಕೆಯ ಔಚಿತ್ಯ ನೋಡಬಹುದು.

ಯಕ್ಷಗಾನ ದೃಶ್ಯ ಪ್ರಯೋಗದ ಶಾಸ್ತ್ರೀಯತೆ (ತೆಂಕಣಮಟ್ಟು) ಎಂಬ ಬರಹ ಯಕ್ಷಗಾನ ಆಸಕ್ತರು ಓದಬೇಕಾದ ಬರಹ. ನಾವು ಯಕ್ಷಗಾನದ ಮೇಲಿಟ್ಟಿರುವ ಅಭಿಮಾನ ವೃದ್ಧಿಸುವ ಬರಹ. ಹೇಗೆ ಯಕ್ಷಗಾನ ಶಾಸ್ತ್ರೀಯ ಮತ್ತು ಭರತನ ನಾಟ್ಯಶಾಸ್ತ್ರಕ್ಕೆ ನಿಷ್ಠವಾಗಿದೆ ಎಂಬುದನ್ನು ಸಾರಿ ಹೇಳುವಂತಹ ಸಂಶೋಧನಾತ್ಮಕ ಲೇಖನ.

ಸೂಡ–ಸೂಳಾದಿ ಸಾಲಗ, ಸಂಗೀತ ರತ್ನಾಕರ ವ್ಯಾಖ್ಯಾನ, ದೇಶೀಯ ಛಂದಸ್ಸುಗಳ

ಮೂಲ 'ಏಲೆ' ಇತ್ಯಾದಿ ಬರಹಗಳಿಂದ ಸಮೃದ್ಧವಾಗಿದೆ.

**ಕೃಷ್ಣ ಸಂಧಾನ – ಪ್ರಸಂಗ ಮತ್ತು ಪ್ರಯೋಗ**

ಜೋಶಿಯವರ ಪಿ.ಹೆಚ್.ಡಿ. ಮಹಾಪ್ರಬಂಧ. ಯಕ್ಷಗಾನ ತಾಳಮದ್ದಳೆ ಕ್ಷೇತ್ರದಲ್ಲಿ ಕೃಷ್ಣಸಂಧಾನ ಬಹು ಮುಖ್ಯ ಮಾತ್ರವಲ್ಲ ಜನಪ್ರಿಯ ಪ್ರಸಂಗ ಕಾವ್ಯ. ತಾಳಮದ್ದಳೆಯಲ್ಲಂತೂ ದೇವೀದಾಸ ಕವಿಯ ಈ ಪ್ರಸಂಗ ನಡೆದಷ್ಟು ಪ್ರಾಯಃ ಯಾವ ಪ್ರಸಂಗಗಳೂ ನಡೆದಿಲ್ಲ. ಹೆಚ್ಚಾಗಿ ಭಾಗವತಿಕೆಯ ಕಲಿಕೆ ಇದೇ ಪ್ರಸಂಗದ ದ್ವಾರಾ ಆಗುತ್ತದೆ. ತಾಳಮದ್ದಳೆಯ ಪ್ರತೀ ಅರ್ಥದಾರಿ ಈ ಪ್ರಸಂಗದಲ್ಲಿ ಪಾತ್ರಧಾರಿಯಾಗದೇ ಇಲ್ಲದ್ದಿಲ್ಲ.

ಡಾ.ಜೋಶಿಯವರು ಈ ಪ್ರಸಂಗದ ಮುಖೇನ ಎರಡು ನೆಲೆಗಳಲ್ಲಿ ಪ್ರಸಂಗವನ್ನು ವಿವೇಚಿಸಿದ್ದಾರೆ. ಒಂದು– ಒಬ್ಬ ಕಲಾವಿದನಾಗಿ ಪ್ರಸಂಗದ ಒಳ ನೋಟ. ಎರಡು ವಿಮರ್ಶಕನಾಗಿ ಅಥವಾ ಪ್ರೇಕ್ಷಕನಾಗಿ ಪ್ರಸಂಗದ ವೀಕ್ಷಣೆ. ಹೀಗೆ ನೋಡುತ್ತಾ ನೋಡುತ್ತಾ ಆತ್ಯಂತಿಕವಾಗಿ ಇಡೀ ಯಕ್ಷಗಾನ(ತೆಂಕು, ಬಡಗು, ಬಡಾ ಬಡಗು)ವನ್ನು ಕೇಂದ್ರೀಕರಿಸಿ ಪ್ರಸಂಗದ ಇತಿಹಾಸ, ಮುನ್ನಡೆ, ನಿಲುವು, ಬಾಗು ಮತ್ತು ಸಾಧ್ಯತೆಗಳ ಕುರಿತ ಅತ್ಯಂತ ಆಳವಾದ ನೋಟವನ್ನು ಮುನ್ನೂರ ಎಪ್ಪತ್ತೈದು ಪುಟಗಳಲ್ಲಿ ಹರಿಸಿದ್ದಾರೆ. ಕೇವಲ ಒಂದು ಯಕ್ಷಗಾನ ಪ್ರಸಂಗ ಕಾವ್ಯವನ್ನು ಇಟ್ಟುಕೊಂಡು ಇಷ್ಟು ಧೀರ್ಘ ಚಿಂತನೆ ಪ್ರಾಯಃ ಬೇರಿಲ್ಲ.

ಆಕರ ಪರಿಶೀಲನ ಎಂಬ ಅಧ್ಯಾಯದಲ್ಲಿ ಕವಿಯ ದೇಶ ಕಾಲದ ಕುರಿತ ವಿವೇಚನೆ ಆಸಕ್ತಿದಾಯಕ. ಹಿಂದೆಲ್ಲ ಕವಿಗಳು ತಮ್ಮ ಹೆಸರನ್ನು ಎಲ್ಲೂ ಹೇಳಿಕೊಳ್ಳುತ್ತಾ ಇರಲಿಲ್ಲ. ಹೇಳಿಕೊಂಡರೂ ಅದು ಶ್ಲೇಷಾಲಂಕಾರದಲ್ಲೋ, ನೇರವಾಗಿಲ್ಲದೆಯೋ ಹೇಳಿಯಾರು. ದೇವೀದಾಸನೂ ಅಂತೆಯೇ. ಇದರ ಕುರಿತ ಊಹೆಗಳು ಇಲ್ಲಿ ಮೂಡಿವೆ. ಉದಾ: ದೇವಿದಾಸನು ಪುತ್ತೂರು ಸಮೀಪದ ಮಾಣಿಯವನೆಂದೋ, ವಿಟ್ಲದವನೆಂದೋ, ಧರ್ಮಸ್ಥಳ, ಪೊಳಲಿ ಹೀಗೆ.

ಯಾವ ರೀತಿಯಲ್ಲಿ ಈ ಪ್ರಸಂಗವು ತುರಂಗ ಭಾರತ, ಕುಮಾರವ್ಯಾಸ ಭಾರತ ಮತ್ತು ವ್ಯಾಸ ಭಾರತದಿಂದ ಪ್ರಭಾವಿತವಾಗಿದೆ ಎಂಬುದನ್ನೂ ವಿವೇಚಿಸಿದ್ದಾರೆ. ಉದಾ: ಜರಡು ಸುರಭಿ ಪ್ರಕರಣ – ತುರಂಗ ಭಾರತದಲ್ಲಿ ಬಂದಂತೆ. ತುರಂಗ ಭಾರತದ "ಗೌತಮ ಪಶುವಿನಾದೋಷವುಂಟಾಗಿ ಕಾಡುತಿರಲು" ಎಂಬ ಅಸ್ಪಷ್ಟ ಸುಳುಹನ್ನು ಕವಿಯು ಜರಡು ಸುರಭಿಯ ಪ್ರಕರಣವನ್ನಾಗಿ ಮಾರ್ಪಡಿಸಿದರೆನ್ನುವ ಜೋಶಿಯವರ ವಿಚಿಕಿತ್ಸಕ ದೃಷ್ಟಿ ಸೊಗಸಾಗಿದೆ.

'ಪ್ರಸಂಗ ಪರಿಶೀಲನ–ಸಾಹಿತ್ಯಕ ಮತ್ತು ರಂಗದೃಷ್ಟಿಯ ಪರಾಮರ್ಶೆ. ಪ್ರಯೋಗ ಪರಿಶೀಲನ – ಅರ್ಥ ವಿಸ್ತಾರ, ಪಾತ್ರ ಪರಿಶೀಲನ, ಅರ್ಥ ಪರಿಶೀಲನ, ನಾಟ್ಯ ಪರಿಶೀಲನ, ಉಪಸಂಹಾರ..' ಹೀಗೆ ಹಬ್ಬಿರುವ ಈ ಮಹಾಪ್ರಬಂಧ ಯಕ್ಷಗಾನ ವಿದ್ಯಾರ್ಥಿಗಳು ಮತ್ತು ಆಟ – ಕೂಟಗಳ ಕಲಾವಿದರು ಅಗತ್ಯವಾಗಿ ಗಮನಿಸತಕ್ಕಂತಹ

ಅಪೂರ್ವ ಗ್ರಂಥ.

ಅರ್ಥ ಪರಿಶೀಲನದಲ್ಲಂತೂ ಕಲಿಕಾ ಹಂತದಲ್ಲಿರುವ ತಾಳಮದ್ದಳೆ ಅರ್ಥದಾರಿಗಳಿಗೆ ಕೈಪಿಡಿಯಂತಿದೆ. ಮತ್ತೆ ಮತ್ತೆ ಓದುವಂತೆ ಮಾಡುತ್ತದೆ. ಇದರ ಬೆಲೆ ಇನ್ನೂರ ಹತ್ತು ರೂಪಾಯಿಗಳು.

**'ತತ್ವ ಮನನ'**

ಜೋಶಿಯವರ ಅಧ್ಯಯನ ವ್ಯವಸಾಯ ತತ್ವಶಾಸ್ತ್ರ ಕ್ಷೇತ್ರಕ್ಕೂ ಹಬ್ಬಿದೆ. ಅದರಲ್ಲೂ ಭಾರತೀಯ ತತ್ವಶಾಸ್ತ್ರದ ಕುರಿತಂತೆ ಒಂದು ರೀತಿಯ obsessionನಿಂದ ಕೂಡಿದ ಆಸಕ್ತಿ ಮತ್ತು ತತ್ವಶಾಸ್ತ್ರದ ಕುರಿತಂತೆ ಒಂದು ಶಬ್ದ ನಾವಾಡಿದರೆ ತಾಸುಗಟ್ಟಲೆ ಅದರ ಕುರಿತು ಮಾತಾಡುವ ಉಮೇದು ಡಾ.ಜೋಶಿಯವರದ್ದು. ಇದು ನನ್ನ ವೈಯಕ್ತಿಕ ಅನುಭವ:. ಒಂದುವರೆ ತಾಸು ಬಿಡದೆ ಭಾರತೀಯ ತತ್ವಶಾಸ್ತ್ರದ ಕುರಿತಾಗಿ ಕೇಳಿದ ಸಂತೋಷ! ಅವರ ಮಾತು ಚುಟುಕು. ವಿಷಯದ ಆಳ ಅಗಾಧ. ಮದ್ದಿನ ಗುಳಿಗೆಗಳಂತಹ ಮಾತು. ಅದೇ ತರಹ ಅವರ ಬರಹವೂ. ಸೂತ್ರರೂಪದಂತೆ. ಎಷ್ಟು ಬೇಕೋ ಅಷ್ಟು. No nonsense. 'ಭಾರತೀಯ ತತ್ವಶಾಸ್ತ್ರ ಪ್ರವೇಶ' ಇದು ಅವರ ಇನ್ನೊಂದು ಗ್ರಂಥ – ಪ್ರೊ.ಎಂ.ಎಂ.ಹೆಗಡೆಯವರೊಂದಿಗೆ.

ಆಕೃತಿ ಆಶಯ ಪಬ್ಲಿಕೇಷನ್ಸ್, ಮಂಗಳೂರು ಇವರು ಹೊರತಂದ ಹೊಸ ಪುಸ್ತಕ 'ತತ್ವ ಮನನ: ಧರ್ಮ, ತತ್ವದರ್ಶನ ಪುರಾಣ' ನೂರಾತೊಂಭತ್ತೊಂದು ಪುಟಗಳಿಗೆ ಹರಡಿದ ವಿಚಾರಧಾರೆ. ಬೆಲೆ ರೂ. ನೂರ ಎಂಭತ್ತು.

ಒಟ್ಟು ಹದಿನೇಳು ಅಧ್ಯಾಯಗಳಿವೆ. ಮೊದಲ ಅಧ್ಯಾಯದಲ್ಲಿ ಸಂಕ್ಷೇಪವಾಗಿ ಭಾರತೀಯ ತತ್ವಶಾಸ್ತ್ರದ ಪರಿಚಯ ಮಾಡಿಕೊಡುತ್ತಾರೆ. ಇದರಲ್ಲಿ ಜೋಶಿಯವರೆನ್ನುತ್ತಾರೆ "ಭಾರತೀಯ ತತ್ವಶಾಸ್ತ್ರದಲ್ಲಿ ದೇವರನ್ನು ಒಪ್ಪುವುದು, ಒಪ್ಪದಿರುವುದು ಅಷ್ಟು ಮುಖ್ಯ ವಿಷಯವಲ್ಲ ಅಂದರೆ ಅಚ್ಚರಿಯಲ್ಲ. ಅದು ಪ್ರಮುಖ ಪ್ರಶ್ನೆಯಂತೂ ಅಲ್ಲ. ಜ್ಞಾನ ಮುಖ್ಯವೇ ಕರ್ಮವೇ? ವಸ್ತು ಸ್ವಭಾವ ನಿಯಮಗಳ ಯಾವುವು? ಮೋಕ್ಷದ ಸಾಧನೆಗೆ ಯಾವ ತಿಳಿವು. ಅದರ ಅನ್ವಯ ಇವು ಹೆಚ್ಚು ಮುಖ್ಯ? ಇವೇ ಪ್ರಧಾನವಾದವುಗಳು. ಪುರುಷಾರ್ಥಗಳು ಪ್ರಧಾನ.." ಹೀಗೆ ಭಾರತೀಯ ತತ್ವ ಶಾಸ್ತ್ರದ ಒಂದು ಸ್ಥೂಲ ಅವಲೋಕನ ದೊರಕುತ್ತದೆ. ವಿಸ್ತಾರವಾದ ಮತ್ತು ಗಂಭೀರ ಓದಿಗೆ ಬೇಕಾದ ಅಡಿಪಾಯ ಕಟ್ಟಿಕೊಡುತ್ತದೆ.

ಎರಡನೆಯ ಅಧ್ಯಾಯದಲ್ಲಿ ಬೌದ್ಧ ದರ್ಶನದ ಬಗ್ಗೆ, ಮೂರನೆಯ ಅಧ್ಯಾಯದಲ್ಲಿ ಶೈವದರ್ಶನದ ಕುರಿತಾಗಿ, ನಾಲ್ಕನೆಯ ಅಧ್ಯಾಯದಲ್ಲಿ ನಾಸ್ತಿಕ ದರ್ಶನದ ಕುರಿತು ಅತ್ಯಂತ ಆಸಕ್ತಿದಾಯಕ ಮತ್ತು ಕೆಲವು ಹೊಸ ಹೊಳಹನ್ನು ಕೊಡುವಂತಹ ವಿವೇಚನೆ. ಆಸ್ತಿಕ –ನಾಸ್ತಿಕ ಇವುಗಳ ವಿಚಾರದಲ್ಲಿ, (ಪುಟ 76) ರೋಚಕವಾದ ವಿಮರ್ಶೆಯನ್ನು ಮಾಡಿದ್ದಾರೆ. ಭಗವಾನ್ ಪರಶುರಾಮರ ಕುರಿತಾದ ಅಧ್ಯಾಯ ಆರರಲ್ಲಿದೆ. ಅಂತೆಯೇ

ಚಿತ್ಪಾವನ ಬ್ರಾಹ್ಮಣರು ಮತ್ತು ಪರಶುರಾಮ ಹೀಗೆ ಚಿಂತಿಸುತ್ತಾ ಐತಿಹಾಸಿಕ ದೃಷ್ಟಿಯಿಂದ ಚಿತ್ಪಾವನ ಬ್ರಾಹ್ಮಣರ ಕುರಿತಾಗಿಯೂ ವಿವೇಚಿಸಿದ್ದಾರೆ.

ಹೀಗೆ ಈ ಪುಸ್ತಕ ಭಾರತೀಯ ತತ್ವಶಾಸ್ತ್ರದ ಕುರಿತಾಗಿ ಆಸಕ್ತರಲ್ಲಿಯೂ ಮತ್ತು ಭಾರತೀಯ ಸಂಸ್ಕೃತಿ ಇತಿಹಾಸದ ಆಸಕ್ತರಿಗೆ ಅತ್ಯಂತ ಅಗತ್ಯದ ಓದಾಗಿ ಪರಿಣಮಿಸುವುದರಲ್ಲಿ ಯಾವ ಸಂಶಯವೂ ಇಲ್ಲ. ಮುಖ್ಯವಾಗಿ ಯಕ್ಷಗಾನ ಅರ್ಥದಾರಿಗಳು ಈ ಗ್ರಂಥದಿಂದ ಉಪಕೃತರಾಗುತ್ತಾರೆ.

**'ಯಕ್ಷಗಾನ ಪದಕೋಶ'**

ಯಕ್ಷಗಾನ ಕಲೆಗೆ ಸಂಬಂಧಿಸಿದ ಪಾರಿಭಾಷಿಕ ಪದಗಳನ್ನು ವಿವರಿಸುವ ಕೋಶ. 1994ರಲ್ಲಿ ಪ್ರಕಾಶಿತ. ಯಕ್ಷಗಾನ ಪದಕೋಶ – ತುಂಬಾ ಮಹತ್ವದ ಕೊಡುಗೆ. ಇಪ್ಪತ್ತನಾಲ್ಕು ವರುಷಗಳ ಬಳಿಕ ಅದರ ಪುನರ್ಮುದ್ರಣಕ್ಕೆ ಕೆಲವು ಬದಲಾವಣೆಗಳೊಡನೆ ಕೈಗೆತ್ತಿಕೊಂಡು ಅದರ ಕೆಲಸ ಸಾಗುತ್ತಿದೆ.

ಒಂದು ಉದಾ : ಅಂಡುಕುಟ್ಟಿ: ಪೂರ್ವರಂಗದ ಕಟ್ಟು ಹಾಸ್ಯಗಳಲ್ಲಿ ಒಂದು ಬಗೆ. ಮಲೆಯಾಳಿ ಬೆಸ್ತರ ಹಾಸ್ಯ. ಬೆಸ್ತ ದಂಪತಿಗಳು 'ಕುಟ್ಟಿ ಕುಟ್ಟಿ ಪೇಶಲೆ ಅಂಡುಕುಟ್ಟಿ ಪೇಶಲೆ' ಎಂಬ ಪದ್ಯವನ್ನು ಹಾಡಿಕೊಂಡು ಬರುವರು. ಅನಂತರ ಅವರೊಳಗೆ ಜಗಳವಾಗಿ, ಗಂಡನು ಹೆಂಡತಿಗೆ ಹೊಡೆಯುವಾಗ, ಮಕ್ಕಳು (ಅಂಡುಕುಟ್ಟಿಗಳು) 'ಅಡಿಕ್ಕೊಲ್ಲಾ' (ಹೊಡೆಯಬೇಡ) ಎಂದು ತಡೆಯುವರು. 'ಅಡಿಕ್ಕೊಲ್ಲ' ಹಾಸ್ಯವೆಂದರೂ ಇದೇ.

ಅತ್ಯಂತ ಆಸ್ಥೆಯಿಂದ ಗಂಭೀರವಾಗಿ ಸಂಶೋಧನೆ ಮಾಡಿ ಹೊರತಂದ ಮಹತ್ವದ ಕೃತಿ. ಪ್ರಾದೇಶಿಕ ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ ಇವರ ಪ್ರಕಾಶನ. 172 ಪುಟಗಳು.

ವಿವಿಧ ಲೇಖನಗಳು, ಸಂವಾದಗಳು, ವಿಮರ್ಶೆಗಳು ಹೀಗೆ ಹಲವು ಬರಹಗಳಿವೆ. ದಿ. ಸೇಡಿಯಾಪು ಕೃಷ್ಣ ಭಟ್ಟರು, ದಿ. ಕುಕ್ಕಿಲ ಕೃಷ್ಣ ಭಟ್ಟರು ದಿ. ಪೆರ್ಲ ಕೃಷ್ಣ ಭಟ್ಟರು, ಶಿವರಾಮ ಕಾರಂತರು, ಕೆ.ಎಂ. ರಾಘವ ನಂಬಿಯಾರರು, ಡಾ. ಪ್ರಭಾಕರ ಜೋಶಿಯವರು.. ಹೀಗೆ ಅನೇಕರ ಬರಹಗಳಿವೆ.

2009ರಲ್ಲಿ ಉಡುಪಿಯ ಕಲಾರಂಗ ಪ್ರಕಾಶಿಸಿದ್ದರು. ಕೃತಿಯ ಸಂಪಾದಕರು – ಡಾ. ಪಾದೆಕಲ್ಲು ವಿಷ್ಣು ಭಟ್ಟ ಮತ್ತು ಡಾ. ಎಂ. ಪ್ರಭಾಕರ ಜೋಶಿ. ಬೆಲೆ ರೂಪಾಯಿ ಮುನ್ನೂರು.

**(ಇ–ಬರಹಗಳು)**






## ಮುನ್ನುಡಿಯ ಮುಡಿ

ಜಾಗರ, 1984, ಸುಮನಸಾ ವಿಚಾರ ವೇದಿಕೆ, ಚೊಕ್ಕಾಡಿ

# ಬುದ್ಧಿಯ ಹರಿತ – ಸಂವೇದನೆಯ ಸೂಕ್ಷ್ಮತೆ

**ಲಕ್ಷ್ಮೀಶ ತೋಳ್ಪಾಡಿ**

ಇತ್ತ ದಟ್ಟವಾದ; ವಿವರ ವಿವರಕ್ಕೆ ಕಣ್ಣು ಹಾಯಿಸಬಲ್ಲ ಎಚ್ಚರವಲ್ಲ. ಅತ್ತ ಎಲ್ಲದಕ್ಕೂ ಕರಿಮುಸುಕು ಎಳೆದಂತೆ ಗಾಢ ಸುಷುಪ್ತಿಯಲ್ಲ. ನಡುವಣ ಸ್ವಪ್ನ ರಮ್ಯ; ಅರ್ಧನಿಮೀಲಿತ ಮಾಯಾಲೋಕವೊಂದರ ಸೃಷ್ಟಿಗಾಗಿ ಕಲೆ ಕೆಲಸ ಮಾಡುತ್ತದೆ. ನಮ್ಮ ಸಂಗೀತ, ಚಿತ್ರ, ಶಿಲ್ಪ, ನಾಟ್ಯ – ಎಲ್ಲೆಲ್ಲಿಯೂ ಈ ಅರೆತೆರೆದ ಅಂದರೆ ಅರೆಮುಚ್ಚಿದ, ವ್ಯಂಗ್ಯದ ಸೋಂಕಿಲ್ಲದೆ ಹೇಳುವ – ಈ ನಿಸ್ತರಂಗ ಧ್ಯಾನ ಸ್ಥಿತಿ.

ಇನ್ನೊಂದು ವಿಲಕ್ಷಣ ವಿದ್ಯಮಾನ ಇದೆ. ಕಲೆ ನಿರ್ಮಿಸುವ, ವಾಸ್ತವವನ್ನು ದಾಟದ ಭ್ರಮಾದ್ಭುತ ಪ್ರಪಂಚ. ಖಚಿತವಾದ, ಕರಾರುವಾಕ್ಕಾದ ಲೆಕ್ಕಾಚಾರದ 'ಶಾಸ್ತ್ರ'ದ ಗಟ್ಟಿನೆಲದ ಮೇಲೆ ನಿಂತಿದೆ. ಚಾಚೂ ತಪ್ಪಬಾರದ ನಿರ್ದಿಷ್ಟ ತಾಳಗತಿ, ಆ ಗತಿಯಲ್ಲೇ ಹರಿವ ಲಯ, ಲಯಾನುಸಾರಿಯಾಗಿ ನರ್ತಕನ ಹೆಜ್ಜೆ; ಮೈ, ಪ್ರಮಾಣಬದ್ಧವಾದ ವೇಷರಚನೆ – ಇವೆಲ್ಲ ಶಾಸ್ತ್ರದ ಚೌಕಟ್ಟು ಎಷ್ಟು ಗಂಭೀರ ಎಂಬುದನ್ನು ತೋರಿಸುತ್ತದೆ. ಎಂಥ ಮನೋಧರ್ಮವೂ ಈ ಚೌಕಟ್ಟನ್ನು ಮುರಿಯುವುದಿಲ್ಲ, ಹಿಗ್ಗಿಸುತ್ತದೆ. ಮನೋಧರ್ಮ ಅರಳುತ್ತಿರುವಂತೆ ಚೌಕಟ್ಟಿನ ಎಲ್ಲೆಯನ್ನು ಹುಡುಕತೊಡಗಿದಾಗ, ಚೌಕಟ್ಟೇ ಕೊಂಚ ಮುನ್‌ಸರಿದು ಮನೋಧರ್ಮಕ್ಕೆ ಎಡೆಮಾಡಿಗೊಟ್ಟು ಮತ್ತೆ ಅದರ ಸುತ್ತ ಚೌಕಟ್ಟಾಗೇ ನಿಂತಂತೆ ಕಾಣುತ್ತದೆ ನಮಗೆ. ನಮ್ಮ ಅಳವಿಗೆ

ಇನ್ನೇನು ಸಿಕ್ಕಿತು ಎಂದು ತೋರುವ ದಿಗಂತದಂತೆ. ಈ ವಿದ್ಯಮಾನ ಭಾರತೀಯ ಕಲೆಗಳಿಗೆ ಹೇಗೆ, ಹಾಗೆ ಭಾರತೀಯ ಸಮಾಜಕ್ಕೂ ಸಲ್ಲುವುದೆಂದು ತೋರುತ್ತದೆ.

ಆತ್ಮ ಅಥವಾ ಮನಸ್ಸು ಮೈಯಲ್ಲಿ ಮನೆ ಮಾಡಿದಂತೆ, ಶಾಸ್ತ್ರದ ಮೊನಚಾದ ಕಟ್ಟುಪಾಡುಗಳ ನಡುವೆ ಕನಸಿನ ಲೋಕವೊಂದು ಮೈತೋರುವುದು ನಮ್ಮ ಯಕ್ಷಗಾನದ ಪ್ರೇಕ್ಷಕರಿಗೆ ನಿತ್ಯಾನುಭವ. ಆದ್ದರಿಂದಲೇ ಇಂಥ ಧ್ಯಾನಸದೃಶ ರಸಾನುಭವವನ್ನು ಕೊಡತಕ್ಕ ಕಲೆಗಳು 'ವಿಮರ್ಶಕ'ನೆಂಬ ಮೂರನೆಯ ಮನುಷ್ಯನನ್ನು ಸಹಿಸುವುದಿಲ್ಲ.

ಕಲೆ ಎಂದೇನು? ಸಮಗ್ರ ಭಾರತೀಯ ಸಾಹಿತ್ಯಕ್ಕೆ ಮನಸ್ಸು ನೆಟ್ಟಿರುವುದೇ 'ಸರಸ್ವತ್ಯಾಸ್ತತ್ವಂ ಕವಿ ಸಹೃದಯಾಖ್ಯಂವಿಜಯತೇ' ಎಂಬ ಹೇಳಿಕೆಯಲ್ಲಿ ಕವಿ ಮತ್ತು ಸಹೃದಯ – ಇವರನ್ನು ಬಿಟ್ಟು ಮೂರನೆಯ ಬಣವಿಲ್ಲ. ಇದ್ದರೆ ಆ ಹೊರಗಿನವರಿಗೆ ಇಲ್ಲಿ ಪ್ರವೇಶ ಇಲ್ಲ.

ಅಂದರೆ ಏನು?

ವಿಮರ್ಶಕ ಮೂರನೆಯ ಮನುಷ್ಯನೇ ಅಲ್ಲ. ಸಹೃದಯನದ್ದೇ ಚಾಚಿದ ಇನ್ನೊಂದು ಮೈ ವಿಮರ್ಶಕ. ರಸಾನುಭವದ ಇನ್ನೊಂದು ಮಗ್ಗುಲೇ ವಿಮರ್ಶೆ. ಆದುದರಿಂದ ಮೊದಲು ಸಹೃದಯನಾಗಿ ಒಳಗೆ ಬಾ. ಆಮೇಲೆ ಟೀಕಿಸು.. ಟಿಪ್ಪಣಿಸು.. ಖಂಡಿಸು.. ಮಂಡಿಸು. ಆದರೂ ಮನೆಯೊಳಗಿನವನಾಗಿಯೇ ಇರು – ಎನ್ನುವ ಪ್ರೀತಿಯ ಒತ್ತಾಯವನ್ನು ತರುತ್ತದೆ ನಮ್ಮ ಕಲೆ, ನಮ್ಮ ಸಾಹಿತ್ಯ.

ಇಂಥ ವಿಮರ್ಶೆಯಲ್ಲಿ ಬುದ್ಧಿ ಹರಿತವಾಗಿಯೇ ಕೆಲಸ ಮಾಡುತ್ತದೆ. ಆದರೆ ಈ ಝಳಪಿಸುವಿಕೆಯಲ್ಲಿ ರಸಾವರಣ ಹರಿಯದಂತೆ ವಿಮರ್ಶಕನ ಸಂವೇದನೆ ಪಹರೆ ಕೊಡುತ್ತಿರುತ್ತದೆ. ಇದು ಹೇಗೆಂದರೆ pole vault ಎಂಬ ಉದ್ದಂಡ ಜಿಗಿತದ ಕ್ರೀಡೆಯ ಹಾಗೆ. ಉದ್ದದ ಬಿದಿರಿನ ಕೋಲೊಂದನ್ನು ಹಿಡಿದು ಧಾವಿಸುತ್ತ, ಅದನ್ನು ನೆಲಕ್ಕೂರಿ ಆ ರಭಸಕ್ಕೆ ಎತ್ತರಕ್ಕೆ ಏರುತ್ತೀರಿ. ಇನ್ನೂ ಎತ್ತರದಲ್ಲಿ ಅಡ್ಡ ದಂಡವೊಂದು ಗುರುತಾಗಿ ಇರುತ್ತದೆ. ಅದರ ಹತ್ತಿರ ಬಂದಾಗ ನಿಮ್ಮನ್ನು ಇಷ್ಟು ಮೇಲಕ್ಕೆತ್ತಿದ ಬಿದಿರಕೋಲನ್ನು ಕೈಬಿಟ್ಟು ದಂಡದಾಚೆ ಜಿಗಿಯುತ್ತೀರಿ. ಯಾವುದೋ ಮೋಹದಿಂದ ಕೋಲನ್ನು ಕೈ ಬಿಡಲಿಲ್ಲವೋ ಅದೇ ನಿಮ್ಮನ್ನು ಈಚೆಯ ನೆಲಕ್ಕೆ ಕೆಡವುತ್ತದೆ. ಕೈಬಿಟ್ಟು ಜಿಗಿದಿರೋ ಆಚೆಯ ಬಯಲು ನಿಮ್ಮದು. ಸಿದ್ಧಿ ನಿಮ್ಮದು.

ವಿಮರ್ಶೆಯಲ್ಲಿ ಬುದ್ಧಿ ಆ ಬಿದಿರ ಕೋಲಿನ ಹಾಗೆ. ಎತ್ತರಕ್ಕೇರುವುದಕ್ಕೆ, ಜಿಗಿತಕ್ಕೆ ವೇಗ ಕೊಡುವುದಕ್ಕದು ಬೇಕೇ ಬೇಕು. ಆದರೆ ವಿಶ್ಲೇಷಕ ಬುದ್ಧಿಯನ್ನು ಕೈಬಿಡಬೇಕಾದ ಘಟ್ಟವೂ ಒಂದಿದೆ. ಅಡ್ಡ ದಂಡವೇ ನೀವು ಅದರ ಹತ್ತಿರವಾದಂತೆ ಕೋಲನ್ನು ಕೈಬಿಟ್ಟು ತನ್ನಾಚೆ ಧುಮುಕುವಂತೆ ಆಹ್ವಾನಿಸುತ್ತದೆ. ಕಲಾನುಭವದಲ್ಲಿ ಈ ಘಟ್ಟವನ್ನು ಗುರುತಿಸುವುದಕ್ಕೂ ವಿಮರ್ಶೆ ಬೇಕೆನ್ನುವುದು ಅದರ ಮಹತ್ತು ಮತ್ತು ಮಿತಿ.

ಈ ನನ್ನ ಪ್ರಿಯ ಗೆಳೆಯ ಪ್ರಭಾಕರ ಜೋಶಿ ಇಂಥ ಒಳಗಿನ ವಿಮರ್ಶಕರಾಗಿದ್ದಾರೆ ಎನ್ನುವುದು ತುಂಬು ಸಂತಸದ ಸಂಗತಿ. ಅವರ ಬುದ್ಧಿ ಕೂರಲಗಿನಂತಿದ್ದರೂ ಅವರು

ಬಲ್ಲರು : ನೀರನ್ನು, ಗಾಳಿಯನ್ನು, ಬಿಸಿಲನ್ನು ಅದು ಕತ್ತರಿಸಲಾರದು. ಕಲೆಯ ಈ ಇಡೀ ವಾತಾವರಣದಲ್ಲಿ eco-systemನಲ್ಲಿ ಒಂದಾಗುವುದೇ ವಿಮರ್ಶಕನಾಗ ಬೇಕಾದರೆ ಮೊದಲ ಅರ್ಹತೆ. ಆದ್ದರಿಂದಲೇ ಯಕ್ಷಗಾನದ ಅತ್ಯುತ್ತಮ ವಿಮರ್ಶಕರಾದ ಜೋಶಿ, ತಾವು ಬದಲಾವಣೆಗೆ ಎಷ್ಟು ಪರವಾಗಿದ್ದಾಗಲೂ ಯಕ್ಷಗಾನದ ರೂಪಕ್ಕೆ, ರಸಾವರಣಕ್ಕೆ ಅಷ್ಟೇ ತೀವ್ರವಾದ ನಿಷ್ಠೆ ತೋರಿದ್ದಾರೆ. ಬುದ್ಧಿಯ ಹರಿತದಂತೆ, ಸಂವೇದನೆಯ ಸೂಕ್ಷ್ಮತೆಗೂ 'ಜಾಗರ'ದ ಪುಟ ಪುಟಗಳಲ್ಲಿ ರುಜುವಾತಿದೆ.

ಈ ಸಂಗ್ರಹದ ಅತ್ಯುತ್ತಮ ಲೇಖನವನ್ನು ಹುಡುಕಿದೆ. ಇಲ್ಲಿ ತಾಳಮದ್ದಳೆಯ ಒಳಹೊರಗನ್ನು ಹಿಡಿದ 'ತಾಳಮದ್ದಳೆ' ಎಂಬ ಬರಹ ಇದೆ. ಯಕ್ಷಗಾನ ಮೇಳಗಳನ್ನು ಕುರಿತಂತೆ ಅಪಾರ ಮಾಹಿತಿ, ವ್ಯಾಖ್ಯಾನಗಳಿವೆ. ಅರ್ಥಗಾರಿಕೆಯ ಸಮೀಕ್ಷೆಯಿದೆ. ಎಲ್ಲದರಲ್ಲೂ ಜೋಶಿಯವರ ಸೂಕ್ಷ್ಮ ಗ್ರಹಣಶಕ್ತಿ, ಪಾಂಡಿತ್ಯ ಪ್ರತಿಭೆ ಹರಿದಾಡಿದೆ. ನನಗೆ ತೀರ–ತೀರ ಮೆಚ್ಚುಗೆಯಾದ ಬರಹ 'ಯಕ್ಷಗಾನ ಪರಂಪರೆ' ಮತ್ತು 'ನಾಲ್ಕು ವೇಷಗಳು'. ಆಲೋಚನೆ ಮತ್ತು ಒಳನೋಟ ಇಲ್ಲಿ ಹದವರಿತು ಸೇರಿವೆ. 1973ರಷ್ಟು ಹಿಂದೆಯೇ 'ನಾಲ್ಕು ವೇಷಗಳು' ಎಂಬ ಬರಹ ಜೋಶಿ ಬರೆದರೇ ಎಂದು ವಿಸ್ಮಯ ವಾಗುತ್ತದೆ.

ಚಟುವಟಿಕೆಯ ಮುದ್ದೆಯಾಗಿರುವ ಗೆಳೆಯ ಜೋಶಿ ಮುನ್ನುಗ್ಗುವ ಸಾಹಸಿಗಳು. ಧೈರ್ಯ, ಸಾಹಸ, ಕ್ರಿಯಾಶೀಲತೆ ಇದ್ದಲ್ಲಿ ದೈವಕೃಪೆ ತಾನಾಗಿ ಒದಗಿ ಬರುತ್ತದೆ ಎನ್ನುತ್ತಾರಲ್ಲ – ಹಾಗೆ ವಿದ್ವತ್ತು, ಸೂಕ್ಷ್ಮತೆ. ಪ್ರಾಮಾಣಿಕ ಶ್ರಮ ಇದ್ದಲ್ಲಿ ಒಳನೋಟವೂ ಇಕೋ ಎಂದು ಒದಗಿ ಬರುತ್ತದೆ. ಅಲ್ಲದೆ ಪ್ರಕೃತಿಯ ಭಾಗವಾಗಿಯೇ ಪ್ರಕೃತಿಯನ್ನು ತಿಳಿಯಬೇಕಾದಂತೆ, ಯಕ್ಷಗಾನದ ಆವರಣದಲ್ಲೇ ತಾನು ಅವಿಭಾಜ್ಯವಾಗಿ ಸೇರಿ ಅದನ್ನು ಗ್ರಹಿಸಲೆತ್ನಿಸುವ ಇಂಥ ಮೊದಲ ದರ್ಜೆಯ ವಿಮರ್ಶಕರಿಗಲ್ಲದೆ ಇನ್ನಾರಿಗೆ ಕಲೆ ತನ್ನ ಅಂತರಂಗವನ್ನು ತೆರೆಯಬೇಕು?

ಜೋಶಿಯವರ 'ಜಾಗರ'ದ ನೋಟಕ್ಕೆ ಇನ್ನಷ್ಟು ಸೂಕ್ಷ್ಮತೆ, ವಿಸ್ತಾರ ಒದಗಲಿ. ಆಳದ ನಿಕ್ಷೇಪಗಳು ಇನ್ನೂ ಪತ್ತೆಯಾಗಲಿ. ವಿಮರ್ಶೆಯ ಕ್ಷೇತ್ರ ಸಮೃದ್ಧವಾಗಲಿ ಎಂದು ಮನಸಾರೆ ಹಾರೈಸುತ್ತೇನೆ.






ಕೇದಗೆ, 1998
ಚಿತ್ರಾ ಪ್ರಕಾಶನ, ಮಂಗಳೂರು

## ತಲಸ್ಪರ್ಶಿ ಅಧ್ಯಯನಕ್ಕೆ ಒಂದು ಬುನಾದಿ

**ಡಾ. ಕೆ.ಎಂ. ರಾಘವ ನಂಬಿಯಾರ್**

'ಕೇದಗೆ' ಬಲು ತೀಕ್ಷ್ಣವಾದ ಪರಿಮಳವಿರುವ ಹೂ ಎಸಳು. ತುಳು ನಾಡಿನ ತಾಯಂದಿರಿಗೆ ಬಹಳ ಇಷ್ಟವಾಗಿರುವಂಥದು. ಇದಕ್ಕೂ ಯಕ್ಷಗಾನಕ್ಕೂ ಏನು ಸಂಬಂಧ? ಯಕ್ಷಗಾನದಲ್ಲಿ 'ಕೇದಗೆ ಮುಂದಲೆ' ಎಂಬ ಶಿರೋಭೂಷಣವಿದೆ. 'ಕೇದಗೆ' ಎಂಬ ಆಭರಣದ ಜಾಗದಲ್ಲಿ ಹಿಂದೆ ಕೇದಗೆ ಎಸಳುಗಳನ್ನು ಸಿಂಗರಿಸುತ್ತಿದ್ದರಂತೆ. ಇಷ್ಟರಿಂದ ನಿಮ್ಮ ಕೈಯಲ್ಲೀಗ ತೆರೆದುಕೊಂಡಿರುವ, ಗೆಳೆಯ ಎಂ.ಪ್ರಭಾಕರ ಜೋಶಿ ಅವರ ಹೊತ್ತಗೆಯ ಹೆಸರಿಗೆ ವಿಶೇಷ ಅರ್ಥ ಹುಟ್ಟಿತೆನ್ನಲಾಗದು.

ಯಕ್ಷಗಾನ ರಂಗದಲ್ಲಾಗುವ ಭಾವಾಭಿವ್ಯಂಜನಕ್ಕೆ ಇತರ ರಂಗ ಪ್ರಕಾರಗಳಲ್ಲಿ ಕಾಣಸಿಗದ ತೀಕ್ಷ್ಣತೆ ಇದೆ-ಕೇದಗೆಯ ಪರಿಮಳದಂತೆ, ಇಲ್ಲಿ, ಈ ಹೊತ್ತಗೆಯಲ್ಲಿ, ಬಲು ನಿಶಿತವಾದ ವೈಚಾರಿಕ ಸೀಳುನೋಟಗಳಿಂದ, ಯಕ್ಷಗಾನದ ಲಕ್ಷ್ಯಲಕ್ಷಣಗಳನ್ನು, ಬೇಕು-ಬೇಡಗಳನ್ನು ಸಮೀಕ್ಷಿಸುವ ಕೆಲಸವನ್ನು ಜೋಶಿ ಮಾಡಿದ್ದಾರೆ. ಈ ಅರ್ಥದಲ್ಲಿ ಈ ಗ್ರಂಥಕ್ಕೆ 'ಕೇದಗೆ' ಅನ್ವರ್ಥವಾದ ಹೆಸರು.

ತನ್ನ ಮೊದಲ ಪ್ರಬಂಧ ಸಂಕಲನ(ಜಾಗರ)ಕ್ಕೆ ರಾಜ್ಯ ಮಟ್ಟದ ಪ್ರಶಸ್ತಿಯನ್ನು ಗೆದ್ದುಕೊಂಡಿರುವ ಜೋಶಿ ಅವರ ಈ 'ಕೇದಗೆ' ಇನ್ನಾವ ಮುಡಿಯನ್ನು ಅಲಂಕರಿಸುತ್ತದೆ ಎಂಬುದನ್ನು ಕಾದು ನೋಡಬೇಕಾಗಿದೆ.

ಇವೆರಡೂ ಗ್ರಂಥಗಳು ಯಾವ ರತ್ನಪರೀಕ್ಷಕನ ಮುಂದೆಯೂ ಅಪ್ಪಟ ಎಂದು ಸ್ಥಿರಗೊಳ್ಳುವುದರಲ್ಲಿ ಸಂದೇಹ ಬೇಡ.

ಯಕ್ಷಗಾನದ ಬಗೆಗೆ ಇದುವರೆಗೆ ಲಿಖಿತವಾಗಿ ಹಾಗೂ ಭಾಷಣರೂಪದಲ್ಲಿ ಬಂದಿರುವ ವಿಮರ್ಶೆಗಳನ್ನು ಸ್ಥೂಲವಾಗಿ ಎರಡು ದರ್ಜೆಗಳಲ್ಲಿ ವಿಂಗಡಿಸಬಹುದು. ಒಂದು ವರ್ಗದಲ್ಲಿ ಇರುವವರು ಯಕ್ಷಗಾನ ರಂಗದ ಯಾವ ವಿಭಾಗದಲ್ಲೂ ಸಮಗ್ರವಾದ ಪರಿಶ್ರಮ ಇಲ್ಲದೆ, ಕೇವಲ ಹೊರಗಿನವರಾಗಿದ್ದು ಅದನ್ನು ಅಭ್ಯಸಿಸಿದ ಕಲಾ ರಸಿಕರು. ಇನ್ನೊಂದು ವರ್ಗದಲ್ಲಿ ಯಕ್ಷಗಾನದ ಜತೆಗೆ ತಾವೂ ಜೀವಿಸುತ್ತ ಅದರ ಎಲ್ಲ ಆಗುಹೋಗುಗಳಲ್ಲಿ ತಮಗೂ ಒಂದಿಷ್ಟು ಪಾತ್ರ ಇರುವ ಜನರು. ಇವೆರಡು ವರ್ಗಗಳ ಜನರಿಂದ ಆರೋಗ್ಯಪೂರ್ಣ ಚಿಂತನ ಸಾಧ್ಯ ಎಂಬುದಕ್ಕೆ ಇನ್ನೂ ಪುರಾವೆ ಸಿಗಬೇಕಷ್ಟೇ.

ಒಂದು ವರ್ಗದಲ್ಲಿ ಕಲೆಯ ಸಮಗ್ರ ದರ್ಶನದ ಅಭಾವ, ಇನ್ನೊಂದರಲ್ಲಿ ಕಲೆಯ ಆಗುಹೋಗುಗಳಲ್ಲಿ ತಮ್ಮ ಶಾಮೀಲಿನಿಂದಾಗಿ ನಿರ್ಲಿಪ್ತ ಚಿಂತನೆಯ ಅಸಾಮರ್ಥ್ಯ. ಈ ದೃಷ್ಟಿಯಲ್ಲಿ ಯಕ್ಷಗಾನ ರಂಗಭೂಮಿಯ ವಿಮರ್ಶನದಲ್ಲಿ ಬಲುದೊಡ್ಡ ಶೂನ್ಯವೊಂದು ಇದೆ. ಇದನ್ನು ಭರ್ತಿಮಾಡಲು ಪ್ರಭಾಕರ ಜೋಶಿ ಅವರಂತಹ ಹೊಸ ವರ್ಗದ ವಿದ್ವಾಂಸರ ಅಗತ್ಯವಿದೆ. ಇವರಲ್ಲಿರುವ ಗುಣವೆಂದರೆ ಇವರಿಗೆ ಕಲೆಯ ತಲಸ್ಪರ್ಶಿ ತಿಳುವಳಿಕೆಯಿದೆ. ಅದೇ ವೇಳೆ ವೃತ್ತಿಪರನಿಗೆ ಬಲು ಬಗೆಗಳಲ್ಲಿ ಇರಬಹುದಾದ ನಂಟು ಹಂಗುಗಳು ಇಲ್ಲ. ಯಕ್ಷಗಾನಕ್ಕೆ ಈಗ ಬೇಕಾಗಿರುವುದು ಯಾವ ಹಂಗೂ ಇಲ್ಲದ ವಸ್ತುನಿಷ್ಠವಾದ ವಿಮರ್ಶೆ. ಅದುವೇ ಶಾಸ್ತ್ರವೊಂದರ ಮೊಳಕೆ.

ಯಕ್ಷಗಾನವನ್ನು ಶಾಸ್ತ್ರೀಯ ರಂಗಕಲೆ ಎಂದು ಘೋಷಿಸಿ ಅದನ್ನು ಪೋಷಿಸಲು ಪ್ರತ್ಯೇಕ ವ್ಯವಸ್ಥೆಯೊಂದನ್ನು ರೂಪಿಸಲು ಇದು ಸಕಾಲ. ಹಾಗೆ ಘೋಷಿಸಲು ಹಿಂದೆಗೆಯುವ ಯಾವ ಕಾರಣವೂ ಇಲ್ಲಿಲ್ಲ. ಇಲ್ಲಿ ಕಲಾವಿದರಿಗಿರುವ ವಿಪುಲ ಸ್ವಾತಂತ್ರ್ಯವು ಯಕ್ಷಗಾನವನ್ನು ಜಾನಪದವೋ ಎನ್ನುವ ಭ್ರಮೆಗೆ ಒಳಪಡಿಸುತ್ತದೆ ಅಷ್ಟೇ. ಜಾನಪದವೆಂದು ಹೆಸರಿಸಿ 'ಡೊಳ್ಳು ಕುಣಿತ'ದ ಸಾಲಿಗೆ ಸೇರಿಸಬಹುದಾದ ಕಲೆ ಅಲ್ಲ ಕರಾವಳಿಯ ಯಕ್ಷಗಾನ. ಇಲ್ಲಿನ ಲೇಖನಗಳನ್ನು ಓದಿದಾಗ ಈ ರಂಗ ಎಷ್ಟು ಶ್ರೀಮಂತ, ವ್ಯವಸ್ಥಿತ ಮತ್ತು ಸಂಕೀರ್ಣ ಎನ್ನುವುದು ನಿಚ್ಚಳವಾಗುತ್ತದೆ. ಅದೇ ವೇಳೆ ವಿಮರ್ಶಾ ಅಭಿಯಾನ ಈಗ ಈ ರಂಗಕ್ಕೆ ಐತಿಹಾಸಿಕವಾಗಿ ಎಷ್ಟು ಅಗತ್ಯ ಎನ್ನುವುದೂ ಮನದಟ್ಟಾಗುತ್ತದೆ.

ನಮ್ಮ ದೇಶದಲ್ಲಿ ಓದು ಬರಹ ಹೆಚ್ಚಿದಂತೆಲ್ಲ ವಾಣಿಜ್ಯೀಕರಣ ವ್ಯಾಪಿಸಿಕೊಂಡುದು ಒಂದು ವಿಚಿತ್ರ. ಒಂದು ತಲೆಮಾರಿನ ಹಿಂದೆ ಕೂಡಾ ಇಲ್ಲಿದ್ದ ಫ್ಯೂಡಲ್ ವ್ಯವಸ್ಥೆ ತೊಲಗಿದುದರೊಂದಿಗೆ ಅದರಲ್ಲಿ ಅಂತರ್ಗತವಾಗಿದ್ದ ತ್ಯಾಗಬುದ್ಧಿ, ಕಷ್ಟಸಹಿಷ್ಣುತೆ ಇತ್ಯಾದಿ ಗುಣಗಳೂ ಮಂಗಮಾಯವಾಗಿದೆ. ಶಿಕ್ಷಣ ಪ್ರಸಾರದೊಂದಿಗೆ ಭಾರತೀಯ ಮನೋಭಾವದಲ್ಲಿ ವಾಣಿಜ್ಯಪರತೆ ಒಳಗೆ ಹೊಗೆಯಾಡುವುದನ್ನು ಇರಿಸಿಕೊಂಡು, ಹೊರಗೆ ತಿಳಿನಗೆ ಸೂಸುವ ವಣಿಕ್‌ಸ್ವಭಾವ ಇವು ನುಗ್ಗಿ ಸೇರಿಕೊಂಡುದು ನಿರ್ಲಿಪ್ತ ಚಿಂತಕನನ್ನು ವಿಸ್ಮಯಕ್ಕೆ ತಳ್ಳಿದೆ. ನಿಜಕ್ಕಾದರೆ ಭಾರತೀಯ ಜನಪದ – ಜಾತಿ, ಮತ,

ಜನಾಂಗ ಭೇದವಿಲ್ಲದೆ – ಒಂದು ಕೋಮಟಿ ಸಮುದಾಯವಾಗಿ ಮಾರ್ಪಡುತ್ತಿದೆ.

ಆಡಳಿತ ಮತ್ತು ವಾಣಿಜ್ಯ ಇವುಗಳನ್ನು ಅವಿನಾಭಾವ ಸಂಬಂಧದೊಳಗೆ ತುರುಕಿದ ಬ್ರಿಟಿಷ್ ರಾಜ್ಯ ಪದ್ಧತಿಯನ್ನು ಭಾರತೀಯ ಶ್ರೀಮಂತವರ್ಗ ರಕ್ತಗತಗೊಳಿಸಿದ ಬಗೆಗೆ ಬೆರಗಾಗಬೇಕು. ಲಾಭ – ನಷ್ಟ ಪರಿಗಣನೆ ಮಾತ್ರ ಅಂತಿಮವೆಂದುಕೊಳ್ಳುವ ವಾಣಿಜ್ಯಪರತೆ ಯಕ್ಷಗಾನದಂಥ ಸಂಪ್ರದಾಯನಿಷ್ಠ ರಂಗಭೂಮಿಯನ್ನು ಕೂಡಾ ಹೇಗೆ ಕಬಳಿಸುತ್ತದೆ ಎಂಬುದಕ್ಕೆ ಕಳೆದ ಮೂರು ದಶಕಗಳ ಕಾಲ ವೃತ್ತಿಪರ ಮೇಳಗಳ ಬಯಲಾಟವನ್ನು ಕಂಡವರು ಸಾಕ್ಷಿಯಾಗಿ ನಿಲ್ಲುತ್ತಾರೆ. ಕಟೀಲು, ಮಂದಾರ್ತಿಗಳಂಥ ವರ್ಷವರ್ಷವೂ ಆಟದ ಹರಕೆಗಳನ್ನು ತೀರಿಸಲು ಬಾಕಿ ಉಳಿಸಿಕೊಳ್ಳುವ ಬಯಲಾಟದ ಮೇಳಗಳು ಕೂಡಾ ವ್ಯಾಪಾರಿ ದೃಷ್ಟಿಯಿಂದ ಹೊರತಾಗಿ ಉಳಿದಿಲ್ಲ ಎಂಬುದು ಆತಂಕಕಾರಿ. ಅಂಥ ಘಟನೆಗಳ ಪ್ರತ್ಯಕ್ಷದರ್ಶಿಯೊಬ್ಬನ ಸಾಕ್ಷ್ಯವಾಗಿಯೂ 'ಕೇದಗೆ' ನಿಮ್ಮ ನ್ಯಾಯಾಲಯದಲ್ಲಿ ತೆರೆದುಕೊಳ್ಳುತ್ತದೆ.

'ಕರಾವಳಿಯ ಯಕ್ಷಗಾನ' ಪ್ರಬಂಧದಲ್ಲಿ ಯಕ್ಷಗಾನದ ಮೂಲವನ್ನು ಅರಸುವ ಪ್ರಯತ್ನ ಮಾಡುತ್ತ, ಯಾವುದರಿಂದ ಯಾವುದು? ಬಡಗಿನಿಂದ ತೆಂಕೇ? ತೆಂಕಿನಿಂದ ಬಡಗೇ? ಕಥಕ್ಕಳಿಯಿಂದ ಯಕ್ಷಗಾನವೇ? ಯಕ್ಷಗಾನದಿಂದ ಕಥಕ್ಕಳಿಯೇ? ಈ ಬಗೆಯ ಕುರುಡು ಅನ್ವೇಷಣೆಯ ದಾರಿ ಹಿಡಿಯದೆ ಜೋಶಿ ಅವರು ಹೆಚ್ಚು ಅರ್ಥಪೂರ್ಣ ವಿವೇಚನೆಗೆ ಹೋಗಿದ್ದಾರೆ. ಅದಿ ದ್ರಾವಿಡ ಭಾಷೆಯೊಂದು ತುಳು, ತಮಿಳು, ಕನ್ನಡ, ತೆಲುಗು, ಮಲಯಾಳ ಹೀಗೆ ಪ್ರತ್ಯೇಕ ಭಾಷೆಗಳಾಗಿ ವಿಭಜನಗೊಳ್ಳುವುದಕ್ಕೆ ಒಂದು ಅಥವಾ ಹಲವು ಐತಿಹಾಸಿಕ ಸಂದರ್ಭ ಇರುವುದಾದರೆ, ಮೂಲ ದ್ರಾವಿಡ ರಂಗಕಲೆಯೆಂದು 'ಯಕ್ಷಗಾನದ ಪ್ರಭೇದಗಳು', ಕಥಕಳಿ, ತೆರುಕೂತ್, ತೆಯ್ಯಂ, ಭೂತಕೋಲ, ಕ್ಯಾಂಡಿ (ಸಿಂಹಳ) ನೃತ್ಯಗಳಾಗಿಯೂ ವಿಭಜನ ಹೊಂದುವುದು ಹಾಗೂ ಆ ಬಗೆಯಲ್ಲಿ ಪ್ರತ್ಯೇಕ ಎತ್ತರಗಳಿಗೆ ವಿಕಾಸಗೊಳ್ಳುವುದು ಸಂಭವನೀಯ. ಮೇಲೆ ಹೇಳಿದ ಎಲ್ಲ ರಂಗಪ್ರಕಾರಗಳಲ್ಲೂ ಸೋದರತೆಯನ್ನು ನಿಚ್ಚಳವಾಗಿ ಕಾಣಬಹುದು. ಪ್ರತ್ಯೇಕಗೊಂಡ ಬಳಿಕವೂ ಪರಸ್ಪರ ಪ್ರಭಾವಕ್ಕೊಳಗಾದುದನ್ನೂ ನಾವು ಗುರುತಿಸಬಹುದು. ಇವೆಲ್ಲ ಕಲೆಗಳಲ್ಲೂ 'ತೆಂಕು', 'ಬಡಗು' ಶೈಲಿಗಳು ಇರುವುದು ಸಾಮಾನ್ಯ. ಈ ಸಂದರ್ಭದಲ್ಲಿ ಕೇರಳದ 'ಪಾಡಯಣಿ' ಎನ್ನುವ ಆರಾಧನಾ ಕಲೆಯನ್ನು ಕೂಡಾ ನೋಡುವುದು ಬಹಳ ಉಪಯುಕ್ತವಾದೀತು. ಬಹುಶಃ ಪ್ರಾಗ್‌ದ್ರಾವಿಡ ಕಲೆಯ ಪಳೆಯುಳಿಕೆ ಅದಾಗಿರಬೇಕು ಎಂದು ತರ್ಕಿಸಲು ಎಡೆಯಿದೆ.

ಯಕ್ಷಗಾನದ ಪೂರ್ವರೂಪ ನಿರ್ಣಯದಲ್ಲಿ ಬಹುವಾಗಿ ಉಪಕರಿಸುವ ಇನ್ನೊಂದು ಪುರಾವೆಯನ್ನು ಜೋಶಿಯವರ ಲೇಖನಕ್ಕೆ ಪೂರಕವಾಗಿ ಸೇರಿಸಬಹುದು. ಅದು ಕಾರ್ಕಳ ಶ್ರೀ ವೆಂಕಟರಮಣ ದೇವಸ್ಥಾನದಲ್ಲಿ ಕಾಣಸಿಕ್ಕಿರುವ ಪ್ರಾಚೀನ ಯಕ್ಷಗಾನದ ಗೊಂಬೆಗಳು. ಘಟ್ಟದ ಮೇಲಿನ ಗೊಂಬೆಯಾಟಕ್ಕೂ ಅಲ್ಲಿನ ಬಯಲಾಟಕ್ಕೂ ವೇಷಭೂಷಣದಲ್ಲಿ ಸಾಮ್ಯವಿದೆ. ಉಪ್ಪಿನಕುದ್ರು ಕೊಗ್ಗ ಕಾಮತರ ಗೊಂಬೆಯಾಟಕ್ಕೂ,

ಬಡಗುತಿಟ್ಟಿನ ಬಯಲಾಟಕ್ಕೂ ರೂಪದಲ್ಲಿ ಹೋಲಿಕೆಯಿದೆ. ಇವೆರಡು ನಿಜವಾದರೆ ಕಾರ್ಕಳದ ಗೊಂಬೆಗಳಿಗೂ ಆ ಕಾಲದ ಬಯಲಾಟಕ್ಕೂ ಸಾರೂಪ್ಯ ಇರಲೇ ಬೇಕು. ಅದು ಸತ್ಯವಾದರೆ ಶತಮಾನಗಳ ಹಿಂದೆ ದಕ್ಷಿಣ ಕನ್ನಡದ ಒಂದು ಭಾಗದಲ್ಲಿ ಇದ್ದ ಪ್ರಾಚೀನ ಯಕ್ಷಗಾನದ ವೇಷಚಿತ್ರವು ಆ ಗೊಂಬೆಗಳಲ್ಲಿ ಇದೆ ಎಂದರ್ಥ. ಕುಂಬಳೆ ಸೀಮೆಗೆ ಕನ್ನಡಿಗರ ದಂಡು ಯಕ್ಷಗಾನವನ್ನು ಒಯ್ದುದು ನಿಜವಾದರೆ ಅದು ಕಾರ್ಕಳವನ್ನು ಹಾದೇ ಹೋಗಿರಬೇಕು. ಕರಾವಳಿಗೂ ಘಟ್ಟದ ಮೇಲುಭಾಗಕ್ಕೂ ಇದ್ದ ಒಂದು ಪ್ರಾಚೀನ ಸಂಪರ್ಕ ದಾರಿ ಆಗುಂಬೆ – ಕಾರ್ಕಳ.

'ಕಲೆ ಮತ್ತು ವ್ಯವಸಾಯ' ಪ್ರಬಂಧದಲ್ಲಿ ರಂಗಭೂಮಿಯ ಹಾಗೂ ಗೊಂಬೆಯಾಟದ ಉಳಿವಿಗೆ ಉಪಯುಕ್ತ ಸಲಹೆಗಳನ್ನಿಟ್ಟಿದ್ದಾರೆ. ಜೋಶಿ ಆಂದಂತೆ ವಾಣಿಜ್ಯೀಕರಣದಿಂದ ತೆಂಕುತಿಟ್ಟು ಪರಿವರ್ತನೆಗೆ ಒಳಪಟ್ಟುದು ನಿಜ. ಆದರೆ ಬಡಗು ಕೂಡಾ ಅದೇ ರೀತಿಯ ಇನ್ನೊಂದು ವ್ಯಾಪಾರಿ ಪಿಡುಗಿಗೆ ಒಳಗಾಗಿದೆ. ಇಲ್ಲಿ ಕಾಲ್ಪನಿಕ ಸತ್ವಹೀನ ಕಥಾನಕಗಳನ್ನು ಪ್ರಸಂಗವಾಗಿಸಿ ಬಯಲಾಟದ ರೂಪವಿಶೇಷವನ್ನು ಅಪಮೌಲ್ಯ ಗೊಳಿಸಿರುವುದು ಅಷ್ಟೇ ಸತ್ಯ. ಬಡಗಿನ ಹಳೆಯ ಭಾಗವತರು, ಮದ್ದಳೆಗಾರರು ಇಂದು ನೇರ ರಂಗಸ್ಥಳಕ್ಕೆ ಹೋಗಿ 'ಕಸುಬು' ಮಾಡಲಾರದ ಸ್ಥಿತಿಯನ್ನು ತಮ್ಮ ಕಣ್ಣೆದುರೇ ಕಂಡು ಅಸಹಾಯಕರಾಗಿದ್ದಾರೆ. ಒಂದು ರಂಗಭೂಮಿಯಿಂದ ಇನ್ನೊಂದು ಕವಲು ಹೇಗೆ ಹುಟ್ಟಿಕೊಳ್ಳುತ್ತದೆ ಎಂಬುದಕ್ಕೆ ನಮ್ಮ ಕಣ್ಣೆದುರೇ ಎದ್ದು ಬಂದ ತುಳು ಯಕ್ಷಗಾನವೇ ನಿದರ್ಶನವಾಗುತ್ತದೆ.

'ಪ್ರಸಂಗ ರಚನೆ : ರಂಗದೃಷ್ಟಿ' : ಜೋಶಿ ಅವರ ವಿವರವಾದ ಪೃಥಕ್ಕರಣ, ಸೂಕ್ಷ್ಮ ವಿವೇಚನೆಗೆ ಕನ್ನಡಿಯಾಗಿದೆ. ಈ ಪ್ರಬಂಧದಲ್ಲಿ ಅಂತೆಯೇ 'ತಾಳಮದ್ದಳೆಯ ಮಾತುಗಾರಿಕೆ' ಹಾಗೂ 'ಅರ್ಥಗಾರಿಕೆ : ಸೃಜನಶೀಲದೃಷ್ಟಿ' ಇವುಗಳಲ್ಲೂ ಪ್ರಸಂಗ ಕೃತಿ ಹಾಗೂ ಅರ್ಥದಾರಿಯ ಸಂಬಂಧಗಳನ್ನು ಸೂಕ್ಷ್ಮವಾಗಿ ಸೀಳಿ ನೋಡಲಾಗಿದೆ. ಇವುಗಳನ್ನೆಲ್ಲ ಹಾದು ಹೋಗುವಾಗ ಸಹಮತದ ನಡುವೆ ಪ್ರಶ್ನೆಯೊಂದು ಎದ್ದು ನಿಲ್ಲುತ್ತದೆ. ಅದು ಪ್ರಸಂಗದ ಆಶಯವನ್ನು ತಿದ್ದಲು ಅರ್ಥದಾರಿಗೆ ಎಷ್ಟರ ಮಟ್ಟಿನ ಸ್ವಾತಂತ್ರ್ಯ ಇದೆ ಎಂಬುದು "... ಸೃಜನಶೀಲ ಅರ್ಥದಾರಿ ಪ್ರಸಂಗದ ಆಶಯವನ್ನು, ಹಂದರವನ್ನು ಮೀರಿ ನಡೆಯುತ್ತಾನೆ." (ಪುಟ 64) ಇಲ್ಲಿ ಮೀರುವುದರ ಅಗತ್ಯದ ಜೊತೆಗೆ ಮೀರುವಿಕೆಯ ಮಿತಿಗಳನ್ನೂ ಸ್ಪಷ್ಟಪಡಿಸಿದ್ದರೆ ಒಳ್ಳೆಯದಿತ್ತು. ಇಲ್ಲವಾದರೆ ಪ್ರಸಂಗವೆಂಬುದು ಅರ್ಥದಾರಿಗಳು ತಮಗೆ ಬೇಕಾದಂತೆ ಎತ್ತಬಹುದಾದ ಕೈಗೂಸಾಗುವ ಭಯವಿದೆ. ಪ್ರಸಂಗದ ಆಶಯವನ್ನು ಹೆಚ್ಚು ವ್ಯಾಪಕತೆಗೆ ವಿಕಾಸಗೊಳಿಸುವುದಾದರೆ ಅಥವಾ ಆಧುನಿಕ ಪರಿಭಾಷೆಯಲ್ಲಿ ಹೆಚ್ಚು ಪ್ರಗತಿಪರವಾಗಿ ಮೆರೆಯಿಸುವುದಾದರೆ ಜೋಶಿ ಅವರ ಅಭಿಪ್ರಾಯ ಸ್ವೀಕರಾರ್ಹ. ಪ್ರಸಂಗದ ಆಶಯದಿಂದ ಪ್ರತ್ಯೇಕವಾದ ಮತ್ತು ಹೊಂದಿಕೆ ಇಲ್ಲದ ಆಶಯವನ್ನು ಬಿಂಬಿಸಹೊರಟರೆ 'ಅರ್ಥ' ವಿರೋಧಾಭಾಸದ ನಿದರ್ಶನವಾಗುತ್ತದೆ. ಇಂಥಲ್ಲಿ ಪ್ರತ್ಯೇಕ ಪ್ರಸಂಗ ರಚಿಸಿ ಪ್ರದರ್ಶಿಸುವುದೇ ಸೂಕ್ತ.

ಒಟ್ಟಿನಲ್ಲಿ 'ಕೇದಗೆ' ಯಕ್ಷಗಾನದ ತಲಸ್ಪರ್ಶಿ ಅಧ್ಯಯನಕ್ಕೆ ಒಂದು ಬುನಾದಿಯನ್ನು ಹಾಕಿಕೊಟ್ಟಿದೆ. ಇವತ್ತು ಯಕ್ಷಗಾನವು ಡಾಕ್ಟರೇಟ್ ಬಿರುದಿಗಾಗಿ ಅಭ್ಯಸಿಸಲು ಅರ್ಹವಾದ ವಿಷಯವಾಗಿದೆ. ಯಕ್ಷಗಾನ ಪ್ರಸಂಗವು ಕಾಲೇಜಿನಲ್ಲಿ ಪಠ್ಯಪುಸ್ತಕವಾಗಿದೆ. ಇಂಥಲ್ಲಿ ವಿಮರ್ಶಾ ಸಾಹಿತ್ಯ ಈ ರಂಗದಲ್ಲಿ ಬರುವುದು ದ್ರವ್ಯದೃಷ್ಟಿಯಲ್ಲಿ ಲಾಭಕರ ಅಲ್ಲವಾದರೂ ತೀರಾ ಅಗತ್ಯ. ಕಲಾವಿದರು ಸಿದ್ಧಗೊಳ್ಳುವ ರೀತಿಯು ಈಚೆಗೆ ಬದಲಾಗಿದೆ. ವಿವಿಧ ಯಕ್ಷಗಾನ ಕೇಂದ್ರಗಳಿಂದ ಹೊರಬರುವ ಕಲಾವಿದರಿಗೆ ಇಂಥ ಗ್ರಂಥಗಳು ಕೈದೀವಿಗೆಯಾಗುತ್ತದೆ. ಕಲಾವಿದರಿಗೆ ತಮ್ಮ 'ಕಸುಬಿ'ನ ಬೆಲೆ ಗೊತ್ತಾಗುತ್ತದೆ. ಇದು ಕಲಾವಿದರಲ್ಲಿ, ಮೇಳ ಸಂಘಟಕನಲ್ಲಿ ಒಮ್ಮೆ ಮೂಡಿತಾದರೆ ಸಂಸ್ಕೃತಿಯ ಅಭ್ಯುದಯ ಅರಂಭವಾಯಿತೆಂದೇ ಅರ್ಥ. ಅದುವೇ 'ಜಾಗರ', 'ಕೇದಗೆ'ಗಳ ಅಂತಿಮ ಗುರಿ.

(19–12–1986)





ಮಾರುಮಾಲೆ, 1990,
ನ್ಯೂಸ್ಟಾರ್ ಪಬ್ಲಿಕೇಶನ್ಸ್, ಬೆಂಗಳೂರು

## ಪರಿಚಿತ ಅಂಶಗಳ ಅಪರಿಚಿತ ಮುಖಗಳು

**ಡಾ. ಬಿ.ಎ. ವಿವೇಕ ರೈ**

ಮಿತ್ರ ಎಂ. ಪ್ರಭಾಕರ ಜೋಶಿ ಅವರು ಕನ್ನಡದ ಇಂದಿನ ಯಕ್ಷಗಾನ ವಿಮರ್ಶಕರಲ್ಲಿ ಅಗ್ರಗಣ್ಯರು. ತಮ್ಮ 'ಜಾಗರ' ಮತ್ತು 'ಕೇದಗೆ' ಎಂಬ ಎರಡು ಗ್ರಂಥಗಳ ಮೂಲಕ ಕರಾವಳಿಯ ಯಕ್ಷಗಾನದ ಕುರಿತು ಮಹತ್ವದ ಅನೇಕ ಹೊಸ ಮಾತುಗಳನ್ನು ಹೇಳಿದ್ದಾರೆ. ಯಕ್ಷಗಾನ ತಾಳಮದ್ದಳೆಯ ಶ್ರೇಷ್ಠ ಹಾಗೂ ಪ್ರಸಿದ್ಧ ಅರ್ಥದಾರಿಯಾಗಿರುವ ಜೋಶಿಯವರು ಯಕ್ಷಗಾನದ ಗಂಭೀರ ವಿಮರ್ಶಕರೂ ಆಗಿರುವುದು ಅಪೂರ್ವ ಸಂಗತಿ.

ಯಕ್ಷಗಾನದಂತಹ ಜನಪ್ರಿಯ ರಂಗಭೂಮಿಯ ಕಲಾವಿದ ರೊಬ್ಬರು ತಮ್ಮ ಕಲೆಯ ಬಗ್ಗೆ ಸಹಜವಾಗಿಯೇ ಅತಿ ಮಮತೆಯನ್ನೂ, ಉತ್ಸಾಹವನ್ನೂ, ಅಭಿಮಾನವನ್ನೂ ಹೊಂದಿರುತ್ತಾರೆ. ಆ ಕಲೆಯ ಹೊರಗೆ ನಿಂತುಕೊಂಡು ಸಾಧ್ಯತೆ ಹಾಗೂ ಮಿತಿಗಳನ್ನು ಗುರುತಿಸು ವುದು, ಅದರ ಬದಲಾವಣೆಗಳ ಒಳಿತು ಕೆಡುಕುಗಳನ್ನು ಮೌಲ್ಯಮಾಪನ ಮಾಡುವುದು ಸಾಮಾನ್ಯವಾಗಿ ಅವರಿಗೆ ಸಾಧ್ಯವಾಗುವುದಿಲ್ಲ. ಆದರೆ ಜೋಶಿಯವರು ಕಲಾವಿದ ಮತ್ತು ವಿಮರ್ಶಕ ಎರಡೂ ಆಗಿರುವುದರಿಂದ ಅವರ ಅರ್ಥಗಾರಿಕೆಗೆ ವಿಮರ್ಶನದ ಮೂಲಕ ಹೊಸತನ ಪ್ರಾಪ್ತವಾಗಿ, ಅದು ಪ್ರದರ್ಶನದಿಂದ ಪ್ರದರ್ಶನಕ್ಕೆ ಸಾಧ್ಯತೆಗಳನ್ನು ಶೋಧಿಸುತ್ತಾ ಹೋಗುತ್ತದೆ.

ಅವರ ವಿಮರ್ಶೆಯು ರಂಗದ ಅನುಭವಗಳ ಆಧಾರ ಸಾಮಗ್ರಿಗಳ ಬಲದಿಂದ ವ್ಯಾಖ್ಯಾನ ಮತ್ತು ವಿವರಣೆಗಳ ಶಿಸ್ತನ್ನು ರೂಢಿಸಿಕೊಳ್ಳುತ್ತದೆ. ಈ ದೃಷ್ಟಿಯಿಂದ ಜೋಶಿಯವರ ಅರ್ಥಗಾರಿಕೆಯು ಬೆಳವಣಿಗೆಗೂ, ಅವರ ಯಕ್ಷಗಾನ ವಿಮರ್ಶೆಯ ಬೆಳವಣಿಗೆಗೂ ಸಾವಯವ ಸಂಬಂಧವನ್ನು ಗುರುತಿಸಬಹುದು. ಪ್ರಸ್ತುತ ಕೃತಿ 'ಮಾರುಮಾಲೆ'ಯಲ್ಲಿ ಜೋಶಿಯವರು ಚರ್ಚಿಸುವ ಅನೇಕ ಸಂಗತಿಗಳು 'ಜಾಗರ' ಮತ್ತು 'ಕೇದಗೆ' ಗ್ರಂಥಗಳಲ್ಲೂ ವಿಮರ್ಶೆಗೆ ಒಳಗಾಗಿದೆ. ಆದರೆ ಅದು ಆ ಲೇಖನಗಳ ಪುನರಾವರ್ತನೆಯಾಗದೆ, ಸಂಶೋಧನೆಯ ಮುಖ್ಯ ಲಕ್ಷಣವಾದ ಬೆಳವಣಿಗೆ ರೂಪದ್ದಾಗಿದೆ ಎಂಬುದು ಮಹತ್ವದ ಅಂಶ. ಈ ಸಂಕಲನದಲ್ಲಿನ 'ತಾಳಮದ್ದಳೆಯ ಹಿಮ್ಮೇಳ', 'ತುಳು ಯಕ್ಷಗಾನ : ನಿನ್ನೆ, ಇಂದು, ನಾಳೆ', 'ಅರ್ಥಗಾರಿಕೆ : ಪರಂಪರೆ ಮತ್ತು ಪ್ರಯೋಗ', 'ಪರಂಪರೆ ಮತ್ತು ಪ್ರಯೋಗ', 'ಸೃಜನಶೀಲತೆಯ ಸಂದರ್ಭ' – ಈ ಲೇಖನಗಳನ್ನು ಈ ದೃಷ್ಟಿಯಿಂದ ವಿಶೇಷವಾಗಿ ಗಮನಿಸಬಹುದು.

ಜೋಶಿಯವರ ಯಕ್ಷಗಾನ ವಿಮರ್ಶೆಯ ಲೇಖನಗಳಲ್ಲಿ ಅವರನ್ನು ಬಹಳವಾಗಿ ಕಾಡಿದ ಸಮಸ್ಯೆ ಅಂದರೆ ಪರಂಪರೆ ಮತ್ತು ಪ್ರಯೋಗಗಳ ಸಂಬಂಧದ ಸ್ವರೂಪ ಹೇಗಿರಬೇಕು ಎಂಬುದು. ಅವರ ಹೆಚ್ಚಿನ ಲೇಖನಗಳಲ್ಲಿ ಈ ಪ್ರಶ್ನೆಯು ಬೇರೆ ಬೇರೆ ರೂಪಗಳಲ್ಲಿ ಮತ್ತು ನೆಲೆಗಳಲ್ಲಿ ಕಾಣಿಸಿಕೊಂಡಿದೆ. ಇದನ್ನು ಜೋಶಿಯವರ ವಿಮರ್ಶೆಯ ಬಹಳ ಮುಖ್ಯವಾದ ತಾತ್ವಿಕ ತಳಹದಿ ಎಂದು ಭಾವಿಸುತ್ತೇನೆ. ಯಕ್ಷಗಾನದಂತಹ ರಂಗಭೂಮಿಯು ಕಲೆಯನ್ನು ಸರಿಯಾದ ದಿಕ್ಕಿನಲ್ಲಿ ಮುಂದುವರಿಸಬೇಕು ಮತ್ತು ಅದಕ್ಕಾಗಿ ಈ ಕಲೆಗೆ ಸಂಬಂಧಪಟ್ಟ ಎಲ್ಲಾ ಕ್ಷೇತ್ರಗಳವರು ತಮ್ಮ ತಮ್ಮ ಹೊಣೆಗಾರಿಕೆಯನ್ನು ನಿರ್ವಹಿಸಬೇಕು ಎನ್ನುವ ಕಾಳಜಿಯು ಒಂದು ಜೀವಂತ ರಂಗಭೂಮಿಯು ಬೆಳವಣಿಗೆಯಲ್ಲಿ ಬಹಳ ಮಹತ್ವದ ಅಂಶ. ಆದ್ದರಿಂದಲೇ ಇಲ್ಲಿನ ವಿಮರ್ಶಾ ಲೇಖನಗಳು ಕೇವಲ ಸೈದ್ಧಾಂತಿಕ ಸ್ವರೂಪದವು ಅಲ್ಲ; ಅವು ನಿರ್ದಿಷ್ಟ ತಾತ್ವಿಕ ತಳಹದಿಯುಳ್ಳ ಪ್ರಾಯೋಗಿಕ ಮೌಲ್ಯ ಹೊಂದಿರುವವು. ಹೀಗೆ ರಂಗದಿಂದ ಆಧಾರ ಸಾಮಗ್ರಿಗಳನ್ನು ಎತ್ತಿಕೊಂಡು ಅವನ್ನು ಪರಿಶೀಲಿಸಿ, ಪರಿಷ್ಕರಿಸಿ ಮತ್ತೆ ರಂಗಕ್ಕೆ ಕೊಟ್ಟು, ಅದನ್ನು ಪೋಷಿಸುವ – ಪರಿಷ್ಕರಿಸುವ ಒಂದು ವರ್ತುಲದ ಮಾದರಿಯಲ್ಲಿ ಇಲ್ಲಿನ ಲೇಖನಗಳ ರಚನೆಯಿದೆ. ಯಕ್ಷಗಾನ ರಂಗಭೂಮಿಯಲ್ಲಿ ಭಾಗವತರು ಸ್ಥೂಲವಾಗಿ ಮಾಡುವ ಕೆಲಸವನ್ನು, ಯಕ್ಷಗಾನ ವಿಮರ್ಶೆಯಲ್ಲಿ ಹೆಚ್ಚು ಸೂಕ್ಷ್ಮವಾಗಿ ಜೋಶಿಯವರು ಮಾಡಿದ್ದಾರೆ. ಹೀಗಾಗಿ ಜೋಶಿಯವರು ಒಬ್ಬ 'ವಿಮರ್ಶಕ–ಭಾಗವತ'.

'ಕರಾವಳಿ ಯಕ್ಷಗಾನ – ನೈಸರ್ಗಿಕ ಹಿನ್ನೆಲೆ' ಲೇಖನವು ರಾಚನಿಕ ಅಧ್ಯಯನದ ಮಾದರಿಯುಳ್ಳದ್ದು. ಆದ್ದರಿಂದ ಆ ಅಧ್ಯಯನ ಕ್ರಮದ ವಿಶಿಷ್ಟ ಒಳನೋಟಗಳೂ ಕೆಲವು ಮಿತಿಗಳೂ ಈ ಲೇಖನಕ್ಕೂ ಇವೆ. ನಿಸರ್ಗ ಮತ್ತು ಸಂಸ್ಕೃತಿ ಇವುಗಳ ಸಂಬಂಧಗಳು ಮನುಷ್ಯನ ಬದುಕಿನ ಬೇರೆ ಬೇರೆ ವಿನ್ಯಾಸಗಳನ್ನು ರೂಪಿಸಿದುದನ್ನು ಜಾನಪದದಲ್ಲಿ ರಾಚನಿಕ ವಿಮರ್ಶಕರು ಚರ್ಚಿಸಿದ್ದಾರೆ. ನಿಸರ್ಗವನ್ನು ಮತ್ತು ಸಹಜತೆಯನ್ನು

ಸಮೀಕರಣ ಮಾಡಿದಾಗ ಅದು ಸಾಮಗ್ರಿಗಳ ರೂಪದಲ್ಲಿ, ಕ್ರಿಯೆಗಳ ರೂಪದಲ್ಲಿ ಕಾಣಿಸಿಕೊಳ್ಳಬಹುದು. ಯಕ್ಷಗಾನದ ವೇಷಭೂಷಣಗಳ ಸಾಮಗ್ರಿಗಳು, ಕುಣಿತ ಮತ್ತು ಮಾತುಗಾರಿಕೆಯ ನಡೆ – ಇವು ಹೇಗೆ ಪ್ರಕೃತಿಪ್ರೇರಿತ ಎನ್ನುವುದನ್ನು ವಿಶಿಷ್ಟ ಒಳನೋಟಗಳ ಮೂಲಕ ಚರ್ಚಿಸಲಾಗಿದೆ. ಯಕ್ಷಗಾನ ಪ್ರಸಂಗಗಳಲ್ಲಿ ಪ್ರಕಟವಾಗುವ ಭಾವಗಳು, ಕ್ರಿಯೆಗಳು ಹೇಗೆ ನಿಜ ಜೀವನದವು ಎನ್ನುವುದರ ಸೂಚನೆಯೂ ಇಲ್ಲಿದೆ. ವಾಸ್ತವಿಕತೆ ಮತ್ತು ಫ್ಯಾಂಟಸಿಗಳ ವೈರುಧ್ಯವನ್ನು ಯಕ್ಷಗಾನದ ರಚನೆಯ ಒಳಗಡೆ ವಿವರಿಸುವ ಯತ್ನವನ್ನು ಇಲ್ಲಿ ಮಾಡಲಾಗಿದೆ. ಕಾಲದ ವಿಭಜನೆಯು ಯಕ್ಷಗಾನದ ಆಕೃತಿಯನ್ನು ರೂಪಿಸಿದ ಕ್ರಮವನ್ನೂ ವಿಶ್ಲೇಷಿಸಲಾಗಿದೆ. ಈ ದೃಷ್ಟಿಯಿಂದ, ನಮಗೆ ಗೊತ್ತಿರುವ ಸಂಗತಿಗಳನ್ನೇ ನಿರ್ದಿಷ್ಟ ರಚನೆಗಳ ರೂಪದಲ್ಲಿ ಬೇರ್ಪಡಿಸಿ ಯಕ್ಷಗಾನವನ್ನು ಅಧ್ಯಯನ ಮಾಡಿರುವ ಈ ಕ್ರಮವು ಪರಿಚಿತ ಅಂಶಗಳ ಅಪರಿಚಿತ ಮುಖಗಳ ಮೇಲೆ ಬೆಳಕು ಚೆಲ್ಲುತ್ತದೆ. ಇಂತಹ ರಾಚನಿಕ ಅಧ್ಯಯನವು ನಿಸರ್ಗ ಮತ್ತು ಸಂಸ್ಕೃತಿ (Nature and Culture)ಗಳ ಸಂಬಂಧದಲ್ಲಿ ಮೊದಲನೆಯದರಿಂದ ಎರಡನೆಯದು ಪ್ರೇರಿತ ಎಂದು ಮಾತ್ರ ನೋಡುತ್ತದೆ. ಹೀಗಾಗಿ 'ಅನುಕರಣ ತತ್ವ' (Theory of memories)ದ ಮಿತಿಯು ಈ ರೀತಿಯ ಅಧ್ಯಯನ ವಿಧಾನಕ್ಕೂ ಇದೆ.

ತಾಳಮದ್ದಲೆಯ ಹಿಮ್ಮೇಳವನ್ನು ಕುರಿತ ಲೇಖನವು ಈಗಾಗಲೇ ಜೋಶಿ ಬರೆದಿರುವ ತಾಳಮದ್ದಳೆಯ ಮಾತುಗಾರಿಕೆ, ತಾಳಮದ್ದಳೆ, ಅರ್ಥಗಾರಿಕೆ ಇಂತಹ ಲೇಖನಗಳ ಜತೆ ಓದಬೇಕಾದ ಪ್ರಬಂಧ. ಸಾಮಾನ್ಯವಾಗಿ ತಾಳಮದ್ದಳೆ ಕುರಿತ ಚರ್ಚೆಗಳಲ್ಲಿ ಮಾತುಗಾರಿಕೆಯನ್ನು ಮಾತ್ರ ಒಂದು ಪ್ರತ್ಯೇಕಿತ ಚಟುವಟಿಕೆಯಾಗಿ ಹೆಚ್ಚಿನವರು ಪರಿಗಣಿಸಿದ್ದಾರೆ. ಆದರೆ ತಾಳಮದ್ದಳೆಯನ್ನು 'ಒಂದು ರಂಗಭೂಮಿ' ಅನ್ನುವ ಸಮಗ್ರ ದೃಷ್ಟಿಕೋನದಿಂದ ಅಧ್ಯಯನ ಮಾಡಿದ ಈ ಲೇಖನವು ಜಾನಪದದ ಪ್ರದರ್ಶನ ಸಿದ್ಧಾಂತದ ಹಿನ್ನೆಲೆಯಲ್ಲಿ ಬಹಳ ಮಹತ್ವದ್ದು. ಜನಪದ ಕತೆಗಳನ್ನು ಹೇಳುವ ಸಂದರ್ಭಗಳನ್ನು ಕೂಡಾ ಒಂದು ಪ್ರದರ್ಶನ ಎಂದು ಅಧ್ಯಯನ ನಡೆಸುತ್ತಿರುವ ಇಂದಿನ ಸಂದರ್ಭದಲ್ಲಿ ಈ ಲೇಖನ ತನ್ನ ವ್ಯಾಪಕ ಸಾಮಗ್ರಿಗಳ ಮತ್ತು ವೈಜ್ಞಾನಿಕ ವಿಶ್ಲೇಷಣೆಯ ಕಾರಣಕ್ಕಾಗಿ ಪ್ರದರ್ಶನ ಸಿದ್ಧಾಂತಕ್ಕೆ ಹೊಸ ಆಯಾಮವನ್ನು ಸೇರಿಸಲು ಸಮರ್ಥವಾಗಿದೆ. ಪುಟ 31, 32ರಲ್ಲಿ 'ಕರ್ಣಾರ್ಜುನ ಪ್ರಸಂಗ'ದ ನಿದರ್ಶನದ ಮೂಲಕ, ರೇಖಾಚಿತ್ರಗಳ ನೆರವಿನಿಂದ ವಿವರಿಸಿದ ವಿಧಾನವು ಜಾನಪದದಂತಹ ಕ್ಷೇತ್ರಗಳಲ್ಲೂ ಅನ್ವಯಿಸಬಹುದಾದ ಒಂದು ಹೊಸ ಶೋಧವಾಗಿದೆ.

ತುಳು ಯಕ್ಷಗಾನದ ವಿಮರ್ಶೆಯು ಯಕ್ಷಗಾನ ಮತ್ತು ತುಳು ಎರಡು ಕ್ಷೇತ್ರಗಳಲ್ಲೂ ಒಂದು ವಿವಾದದ ವಿಷಯ. ಈ ಚರ್ಚೆಯಲ್ಲಿ ಸಾಮಾನ್ಯವಾಗಿ ಕಾಣಿಸುವುದು ಎರಡು ಅತಿರೇಕಗಳ ತುದಿಗಳು ಮಾತ್ರ. ಒಂದು, ಯಕ್ಷಗಾನ ಪರಂಪರೆಗೆ ತುಳು ಭಾಷೆಯು ವಿರೋಧಿ ಅನ್ನುವುದು. ಇನ್ನೊಂದು, ತುಳುವಿನ ಅಭಿಮಾನದ ಪ್ರಕಟನೆ. ಈ ಎರಡೂ ಭಾವುಕತೆಗಳನ್ನು ಕಳಚಿಕೊಂಡು, ತುಳು ಯಕ್ಷಗಾನವನ್ನು ಸಮೀಕ್ಷಿಸುವ ವಿಮರ್ಶಿಸುವ

ಮತ್ತು ಹೆಚ್ಚು ವ್ಯಾಪಕ ಅಧ್ಯಯನದ ಮೂಲಕ ಪುನಾರಚಿಸುವ ಆಲೋಚನೆಗಳು ಇಲ್ಲಿನ ಲೇಖನದಲ್ಲಿವೆ. ಜೋಶಿಯವರು ಈ ಲೇಖನದಲ್ಲಿ ಯಾರನ್ನೂ ಮೆಚ್ಚಿಸುವ ಅಥವಾ ತೆಗಳುವ ಕೆಲಸ ಮಾಡುವುದಿಲ್ಲ. ಆರಂಭದಲ್ಲಿ ಸೂಚಿಸಿದಂತೆ ಪರಂಪರೆ-ಪ್ರಯೋಗಗಳ ನಿರಂತರ ಪ್ರಕ್ರಿಯೆಯಲ್ಲಿ ಇವರು ಆಸಕ್ತರಾಗಿರುವುದರಿಂದ, ಯಕ್ಷಗಾನ ಮತ್ತು ತುಳು ಇವು ಒಂದು ರಂಗಭೂಮಿಯ ಆಕೃತಿಯಲ್ಲಿ ಮೈದಾಳುವಾಗ ಕಾಣಿಸುವ ವೈರುಧ್ಯಗಳನ್ನು ಗ್ರಹಿಸುವ ಮತ್ತು ನಿವಾರಿಸುವ ಪ್ರಯತ್ನಗಳನ್ನು ಮಾಡಿದ್ದಾರೆ. ತುಳು ಯಕ್ಷಗಾನ ನಿನ್ನೆ-ಇಂದು ಇರುವ ರೀತಿಯಲ್ಲಿ 'ನಾಳೆ' ಇರಬಾರದು ಎನ್ನುವುದು ಈ ಲೇಖನಕ್ಕೆ ಅನ್ವಯಿಕ ಆಯಾಮವನ್ನು ತಂದಿದೆ. ಅಂತಹ ಮೂರು ದಾರಿಗಳನ್ನು (ಪುಟ 68, 69) ತೆರೆದು ತೋರಿಸಿ ಅವುಗಳಲ್ಲಿ ತಮ್ಮ ಆಯ್ಕೆಗಳನ್ನು ಸಕಾರಣವಾಗಿ ಮುಂದಿಟ್ಟಿದ್ದಾರೆ. ಯಕ್ಷಗಾನದ ಬೇರೆ ಬೇರೆ ಅವಯವಗಳಲ್ಲಿ ತುಳು ಭಾಷೆ ಮತ್ತು ಸಂಸ್ಕೃತಿ ಯಾವ ಯಾವ ಪ್ರಮಾಣದಲ್ಲಿ ಅಳವಡಿಬಹುದು ಎನ್ನುವುದನ್ನು ನಿದರ್ಶನಗಳೊಂದಿಗೆ ಚರ್ಚಿಸಿರುವುದರಿಂದ ಈ ಲೇಖನವು ಸಾಮಾನ್ಯೀಕರಣಗೊಂಡ ಯಾವುದೇ ಸೂತ್ರಗಳನ್ನು ಹೇಳದೆ, ಬದಲಾವಣೆಯು ಬಯಸುವ ಸಮಸ್ಯೆಗಳೊಡನೆ ಮುಖಾಮುಖಿಯಾಗಿ ಸಂವಾದ ನಡೆಸುತ್ತದೆ.

ಯಕ್ಷಗಾನದ 'ಪಠ್ಯ'ವೊಂದನ್ನು ಪಠ್ಯ, ಸಂದರ್ಭ, ಸನ್ನಿವೇಶ ಮತ್ತು ಪ್ರದರ್ಶನಗಳ ಸಂಬಂಧ ದೃಷ್ಟಿಯಿಂದ ಸಮಗ್ರವಾಗಿ ಅಧ್ಯಯನ ಮಾಡಿದ 'ಶರಸೇತು ಬಂಧನ' ಲೇಖನವು ಯಕ್ಷಗಾನದ ವಿಮರ್ಶೆಯಲ್ಲೇ ಒಂದು ಮಹತ್ವದ ಬೆಳವಣಿಗೆ. ಈ ಸಂಕಲನದಲ್ಲಿಯೇ, ತನ್ನ ವಸ್ತು ಮತ್ತು ನಿರ್ವಹಣೆಯಿಂದ ಇದು ಪ್ರತ್ಯೇಕವಾಗಿದ್ದು ಗಮನಾರ್ಹವಾಗಿದೆ.

ಯಾವುದೇ ಜಾನಪದ ಪ್ರಕಾರದಲ್ಲಿ ಪಠ್ಯ ಮತ್ತು ಅದರ ಬಳಕೆಯ ಸಂದರ್ಭವನ್ನು ಹೊಂದಿಕೊಂಡು ಅರ್ಥಗಳು ಬದಲಾಗುತ್ತವೆ. ಇಲ್ಲಿ ಅರ್ಥಗಳು ನಿರ್ದಿಷ್ಟ ಸಂದರ್ಭಗಳ ಮೂಲಕ ನಮಗೆ ಸಂವಹನವಾಗುತ್ತದೆ. 'ಅರ್ಥ'ವೆಂದರೆ ಅನ್ವೇಷಿಸುವ ಒಂದು ವಸ್ತುವಲ್ಲ; ಅದೊಂದು ಪ್ರಕ್ರಿಯೆ. ಅದು, ಒಂದು ಸನ್ನಿವೇಶ ಮತ್ತು ಅದರಿಂದ ಅನುಭವವನ್ನು ಪಡೆಯುವ ವ್ಯಕ್ತಿಗಳ ನಡುವಿನ ಒಂದು ಪರಿವರ್ತನಶೀಲ ಸಂಬಂಧ. ಪಠ್ಯದಲ್ಲಿ ಸಂಭವಿಸುವ ಬದಲಾವಣೆಗಳು, ಅರ್ಥದ ಬದಲಾವಣೆಗಳೊಂದಿಗೆ ಸಂಬಂಧ ಪಟ್ಟಿರುತ್ತವೆ. ಕೆಲವೊಮ್ಮೆ ಪಠ್ಯದಲ್ಲಿಲ್ಲದ ಅರ್ಥಗಳು ಪ್ರದರ್ಶನದಲ್ಲಿ ಆಂಗಿಕ ಅಭಿನಯ ಮತ್ತು ಮಾತಿನ ಏರಿಳಿತಗಳ ಮೂಲಕ ಪ್ರಕಟವಾಗಬಹುದು. ಈ ದೃಷ್ಟಿಯಿಂದ 'ಶರಸೇತು ಬಂಧನ' ಪ್ರಸಂಗವನ್ನು ಕುರಿತ ವಿಶ್ಲೇಷಣೆ ತಾಳಮದ್ದಲೆಯ ರಚನೆಯನ್ನು ಕುರಿತು ಮಾಡಿದ ಬಹಳ ಮುಖ್ಯವಾದ ಒಂದು ಸಂಶೋಧನೆ. ಮುಂದಿನ ದಿನಗಳಲ್ಲಿ ತಾಳಮದ್ದಳೆಗಳನ್ನು ಈ ದೃಷ್ಟಿಯಿಂದ ಅರ್ಥಮಾಡಿಕೊಂಡರೆ ಮತ್ತು ಅಧ್ಯಯನ ಮಾಡಿದರೆ ಈ ವಿಶಿಷ್ಟ ರಂಗಭೂಮಿಯು ಸಾಧ್ಯತೆಗಳನ್ನು ಹಿಗ್ಗಿಸಬಹುದು.

ಮುಳಿಯ ತಿಮ್ಮಪ್ಪಯ್ಯನವರ ಅಪ್ರಕಟಿತ ಯಕ್ಷಗಾನ ಪ್ರಸಂಗ 'ಸೂರ್ಯಕಾಂತಿ

ಕಲ್ಯಾಣ'ವನ್ನು ಪರಿಚಯ ಮಾಡಿಕೊಡುವುದರ ಜೊತೆಗೆ ತಿಮ್ಮಪ್ಪಯ್ಯನವರ ಯಕ್ಷಗಾನ ಸಂಶೋಧನೆಯ ಸ್ವರೂಪವನ್ನು 'ಮುಳಿಯರ ಪಾರ್ತಿಸುಬ್ಬ ಮತ್ತು ಸೂರ್ಯಕಾಂತಿ ಕಲ್ಯಾಣ' ಲೇಖನದಲ್ಲಿ ವಿವರಿಸಲಾಗಿದೆ.

'ಅರ್ಥಗಾರಿಕೆ – ಪರಂಪರೆ, ಪ್ರಯೋಗ' ಈ ಲೇಖನವು ಈಗಾಗಲೇ ನಾನು ಉಲ್ಲೇಖಿಸಿದ 'ಶರಸೇತು ಬಂಧನ' ಲೇಖನದ, ತಾತ್ವಿಕ ತಳಹದಿಯಾಗಿರುವ ಒಂದು ಆಶಯ ಪ್ರಬಂಧ. ಪಠ್ಯ, ಸಂದರ್ಭ, ಪ್ರದರ್ಶನ ಮತ್ತು ಪ್ರೇಕ್ಷಕವರ್ಗ ಈ ಸಂಬಂಧಗಳ ದೃಷ್ಟಿಯಿಂದ, ಯಕ್ಷಗಾನ ಪ್ರಸಂಗಗಳ ಪುರಾಣದ ಘಟನೆಗಳಿಗೆ ಹೊಸ ಅರ್ಥಗಳು ಪ್ರಾಪ್ತವಾಗುವ ಬಗೆಗಳನ್ನು ವಿವೇಚಿಸಲಾಗಿದೆ.

ಯಕ್ಷಗಾನ ರಂಗಭೂಮಿಯ ಬೆಳವಣಿಗೆಗಳನ್ನು ಚರ್ಚಿಸುವವರೆಲ್ಲ ಸಾಮಾನ್ಯವಾಗಿ ವೃತ್ತಿಮೇಳಗಳನ್ನು ಮಾತ್ರ ಗಮನಿಸುತ್ತಾರೆ. ಆದರೆ ಕರಾವಳಿಯಲ್ಲಿ ಹವ್ಯಾಸಿ ಮೇಳಗಳು ಕೂಡಾ ಯಕ್ಷಗಾನದ ಬೆಳವಣಿಗೆಗೆ ಗಮನಾರ್ಹ ಕೊಡುಗೆ ನೀಡಿವೆ. ಹವ್ಯಾಸಿಗಳ ಭಿನ್ನ ಬಗೆಗಳನ್ನು ನಿದರ್ಶನಗಳೊಂದಿಗೆ ಹೇಳುವುದರ ಜತೆಗೆಯೇ ಅವರ ಸಮಸ್ಯೆಗಳನ್ನು ವಿವರವಾಗಿ ಇಲ್ಲಿ ಪಟ್ಟಿ ಮಾಡಲಾಗಿದೆ. ಇವು ಆರ್ಥಿಕ, ಸಂಘಟನಾತ್ಮಕ ಮತ್ತು ಕಲಾ ಸಂಬಂಧಿ ಸಮಸ್ಯೆಗಳು. ಈ ಸಮಸ್ಯೆಗಳ ನಿವಾರಣೆಗೆ ಏನು ಕಾರ್ಯಕ್ರಮಗಳನ್ನು ಕೈಗೊಳ್ಳಬಹುದೆಂಬ ಕೆಲವು ನಿರ್ದಿಷ್ಟ, ಮೌಖಿಕ ಸೂಚನೆಗಳು ಪ್ರಾಯೋಗಿಕ ಮಹತ್ವವುಳ್ಳವುಗಳಾಗಿವೆ.

'ಸೃಜನಶೀಲತೆಯ ಸಂದರ್ಭ' ಲೇಖನವು ಯಕ್ಷಗಾನಕ್ಕೆ ಸಂಬಂಧಿಸಿದಂತೆ ಕೆಲವು ಅಭಿಪ್ರಾಯವನ್ನು ಕೊಡುತ್ತದೆ. ಆದರೆ ಇಂತಹ ಅಭಿಪ್ರಾಯಗಳು ಒಂದು ತಾತ್ವಿಕ ಸ್ವರೂಪವನ್ನು ಇಲ್ಲಿ ಪಡೆದಿಲ್ಲ. ಇದೇ ವಿಷಯವನ್ನು ಎತ್ತಿಕೊಂಡು, ಅನುಕರಣ ತತ್ವದ ಮಿತಿಗಳನ್ನು ಚರ್ಚಿಸಿ ಯಕ್ಷಗಾನವನ್ನು ಅಧ್ಯಯನ ಮಾಡಬಹುದು. ಏಕೆಂದರೆ ಅನುಕರಣ, ಅನುಸರಣ, ಸೃಜನಶೀಲತೆ ಇವು ರೂಢಿಯಲ್ಲಿ ಬಳಕೆಯಾಗುತ್ತಿರುವುದು ತೀರ ಸರಳ ಅರ್ಥಗಳಲ್ಲಿ ಮಾತ್ರ

ಯಕ್ಷಗಾನ ಸಂಬಂಧಿಯಾದ ಕೆಲವು ಸಂಶೋಧನ ಟಿಪ್ಪಣಿಗಳು ಮತ್ತು ಮಾಹಿತಿಗಳು ಉಪಯುಕ್ತವಾಗಿವೆ. ಅನೇಕ ಹೊಸ ಮಾಹಿತಿಗಳ ಸಂಗ್ರಹ ಇಲ್ಲಿ ದೊರೆಯುತ್ತವೆ. ಯಕ್ಷಗಾನವನ್ನು ಕುರಿತು 'ವಿಷಯ ಮಾಹಿತಿ ಕೋಶ'ವನ್ನು ಸಿದ್ಧಪಡಿಸುವ ಅವಶ್ಯಕತೆ ಇದೆ. ಈ ಕೆಲಸವನ್ನು ಜೋಶಿಯವರು ಮಾಡಬೇಕು ಎನ್ನುವುದು ನನ್ನ ಅಪೇಕ್ಷೆ. ನಮ್ಮ ಅನೇಕ ಸಂಶೋಧನೆಗಳು ಸಮರ್ಪಕವಾದ ಮಾಹಿತಿಗಳ ಕೊರತೆಯಿಂದ ತಪ್ಪು ದಾರಿಗಳಲ್ಲಿ ಚಲಿಸುತ್ತವೆ. ಈ ಕಾರಣಕ್ಕಾಗಿಯೂ ಇಂತಹ ಕೋಶ ತೀರಾ ಅಗತ್ಯವಾಗಿದೆ.

ಪ್ರಭಾಕರ ಜೋಶಿಯವರ 'ಮಾರುಮಾಲೆ'ಗೆ ಮುನ್ನುಡಿಯ ರೂಪದಲ್ಲಿ ಈ ಕೆಲವು ಅಭಿಪ್ರಾಯಗಳನ್ನು ಹೇಳುವುದು ನನಗೆ ಸಂತೋಷದ ಸಂಗತಿ. ಜೋಶಿಯವರ ಗ್ರಂಥಕ್ಕೆ ಮುನ್ನುಡಿಯನ್ನು ಬರೆದಿರುವುದಕ್ಕೆ ನನ್ನ ಬಗೆಗಿನ ಅವರ ಪ್ರೀತಿ ವಿಶ್ವಾಸಗಳೇ

ಕಾರಣ. ಯಕ್ಷಗಾನವನ್ನು ಕುರಿತ ಇವರ ಸಂಶೋಧನ ಬರಹಗಳನ್ನು ಅಧ್ಯಯನ ಮಾಡಿದ ವಿದ್ಯಾರ್ಥಿ ನಾನು. ಯಕ್ಷಗಾನದ ಬಗೆಗಿನ ನನ್ನ ತಿಳುವಳಿಕೆಯನ್ನು ಈ ಲೇಖನಗಳು ವಿಸ್ತರಿಸಿವೆ ಮತ್ತು ಬದಲಾಯಿಸಿವೆ. ಈ ಗ್ರಂಥದಲ್ಲಿನ ಅಧ್ಯಯನ ಶೀಲತೆ, ವಿಷಯ ಪ್ರತಿಪಾದನೆ ಮಾಡುವ ಕ್ರಮ, ಯಕ್ಷಗಾನವನ್ನು ಕುರಿತ ಪ್ರಾಮಾಣಿಕ ಕಳಕಳಿ – ಇವುಗಳಿಂದಾಗಿ ಈ ಸಂಶೋಧನ ಗ್ರಂಥವು ಅನ್ವಯಿಕ ರೂಪದ್ದು ಮತ್ತು ಮಾನವಿಕ ಮೌಲ್ಯಗಳುಳ್ಳದ್ದು. ಕನ್ನಡ ಸಂಶೋಧನೆಯ ಆರೋಗ್ಯಕರವಾದ ಪ್ರವೃತ್ತಿಯ ಒಂದು ಮುಖ್ಯ ದಾಖಲೆ ಈ ಗ್ರಂಥದ ಮೂಲಕ ಆಗಿದೆ ಎನ್ನುವುದು ಸಂಶೋಧನೆ ಮತ್ತು ರಂಗಭೂಮಿಯಲ್ಲಿ ಆಸಕ್ತರಾದವರಿಗೆ ಭರವಸೆ ಕೊಡುವ ಅಂಶ.






ಪ್ರಸ್ತುತ, 1993
ಕರ್ನಾಟಕ ಸಂಘ ಪುತ್ತೂರು

## ಜೋಶಿಯವರ 'ಯಕ್ಷಗಾನ ಮೀಮಾಂಸೆ'

**ಪ್ರೊ. ಎಮ್.ಎಲ್. ಸಾಮಗ**

ಸಂಕ್ರಮಣದ ಸಂಕಟದಲ್ಲಿರುವ ನಮ್ಮ ಕರಾವಳಿ ಯಕ್ಷಗಾನವು ಹಲವು ವಿವಾದ, ಗೊಂದಲಗಳ ಕಲಾಕ್ಷೇತ್ರವಾಗುತ್ತಿದೆ. ಯಾವ ದಿಕ್ಕಿನಲ್ಲಿ ಸಾಗಿ ಬೆಳೆಯಬೇಕು, ಯಾವ ನಿಟ್ಟಿನಲ್ಲಿ ಬೆಳೆದು ಸಾಗಬೇಕು ಎನ್ನುವುದಕ್ಕೆ ಸರಿಯಾದ ದಿಕ್ಸೂಚಿ ಯಕ್ಷಗಾನದ ಇಂದಿನ ತೀವ್ರ ಅಗತ್ಯ. ಪರಸ್ಪರ ಸಂಬಂಧಿಗಳಾದ ಔಚಿತ್ಯ ಪ್ರಜ್ಞೆ, ರುಚಿಶುದ್ಧಿ ಹಾಗೂ ರಸಪ್ರಜ್ಞೆಗಳ ಕೊರತೆಯಿಂದಾಗಿ ಯಕ್ಷಗಾನವು ವಿಕಾರವಾಗಿ ಬೆಳೆಯುತ್ತಿದೆ; ಅದರೊಂದಿಗೆ ಸ್ವಂತಿಕೆಯ ಕಲಾ ಶ್ರೀಮಂತಿಕೆಯನ್ನು ಕಳೆದುಕೊಳ್ಳುತ್ತಿದೆ ಎನ್ನುವುದೂ ಅಷ್ಟೇ ಸತ್ಯ. ಈ ಅಗತ್ಯ ಮತ್ತು ಕೊರತೆಗಳನ್ನು ಪೂರೈಸುವುದಕ್ಕೆ ಹಾಗೂ ತುಂಬಿಸುವುದಕ್ಕೆ ಪ್ರಭಾಕರ ಜೋಶಿಯವರು ಸುಮಾರು ಇಪ್ಪತ್ತು ವರ್ಷಗಳಿಂದಲೂ ಪ್ರಯತ್ನಿಸುತ್ತಿದ್ದಾರೆ ಎನ್ನುವುದು ಅವರನ್ನು ಹತ್ತಿರದಿಂದ ಬಲ್ಲ ನನ್ನಂಥವರೆಲ್ಲ ತಿಳಿದಿರುವ ವಿಷಯ.

ಎಷ್ಟೋ ಉತ್ತಮ ವಿದ್ವಾಂಸರ ಯಕ್ಷಗಾನ ವಿಮರ್ಶೆಗಳು – ಭಾಷಣ, ಚರ್ಚೆ ಮೊದಲಾದ ರೂಪಗಳಲ್ಲಿ ಈಗಾಗಲೇ ನಡೆದಿವೆ. ಆದರೆ ಯಕ್ಷಗಾನ ಅರ್ಥಗಾರಿಕೆಯಂತೆ ಅವೆಲ್ಲ ಈ ವರ್ತಮಾನ ಕಾಲದಲ್ಲೇ ಹುಟ್ಟಿ ಸಾವನ್ನು ಕಂಡಿವೆ, ಭವಿಷ್ಯತ್ತಿಗೆ ಅವು ಉಳಿದಿಲ್ಲ. ಈ ವರ್ಗದ ವಿಮರ್ಶೆಗಿಂತ ಭಿನ್ನವಾಗಿ ಜೋಶಿಯವರ ವಿಚಾರಧಾರೆಗಳು, ವಿಮರ್ಶೆಗಳು ಗ್ರಂಥರೂಪದಲ್ಲಿ ಪ್ರಕಟವಾಗುತ್ತಿರುವುದು ಅವರಿಗೆ

ಸಾಹಸದ ಕೆಲಸವಾದರೂ, ನಮಗೆ ಸಂತೋಷದ ಸಂಗತಿ. ಈಗಾಗಲೇ ಪ್ರಕಟವಾಗಿರುವ ಯಕ್ಷಗಾನ ಕುರಿತಾದ ಪ್ರಬಂಧ ಸಂಕಲನಗಳು 'ಜಾಗರ', 'ಕೇದಗೆ' ಮತ್ತು 'ಮಾರುಮಾಲೆ' – ಮತ್ತು ಅದೇ ಸಾಲಿಗೆ ಸೇರುವ ಈ ಕೃತಿ 'ಪ್ರಸ್ತುತ' ಯಕ್ಷಗಾನ ವಿಮರ್ಶಾ ಪ್ರಪಂಚದ ಅಮೂಲ್ಯ ಕೃತಿಗಳೆನ್ನುವುದು ಉತ್ಪ್ರೇಕ್ಷೆಯ ಮಾತಲ್ಲ. ಜೀವಂತ ಯಕ್ಷಗಾನ ರಂಗಭೂಮಿಯ ಆಂಗೋಪಾಂಗಳ ಸೂಕ್ಷ್ಮಾವಲೋಕನ, ಗಾಢವಾದ ಚಿಂತನ, ವಿಶಾಲವಾದ ಸಂಶೋಧನಾತ್ಮಕ ಹಾಗೂ ತೌಲನಿಕ ಅಧ್ಯಯನ, ವಿದ್ವಾಂಸರೊಡನೆ ಸಮಾಲೋಚನೆ, ಕಲಾವಿದರೊಂದಿಗೆ ಅಹರ್ನಿಶಿ ಒಡನಾಟ ಮತ್ತು ಚರ್ಚೆ, ಆಧುನಿಕ ವಿಶ್ಲೇಷಣಾತ್ಮಕ ವಿಮರ್ಶಾ ಶಿಸ್ತಿನ ಪ್ರಯೋಗ.. ಇವುಗಳ ಫಲವಾದ ಜೋಶಿಯವರ ವಿಮರ್ಶಾ ಪ್ರಬಂಧಗಳು ಯಕ್ಷಗಾನ ರಂಗಭೂಮಿಯ ಸಮಗ್ರ ಸ್ವರೂಪ ನಿರ್ಣಯದ 'ರಂಗಮೀಮಾಂಸೆ'ಯನ್ನು ರೂಪಿಸುತ್ತವೆ.

ಪ್ರಸ್ತುತ ಈ ಪುಸ್ತಕದಲ್ಲಿ ಹೆಚ್ಚಿನ ಲೇಖನಗಳು ಅಲ್ಲಲ್ಲಿ ನಡೆದ ವಿಚಾರಗೋಷ್ಠಿಗಳಿಗಾಗಿ ಬರೆದವುಗಳಾದ್ದರಿಂದ ಅವುಗಳಲ್ಲಿ ಸಾಂದರ್ಭಿಕ ಔಚಿತ್ಯ ಹೆಚ್ಚು ಎದ್ದು ಕಾಣುತ್ತದೆ. ಆದುದರಿಂದಲೇ ಈ ಲೇಖನಗಳನ್ನು ಒಟ್ಟಾಗಿ ಓದುವಾಗ ವಿಷಯ ಪುನರಾವರ್ತನೆ ಕೆಲವೊಮ್ಮೆ ತೋರುತ್ತದೆ. ಆದರೆ ಅದು ಯಕ್ಷಗಾನದ ಬಗ್ಗೆ ಜೋಶಿಯವರ ಮೂಲಭೂತವಾದ ಗ್ರಹಿಕೆಯನ್ನು ಒತ್ತಿಹೇಳುತ್ತದೆ. "ಯಕ್ಷಗಾನವು ಶೈಲಿಬದ್ಧ ಕಲೆ, ಅದು ಪ್ರತಿಪಾದಿಸುವ ವಿಷಯಕ್ಕಿಂತಲೂ ಅದರ ಕಲಾ ರೂಪ ಮುಖ್ಯ" ಎಂಬುದನ್ನು ಅವರು ಹಲವು ಲೇಖನಗಳಲ್ಲಿ ಪ್ರತಿಪಾದಿಸುತ್ತಾರೆ. 'ಉತ್ತರ ಕನ್ನಡ ಯಕ್ಷಗಾನ ಪರಂಪರೆ; ಕೆಲವು ನೋಟಗಳು', 'ಸೈದ್ಧಾಂತಿಕ ಖಚಿತತೆಯ ಅವಶ್ಯಕತೆ', 'ಕಲಾಸ್ವರೂಪ ಮತ್ತು ಅಭಿವ್ಯಕ್ತಿ ವಿಧಾನ' ಮೊದಲಾದ ಲೇಖನಗಳೂ ವಿಮರ್ಶಾ ವಲಯಗಳಿಗೆ, ಕಲೆಯ ಆಸ್ವಾದನೆಗೆ, ಸರಿಯಾದ ದಿಕ್ಸೂಚಿಗಳಂತಿವೆ; ಮೌಲ್ಯ ನಿರ್ಣಯದ ಮಾನದಂಡವನ್ನು ಪರಿಚಯಿಸುತ್ತದೆ.

ಯಕ್ಷಗಾನದ ವಿವಿಧ ಅಂಗಗಳ ಬಗ್ಗೆ ಬಿಡಿ ಬರಹಗಳು, ವಿಮರ್ಶಾ ಸಂಕಲನಗಳೂ, ಗ್ರಂಥಗಳು ಈಗಾಗಲೇ ಸಾಕಷ್ಟು ಪ್ರಕಟವಾಗಿವೆ. ಆದರೆ ಪ್ರಭಾಕರ ಜೋಶಿಯವರು ಡಾ.ಶಿವರಾಮ ಕಾರಂತರ ನಂತರ ಗಮನ ಸೆಳೆದ ಗಟ್ಟಿಯಾದ ವಿಮರ್ಶಕ–ಕಲಾವಿದ. ವಿಮರ್ಶಕನ ಜವಾಬ್ದಾರಿಗಳಲ್ಲಿ ಒಂದಾದ Correction of taste – ಅಭಿರುಚಿಯ ಪರಿಷ್ಕರಣ – ಮತ್ತು Creation of taste (ಸದಭಿರುಚಿಯ ಸೃಷ್ಟಿ) – ಅನ್ನು ಜೋಶಿಯವರು ಗಂಭೀರವಾಗಿ ಪರಿಗಣಿಸಿದ್ದಾರೆ. ಎನ್ನುವುದು ಅವರ ವಿಮರ್ಶೆಗಳಲ್ಲಿ ಸ್ಪಷ್ಟವಾಗುತ್ತದೆ. ಅವರ ಅಭಿಪ್ರಾಯಗಳಲ್ಲಿರುವ ಸೈದ್ಧಾಂತಿಕ ಖಚಿತತೆ, ಬರಹಗಳ ವ್ಯಾಪಕತೆ, ವಿಷಯ ವೈಶಾಲ್ಯ, ವಿಷಯ ನಿರೂಪಣೆಯಲ್ಲಿ ಸಂಕ್ಷಿಪ್ತತೆ, ಆಧುನಿಕ ವಿಮರ್ಶಾ ಶಿಸ್ತಿನ ವಿಶ್ಲೇಷಣಾ ಕ್ರಮ, Academic approach, ಸ್ವತಂತ್ರ ಶೈಲಿ.. ಇತ್ಯಾದಿ ಗುಣಗಳಿಂದ ಅವರ ವಿಮರ್ಶೆಗಳು ಇತರ ಯಕ್ಷಗಾನ ವಿಮರ್ಶಾ ಗ್ರಂಥಗಳ ಮಧ್ಯೆ ವಿಶಿಷ್ಟ ಮತ್ತು ಮುಖ್ಯ ಸ್ಥಾನವನ್ನು ಪಡೆಯುತ್ತವೆ. ಯಕ್ಷಗಾನ ಕಲೆಯನ್ನು ಸೃಷ್ಟಿಸುವ

ಕಲಾವಿದ ತಾನು ಪ್ರಬುದ್ಧನಾಗುವುದಕ್ಕೆ ಓದಲೇಬೇಕಾದ ಲೇಖನಗಳಿವು. ಅದಕ್ಕಿಂತಲೂ ರಸಗ್ರಹಣ ಮಾಡುವ, ಕಲಾಭಿರುಚಿ ಎಂದರೇನೆಂದು ತಿಳಿದಿರಬೇಕಾದ, ಯಕ್ಷಗಾನ ಪ್ರೇಕ್ಷಕರು ಓದಿ ಮನನ ಮಾಡಬೇಕಾದ ವಿಮರ್ಶೆಗಳಿವು. ಯಕ್ಷಗಾನ ಪ್ರದರ್ಶನಗಳು ಬೆಳೆದ ಪ್ರಮಾಣದಲ್ಲೇ ವಸ್ತುನಿಷ್ಠ ವಿಮರ್ಶೆಯೂ ಬೆಳೆದಾಗ ಮಾತ್ರ ಯಕ್ಷಗಾನದ ಕ್ಷೇಮಾಭ್ಯುದಯವು ಸಾಧ್ಯ. (ಪ್ರೇಕ್ಷಕರಿಂದಾಗಿ ನಮ್ಮ ಆಟಗಳ ಗುಣಮಟ್ಟ ಕಡಿಮೆಯಾಗುತ್ತಿದೆ ಎಂದು ಪ್ರೇಕ್ಷಕರ ಬದಲಾದ ರುಚಿಯ ಮೇಲೆ ಜವಾಬ್ದಾರಿ ಹೊರಿಸುವ ಕಲಾವಿದರು ಮತ್ತು ಮೇಳದ ಯಜಮಾನರುಗಳು ಟೆಂಟಿನ ಮುಂದೆ ಟಿಕೇಟು ಮಾರುವಾಗ ಜೊತೆಯಲ್ಲಿ ಯಕ್ಷಗಾನದ ವಿಮರ್ಶಾ ಗ್ರಂಥಗಳನ್ನು ಮಾರಿದರೆ – ಜೋಶಿಯವರ ಪುಸ್ತಕಗಳ ಬಗ್ಗೆ ಪ್ರಚಾರ ಮಾಡಿದರೆ – ಯಕ್ಷಗಾನಕ್ಕೆ ದೊಡ್ಡ ಸೇವೆ ಮಾಡಿದಂತೆಯೇ ಸರಿ.)

ಜೋಶಿಯವರ ಶೈಲಿ ಮತ್ತು ವಿಷಯ ನಿರೂಪಣಾ ವಿಧಾನವು ಇತರ ಯಕ್ಷಗಾನ ವಿಮರ್ಶಕರಿಗಿಂತ ಭಿನ್ನವಾಗಿದ್ದು ತಮ್ಮ ವಿಶಿಷ್ಟತೆಯನ್ನು ಎತ್ತಿತೋರಿಸುತ್ತವೆ. (ಉದಾ: ಯಕ್ಷಗಾನ ರಂಗಭೂಮಿಯ ಸಮಸ್ಯೆಗಳು). 'ಮತೀಯ ಆಶಯವು ಕಾಲಕಲ್ಪಿತ', 'ಎಲ್ಲ ಕೃತಿಗಳಿಗೂ ಅದರ ನಿನ್ನೆ ಇಂದು ನಾಳೆಗಳಿವೆ', 'ಅಭಿವ್ಯಕ್ತಿಯಾಗಲಿ, ಪ್ರಾಯೋಗಿಕ (experimental) ರಚನೆಯಾಗಲಿ ಸಾರ್ಥಕವಾಗುವುದು ಅದರ ಹಿಂದೆ ಕಲಾ ಸ್ವರೂಪದ ಸಮಗ್ರವಾದ ಗ್ರಹಿಕೆ ಮತ್ತು ಪರಿಕಲ್ಪನಾತ್ಮಕವಾದ ಖಚಿತತೆ ಇದ್ದಾಗ' – ಇಂತಹ ಅರ್ಥಸಾಂದ್ರತೆಯುಳ್ಳ ಸಂಕ್ಷಿಪ್ತ ನೇರ ಮಾತುಗಳು ಹೆಚ್ಚಿನ ಪ್ರಬಂಧಗಳಲ್ಲಿ ದಟ್ಟವಾಗಿವೆ.

ಆಧುನಿಕ academic approachನಿಂದ ಅಂದರೆ ನವ್ಯ ವಿಮರ್ಶೆಯ ಶಾಸ್ತ್ರೀಯ ಪಾಂಡಿತ್ಯದ ಪ್ರೌಢಮಾರ್ಗದಲ್ಲಿ ತನ್ನ ವಿಮರ್ಶಾ ಬುದ್ಧಿಯನ್ನು ಹರಿಯ ಬಿಡುವ ಜೋಶಿಯವರ ಕೆಲವು ಪ್ರಬಂಧಗಳು – "ಸಾಂಪ್ರದಾಯಿಕ ಕಲೆ – ಪ್ರಸ್ತುತತೆಯ ಪ್ರಶ್ನೆ", "ಕಲಾಸ್ವರೂಪ ಮತ್ತು ಅಭಿವ್ಯಕ್ತಿ ವಿಧಾನ", "ಯಕ್ಷಗಾನ ರಂಗಭೂಮಿಯ ಸಮಸ್ಯೆಗಳು" – ಅರ್ಥದೃಷ್ಟಿಯಲ್ಲಿ ಅಮೂಲ್ಯವಾದವುಗಳು. ಆದರೆ ಅವುಗಳನ್ನು ಅರ್ಥಮಾಡಿಕೊಳ್ಳಲು ನಮ್ಮ ಸಾಮಾನ್ಯ ಯಕ್ಷಗಾನ ಕಲಾವಿದ ಹಾಗೂ ಪ್ರೇಕ್ಷಕ ಒಂದಕ್ಕಿಂತ ಹೆಚ್ಚು ಬಾರಿ ಅವುಗಳನ್ನು ಓದಬೇಕಾದೀತು ಮತ್ತು ಈ ರೀತಿಯ ವಿಮರ್ಶಾ ಮಾರ್ಗದ ಪರಿಚಯವನ್ನು ಸ್ವಲ್ಪ ಮಾಡಿಕೊಳ್ಳಬೇಕಾಗುತ್ತದೆ. ವಾಣಿಜ್ಯ ಪ್ರಾಧ್ಯಾಪಕರಾದ ಜೋಶಿಯವರು ಯಕ್ಷಗಾನದ ವಾಣಿಜ್ಯೀಕರಣವನ್ನು ವಾಣಿಜ್ಯ ಶಾಸ್ತ್ರದ ತತ್ವಗಳ ಆಧಾರದಲ್ಲಿ ವಿವೇಚಿಸುವುದು ಸಾಮಾನ್ಯ ಓದುಗರಿಗೆ ಮೊದಲ ಹಂತದ ಅರ್ಥಗ್ರಹಣದಲ್ಲಿ ತೊಡಕನ್ನುಂಟು ಮಾಡಬಹುದು.. ಅಂದರೆ ಕಲೆಯ ಬಗ್ಗೆ ಗಾಢವಾದ ಕಾಳಜಿ ಇಲ್ಲದ ನಮ್ಮ ಸಾಮಾನ್ಯ ಕಲಾವಿದ ಮತ್ತು ಪ್ರೇಕ್ಷಕರನ್ನು ಸುಲಭದಲ್ಲಿ ಆಕರ್ಷಿಸುವ ಬರಹಗಳು ಜೋಶಿಯವರದ್ದಲ್ಲ. (ಇವರ ವಿಮರ್ಶೆಗಳು ಅಪೇಕ್ಷಿಸುವ 'ಓದುಗ ಪ್ರಜ್ಞೆ' ಎಲ್ಲ ಉತ್ತಮ ಸಾಹಿತ್ಯಕ್ಕೂ ಅನ್ವಯಿಸಬಹುದಾದ ಸತ್ಯ). ಆದರೆ ಅವು ಈ ವರ್ಗದವರನ್ನು

ತಲುಪಿ ಅವರ ಸಂವೇದನೆಯನ್ನು ಶುದ್ಧ ಹಾಗೂ ತೀಕ್ಷ್ಣಗೊಳಿಸಿದಾಗ ಯಕ್ಷಗಾನಕ್ಕೆ ನಿಜವಾದ ಲಾಭವಾಗಿ ಅವು ಸಾರ್ಥಕವಾಗುತ್ತವೆ. ನಮ್ಮ ಯಕ್ಷಗಾನಾಸಕ್ತರು ಈ ಬೌದ್ಧಿಕ ಮಟ್ಟಕ್ಕೆ ಏರಲಿ ಎಂದು ಆಶಿಸುತ್ತೇನೆ.

ಜೋಶಿಯವರ ಈ ಪುಸ್ತಕಕ್ಕೆ ಮುನ್ನುಡಿ ಬರೆಯಲು ಒಪ್ಪಿದುದು ಅವರಿಗಿಂತ ನಾನು ಹೆಚ್ಚು ತಿಳಿದವನು ಹಾಗೂ ಸಮರ್ಥನು ಎಂಬ ಅಹಂಕಾರದ ನಂಬಿಕೆಯಿಂದಲ್ಲ; ಅಥವಾ ಒಬ್ಬ ಆತ್ಮೀಯ ಮಿತ್ರನನ್ನು ಹೊಗಳುವುದಕ್ಕೆ ಅವಕಾಶ ಸಿಕ್ಕಿತು ಎಂಬ ಕಾರಣಕ್ಕೂ ಅಲ್ಲ. ಅವರ ಯಕ್ಷಗಾನದ ಕುರಿತಾದ ಅಧ್ಯಯನ ಮತ್ತು ಕಾಳಜಿಯನ್ನು ಮನಸಾರೆ ಮೆಚ್ಚಿ ಅವರನ್ನು ಪ್ರೋತ್ಸಾಹಿಸಬೇಕಾದುದು ಮಿತ್ರಧರ್ಮವೆಂದು ಬಗೆದಿದ್ದೇನೆ. ಅದಕ್ಕೊಂದು ಅವಕಾಶ ಹೀಗೆ ಸಿಕ್ಕಿದೆ. ಮಾತ್ರವಲ್ಲ, ಅವರ ಪುಸ್ತಕಕ್ಕೆ ಮುನ್ನುಡಿ ಬರೆಯುವುದು ಹೆಮ್ಮೆಯ ವಿಷಯ.

ಇಂದಿಗೂ ಆಕರ ಗ್ರಂಥವಾಗಿರುವ ಶಿವರಾಮ ಕಾರಂತರ 'ಯಕ್ಷಗಾನ ಬಯಲಾಟ' ಯಕ್ಷಗಾನವನ್ನು ಪರಿಚಯಿಸುವ ವಿವರಣಾತ್ಮಕ (descriptive) ಪುಸ್ತಕ. ಅನಂತರ ಯಕ್ಷಗಾನದ ಸಮಗ್ರ ದರ್ಶನದ ಕೃತಿ ವ್ಯಕ್ತಿಯೋರ್ವನಿಂದ ಬಂದಿಲ್ಲ ಎನ್ನುವುದು ತಪ್ಪು ಅಭಿಪ್ರಾಯವಲ್ಲ. ಸಾಹಿತ್ಯ ಪ್ರಪಂಚದಲ್ಲಿ 'ಸಾಹಿತ್ಯ ಶಾಸ್ತ್ರ', 'ಕಾವ್ಯ ಮೀಮಾಂಸೆ'ಯಂತಹ ಗ್ರಂಥಗಳಿರುವಂತೆ 'ಯಕ್ಷಗಾನ ಮೀಮಾಂಸೆ' ಹುಟ್ಟುವ ಕಾಲ ಹತ್ತಿರದಲ್ಲಿದೆ. ಯಾಕೆಂದರೆ ಕಳೆದ ಮೂರು ನಾಲ್ಕು ದಶಕಗಳಲ್ಲಿ ಅಷ್ಟು ವಿಪುಲ ಚರ್ಚೆಯ ಕೃಷಿ ನಡೆದಿದೆ. ಹೆಚ್ಚಿನ ಯಕ್ಷಗಾನ ಗೋಷ್ಠಿಗಳಲ್ಲಿ, ಚರ್ಚಾವೇದಿಕೆಗಳಲ್ಲಿ ಭಾಗವಹಿಸಿ ಅನುಭವ ಸಂಪತ್ತನ್ನು ಗಳಿಸಿಕೊಂಡಿರುವ, ಸ್ವತಂತ್ರ ಶೈಲಿಯ ಉತ್ತಮ ಬರಹಗಾರರೂ ಆಗಿರುವ ಪ್ರಭಾಕರ ಜೋಶಿಯವರು ಯಕ್ಷಗಾನ ಮೀಮಾಂಸಾ ಗ್ರಂಥವೊಂದನ್ನು ಬರೆಯುವಂತಾಗಲಿ ಎನ್ನುವುದು ಈ ಸಂದರ್ಭದಲ್ಲಿ ಶುಭ ಹಾರೈಕೆ.






ವಾಗರ್ಥ, 1998
ಕರ್ನಾಟಕ ಸಂಘ ಪುತ್ತೂರು

## ಜೋಶಿಯವರ ವಾಗರ್ಥಕ್ಕೊಂದು ಕೆಳೆನುಡಿ

**ಡಾ. ಅಮೃತ ಸೋಮೇಶ್ವರ**

ಡಾ. ಎಂ. ಪ್ರಭಾಕರ ಜೋಶಿ ಅವರು ನಾಡಿನ ಸಾಂಸ್ಕೃತಿಕ ವಕ್ತಾರರಲ್ಲಿ ಒಬ್ಬರಾಗಿದ್ದಾರೆ. ಬಹುಮುಖಿ ಪ್ರತಿಭೆಯ, ವೈವಿಧ್ಯಪೂರ್ಣ ಆಸಕ್ತಿಯ ಶ್ರೀಯುತರು, ಪ್ರಾಧ್ಯಾಪಕರಾಗಿ, ಯಕ್ಷಗಾನ ಕಲಾವಿದರಾಗಿ, ಸಂಘಟಕರಾಗಿ, ಲೇಖಕರಾಗಿ, ಭಾಷಣಗಾರರಾಗಿ, ಸಂಭಾಷಣಪಟುವಾಗಿ, ಚಿಂತಕರಾಗಿ ಆಯಾ ಕ್ಷೇತ್ರಗಳಲ್ಲಿ ತಮ್ಮ ವಿಶಿಷ್ಟ ಛಾಪನ್ನು ಮೂಡಿಸಿದ್ದಾರೆ. ಯಕ್ಷಗಾನದಂತಹ ಜೀವಂತ ಕಲೆಯಲ್ಲಿ ಎಳವೆಯಿಂದಲೇ ತಮ್ಮನ್ನು ತೊಡಗಿಸಿಕೊಂಡು, ಅದರೊಂದಿಗೆ ಅವರೂ ಬೆಳೆದಿದ್ದಾರೆ. ಆ ಕಲೆಯ ಜೀವನಾಡಿಯನ್ನು ಹಿಡಿಸಿದ್ದಾರೆ, ಮಿಡಿದಿದ್ದಾರೆ. ಆ ಕಲೆಯ ರಂಗದ ಒಳಗಿನವರಾಗಿಯೂ ಅದರ ವಿಶ್ವರೂಪ ದರ್ಶನ ಮಾಡಬಲ್ಲರು; ಮಾಡಿಸಬಲ್ಲರು. ಹಾಗೆಯೇ ಕಲೆಯ ಚೌಕಟ್ಟಿನ ಹೊರಗೆ ವಿಮರ್ಶಕನ ನೆಲೆಯಲ್ಲಿ ನಿಂತು ವೈಚಾರಿಕ ನಿರ್ಲಿಪ್ತತೆಯಿಂದಲೂ ಕಲೆಯ ಆಗುಹೋಗುಗಳನ್ನು ವಿಶೇಷಿಸಬಲ್ಲರು. ಈ ವಸ್ತುನಿಷ್ಠತೆ ಅವರನ್ನು ಯಕ್ಷಗಾನದ ಶ್ರೇಷ್ಠ ವಿಮರ್ಶಕರನ್ನಾಗಿ ಮಾಡಿದೆ.

ಈ ಮೊದಲಿನ ತಮ್ಮ ಗ್ರಂಥಗಳಾದ 'ಕೇದಗೆ', 'ಜಾಗರ', 'ಮಾರುಮಾಲೆ', 'ಪ್ರಸ್ತುತ'ಗಳಲ್ಲಿ ಯಕ್ಷಗಾನದ ಹಲವು ಮಗ್ಗುಲುಗಳಿಗೆ ವಿಚಾರದ ಬೆಳಕನ್ನು ಹಾಯಿಸಿದ್ದಾರೆ. ಹೊಸ ಹೊಳಹನ್ನು ನೀಡಿದ್ದಾರೆ. ಇವರ ಪಿಹೆಚ್.ಡಿ. ಸಂಶೋಧನಾ ಮಹಾಪ್ರಬಂಧ – 'ಯಕ್ಷಗಾನ

ಕೃಷ್ಣಸಂಧಾನ–ಪ್ರಸಂಗ, ಪ್ರಯೋಗ' ಪ್ರಕಟವಾದಾಗ ಇವರ ಸಂಶೋಧನ ಸಾಹಸದ ಇನ್ನೊಂದು ಸಮರ್ಥ ಮುಖದ ವಿಶೇಷ ಪರಿಚಯವಾಗಬಹುದು. 'ಯಕ್ಷಗಾನ ಪದಕೋಶ' ಈ ಕ್ಷೇತ್ರದ ಅಧ್ಯಯನ ಶೀಲರಿಗೆ ಒಂದು ಅಪೂರ್ವ ಕೈಪಿಡಿ; ಆಕರ ಗ್ರಂಥ.

ಯಾವುದೇ ಕಲೆಯು ಬೆಳೆಯಬೇಕಾದರೆ ಅಥವಾ ಅದರ ಸತ್ವ, ಸ್ವತ್ವಗಳು ಉಳಿಯಬೇಕಾದರೆ ಬರೇ ಗತಾನುಗತಿಕತೆ ಸಾಲದು; ಆ ಕ್ಷೇತ್ರದಲ್ಲಿ ಪ್ರಯೋಗಶೀಲತೆ ಊರ್ಜಿತವಾಗಿರಬೇಕು; ಅಂತೆಯೇ ಕಲೆಯು ಹೊಲಬು ತಪ್ಪದಂತೆ ವಿಮರ್ಶಕ ಪ್ರಜ್ಞೆಯ ಕಟ್ಟೆಚ್ಚರದ ಕಾವಲೂ ಬೇಕು. ಈ ಎಚ್ಚರವನ್ನು ಬಹಳ ಕಾಲದಿಂದ ಇರಿಸಿಕೊಂಡು ಬಂದವರು ಡಾ. ಜೋಶಿ.

ಒಂದು ಕಾಲದಲ್ಲಿ, ಯಕ್ಷಗಾನದಂಥ ವಿಚಾರದಲ್ಲಿ ಅಧ್ಯಯನ ಸಂಶೋಧನೆ ನಡೆಸತಕ್ಕದ್ದೇನಿದೆ? ಪಿಹೆಚ್.ಡಿಯಂಥ ಉನ್ನತ ಅಧ್ಯಯನಕ್ಕೆ ವಿಷಯ ಆ ಕ್ಷೇತ್ರದಲ್ಲಿ ಇದ್ದೀತೆ? ಎಂಬ ಸಂದೇಹ ಮತ್ತು ಅಜ್ಞಾನ ಹಲವರಲ್ಲಿತ್ತು. ಈಗಲೂ ಈ ಅವಜ್ಞೆ ಪೂರ್ತಿಯಾಗಿ ತೊಲಗಿದೆ ಎನ್ನುವಂತಿಲ್ಲ. ಆದರೆ ನಿಜವಾದ ಜಿಜ್ಞಾಸುವಿಗೆ ಸಮಾಧಾನ ನೀಡುವಷ್ಟು ಅಧ್ಯಯನ ಕೃತಿಗಳು ಈ ಸಂಬಂಧವಾಗಿ ಲಭ್ಯವಾಗುತ್ತವೆ. ಮುಳಿಯ ತಿಮ್ಮಪ್ಪಯ್ಯನವರ 'ಪಾರ್ತಿಸುಬ್ಬ' ಕೃತಿಯ ಮೂಲಕ ತೊಡಗಿದ ಯಕ್ಷಗಾನದ ಸಂಶೋಧನೆ ಹಾಗೂ ವಿವೇಚನೆ ಇತ್ತೀಚೆಗಿನ ವರ್ಷಗಳಲ್ಲಿ ಸಾಕಷ್ಟು ಸಶಕ್ತವಾಗಿ ಬೆಳೆಯುತ್ತಿರುವುದನ್ನು ಕಾಣುತ್ತೇವೆ. ಯಕ್ಷಗಾನ ರಂಗಪಠ್ಯ ಸಾಮಗ್ರಿಯಾದ ಪ್ರಸಂಗ ಸಾಹಿತ್ಯವೂ ವಿಪುಲವಾಗಿ ಸೃಷ್ಟಿಯಾಗುತ್ತಿರುವುದನ್ನು ಕಾಣುತ್ತೇವೆ. ವ್ಯಾಪಾರೀಕರಣವೂ, ಇನ್ನಿತರ ವಿದ್ಯಮಾನಗಳೂ ಯಕ್ಷಗಾನವನ್ನು ಸಂಕ್ರಾಂತ ಸ್ಥಿತಿಗೆ ತಂದು ನಿಲ್ಲಿಸಿದ್ದನ್ನು ಕಾಣುತ್ತೇವೆ. ಇಂಥ ಸಂದರ್ಭದಲ್ಲಿ ಕಲೆಯ ವಿಮರ್ಶೆ ಹೆಚ್ಚು ಕ್ರಿಯಾಶಾಲಿಯೂ ಪ್ರಸ್ತುತವೂ ಆಗಬಲ್ಲುದು. ಡಾ. ಜೋಶಿಯವರಂತೂ ಯಕ್ಷಗಾನ ವಿಮರ್ಶೆಯನ್ನು ಒಂದು ವ್ರತದಂತೆ ಪಾಲಿಸಿಕೊಂಡು ಬಂದಿದ್ದಾರೆ. ಯಕ್ಷಗಾನ ರಂಗಕ್ಕೆ ಸಂಬಂಧಿಸಿದ ಅದೆಷ್ಟೋ ವಿಚಾರಗಳನ್ನು ಮಥಿಸಿ ವಿಚಾರಮಂಡನೆ ಮಾಡಿದರೂ ಇನ್ನೂ ಸಾಕಷ್ಟು ವಿಚಾರಗಳನ್ನು ಮನನ ಮಾಡಲಿದೆ ಎಂಬ ತಥ್ಯವನ್ನು ತಿಳಿದಿದ್ದಾರೆ. ಆ ತಿಳಿವಿನೊಂದಿಗೆ ಗ್ರಂಥದಿಂದ ಗ್ರಂಥಕ್ಕೆ ಬೆಳೆದು ನಿಂತಿದ್ದಾರೆ.

ಪ್ರಸ್ತುತ ಗ್ರಂಥದಲ್ಲಿರುವ ಲೇಖನಗಳು ಮುಖ್ಯವಾಗಿ ಯಕ್ಷಗಾನದ ವಾಚಿಕಾಭಿನಯ, ಯಕ್ಷಗಾನ ತಾಳಮದ್ದಳೆಯ ರಂಗಸ್ವರೂಪ, ಯಕ್ಷಗಾನ ಪ್ರಸಂಗ ಸಾಹಿತ್ಯದ ತಾತ್ವಿಕತೆ – ಹೀಗೆ ಕಲಾಮೀಮಾಂಸೆಯ ಹಿನ್ನೆಲೆಯಲ್ಲಿ ರೂಪುಗೊಂಡಿದೆ. ಎಲ್ಲೂ ಅನವಶ್ಯಕವಾಗಿ ಭಾವುಕರಾಗದೆ, ಅತ್ಯಂತ ಸಂಯಮ ಮತ್ತು ಚಿಕಿತ್ಸಕ ದೃಷ್ಟಿಯಿಂದ ಶಾಸ್ತ್ರೀಯವಾಗಿ, ತರ್ಕಶುದ್ಧವಾಗಿ ವಿಷಯಗಳನ್ನು ವಿವೇಚನೆಗೆ ಒಳಪಡಿಸಿದ್ದಾರೆ.

ತಾಳಮದ್ದಳೆ ಎಂಬ ರಂಗಪ್ರಕಾರ ಲೇಖನದ ಖಾಸಾ ಕ್ಷೇತ್ರವಾದುದರಿಂದ ಅದರ ಎಲ್ಲ ಸೂಕ್ಷ್ಮತೆಗಳನ್ನು ಅವರು ಕಂಡಿದ್ದಾರೆ. ಸಾಧ್ಯತೆಗಳನ್ನು ಶೋಧಿಸಿದ್ದಾರೆ.

ಅನನ್ಯತೆಯನ್ನು ವ್ಯಾಖ್ಯಾನಿಸಿದ್ದಾರೆ. "ತಾಳಮದ್ದಳೆ – ಕೆಲವು ಗ್ರಹಿಕೆಗಳು" ಎಂಬ ಲೇಖನದಲ್ಲಿ, ಪ್ರಸಂಗ ಪದ್ಯವು ಪ್ರದರ್ಶನದಲ್ಲಿ ಪಡೆದುಕೊಳ್ಳುವ ವಿವಿಧ ಆಯಾಮಗಳು 'ಅರ್ಥದಾರಿ'ಗಳ ಸೃಜನಶೀಲತೆ, ರಸಸೃಷ್ಟಿ ವೈಭವ, ವಾಗರ್ಥ ಸಿದ್ಧಿ.. ಇತ್ಯಾದಿಗಳನ್ನು ಸೋದಾಹರಣವಾಗಿ ವಿವರಿಸಿ ತಾಳಮದ್ದಳೆಯ ಜೀವಂತಿಕೆ ಇರುವುದೆಲ್ಲಿ ಎಂಬುದನ್ನು ಮಾರ್ಮಿಕವಾಗಿ ತೋರಿಸಿಕೊಡುತ್ತಾರೆ.

'ತಾಳಮದ್ದಳೆಯ ಕ್ರಿಯಾತ್ಮಕತೆ' ಎಂಬುದು, ಈ ರಂಗದ ಮೌಲಿಕತೆಯನ್ನು ಮತ್ತಷ್ಟು ವಿಶದೀಕರಿಸುತ್ತದೆ. ಗತಿಶೀಲತೆ, ಸೃಷ್ಟಿಶೀಲತೆಗಳಿಂದಲೂ ತಾತ್ವಿಕತೆಯ ಮಿಶ್ರಣ – ಘರ್ಷಣೆಗಳಿಂದಲೂ ತಾಳಮದ್ದಳೆಯ ಕಲೆಗಾರಿಕೆ ಹೇಗೆ ಮೂರ್ತರೂಪವನ್ನು ಪಡೆಯುತ್ತದೆಂದು ಇಲ್ಲಿ ನಿರೂಪಿತವಾಗಿದೆ. ಯಕ್ಷಗಾನ ಪ್ರಸಂಗಕಾವ್ಯದ ನಾಟಕೀಯ, ಭಾವನಾತ್ಮಕ, ಸಾಂಸ್ಕೃತಿಕ ಕ್ರಿಯಾತ್ಮಕತೆಯ ವಿವಿಧ ವಿನ್ಯಾಸಗಳನ್ನು ಇಲ್ಲಿ ಗಮನಿಸಲಾಗಿದೆ ಯಲ್ಲದೆ, ತಾಳಮದ್ದಳೆಯು ಸಾಧಿಸುವ 'ಸಂಸ್ಕೃತಿ ಪಾಕ'ದ ಅನನ್ಯತೆಯನ್ನು ನಿರ್ವಚಿಸಲಾಗಿದೆ. ತುಂಬ ಮೌಲಿಕವಾದ ವಿವೇಚನೆ ಇದು.

'ಯಕ್ಷಗಾನದ ವಾಚಿಕಾಭಿನಯ, ಅಭಿವ್ಯಕ್ತಿ ಮತ್ತು ತಂತ್ರ' ಎಂಬ ಲೇಖನದಲ್ಲಿ ಯಕ್ಷಗಾನ ಆಟ ಮತ್ತು ಕೂಟ(ತಾಳಮದ್ದಳೆ)ಗಳಲ್ಲಿ ಪ್ರಯುಕ್ತವಾಗುವ ಮಾತುಗಾರಿಕೆಯ ರೂಪುಗಳನ್ನು ಸೋದಾಹರಣವಾಗಿ ಪರಿಶೀಲಿಸಲಾಗಿದೆ. ಪ್ರಸಂಗ ಪದ್ಯ, ಪಾತ್ರೋಚಿತವಾದ ಅರ್ಥದ ಬೆಳವಣಿಗೆ, ರಂಗಕ್ರಿಯೆ ಇತ್ಯಾದಿಗಳ ಹೆಣಿಗೆಯನ್ನು ಲಕ್ಷಿಸುವುದರೊಂದಿಗೆ, ಅರ್ಥಗಾರಿಕೆಯು ಕೇವಲ ಅನುವಾದ ಕ್ರಿಯೆಯಾಗಿರದೆ ಅದು ಪ್ರಸಂಗವನ್ನಾಧರಿಸಿದ ಪ್ರತಿಕಾವ್ಯ ಸೃಷ್ಟಿ, ಆಶುನಾಟಕ ರಚನೆ ಎಂಬುದನ್ನು ಸ್ಥಾಪಿಸಲಾಗಿದೆ. ಧರ್ಮ, ಸಂಸ್ಕೃತಿಗಳ ಇತಿಹಾಸದ ಜೀಸು ಅರ್ಥಪೂರ್ಣವಾದ ಅರ್ಥಗಾರಿಕೆಯಲ್ಲಿ ತೋರಿಬರುತ್ತವೆಂಬುದನ್ನು ಲೇಖಕರು ಎತ್ತಿ ತೋರಿಸುತ್ತಾರೆ.

ಯಕ್ಷಗಾನ ಕಲೆಯ ಸಂದರ್ಭದಲ್ಲಿ, ವಿಮರ್ಶೆಯ ಸ್ವರೂಪ ವಿವೇಚನೆಯನ್ನು ಮಾಡುವುದು ಸಕಾಲಿಕವಾಗಿದೆ. ಕನ್ನಡ ಸಾಹಿತ್ಯದ ಇತರ ಪ್ರಕಾರಗಳ ಬಗೆಗೆ ನಡೆದಷ್ಟು ವಿಮರ್ಶೆ ಯಕ್ಷಗಾನದ ವಿಷಯದಲ್ಲಿ ನಡೆದಿರದಿದ್ದರೂ, ಈ ದಿಸೆಯಲ್ಲಿ ಪ್ರಾಮಾಣಿಕ ಪ್ರಯತ್ನಗಳಾಗಿವೆ. 'ಯಕ್ಷಗಾನ ವಿಮರ್ಶೆಯ ನೆಲೆಗಳು' ಎಂಬ ಲೇಖನ ಈ ಸರಣಿಗೆ ಸೇರುವ ಒಂದು ಗಟ್ಟಿಯಾದ ಲೇಖನವಾಗಿದೆ. ಇದರಲ್ಲಿ ಲೇಖಕರು ಆಧುನಿಕ ವಿಮರ್ಶಾ ಶಾಸ್ತ್ರದ ಸೂತ್ರಗಳೊಂದಿಗೆ ತಮ್ಮದೇ ಆದ ವಿಮರ್ಶೆಯ ನೆಲೆಗಳಿಂದಲೂ ವಿವೇಚನೆ ನಡೆಸುತ್ತಾರೆ. ಕಲೆಯ ಮೂಲಭೂತ ಅಂಶಗಳನ್ನು ಚರ್ಚಿಸಿ ವಿಮರ್ಶೆಗೆ ದೃಢವಾದ ಅಡಿಗಟ್ಟನ್ನು ಬಲಿದು ವಿಷಯಗಳನ್ನು ವ್ಯವಸ್ಥಿತವಾಗಿ ಅಚ್ಚುಕಟ್ಟಾಗಿ ಮುಂದಿಡುತ್ತಾರೆ. ವಿಮರ್ಶೆಯ ಎಲ್ಲಾ ಆಯಾಮಗಳನ್ನು ಸೂಕ್ಷ್ಮವಾಗಿ ಚರ್ಚಿಸುತ್ತಾರೆ. ಯಕ್ಷಗಾನ ವಿಮರ್ಶಾ ಪರಂಪರೆಯನ್ನು ಪರಿಶೀಲಿಸುತ್ತಾರೆ. ವಿಮರ್ಶಕನಿಗಿರಬೇಕಾದ ನಿರ್ದಿಷ್ಟ ಗುಣಗಳನ್ನು ನಿರ್ದೇಶಿಸುತ್ತಾರೆ.

ಸಾರತಃ ಒಂದು ರಂಗಪ್ರಕಾರವಾದ ಯಕ್ಷಗಾನ ತಾಳಮದ್ದಳೆಯು ವಾಚಿಕಾಭಿನಯ

ಪ್ರಧಾನವಾದ ಒಂದು ಸಂಕೀರ್ಣ ಆಶುನಾಟಕವಾಗಿ ರೂಪುಗೊಳ್ಳುವ ಬಗೆಯನ್ನು, ತಾಳಮದ್ದಳೆಯ ಅರ್ಥದಾರಿಯ ವ್ಯಕ್ತಿತ್ವ, ಪಾತ್ರಗಳೊಳಗಿನ ಸಂಬಂಧ, ಪಾತ್ರಧಾರಿಗಳೊಳಗಿನ ವೈಯಕ್ತಿಕ ಸಂಬಂಧಗಳು ಈ ರಂಗವ್ಯಾಪಾರವನ್ನು ಹೇಗೆ ನಿರ್ವಹಿಸುತ್ತವೆ ಎಂಬುದನ್ನು "ಅರ್ಥಗಾರಿಕೆ, ನಟ ವ್ಯಕ್ತಿ ಸಂಬಂಧ ಮತ್ತು ಪಾತ್ರಸೃಷ್ಟಿ" - ಎಂಬ ಲೇಖನ ಸಮರ್ಥವಾಗಿ ಸಾದರ ಪಡಿಸುತ್ತದೆ. 'ಅಭಿನಯವೆಂದರೆ ವ್ಯಕ್ತಿತ್ವದ ಹೊರಚಾಚುವಿಕೆ" ಎಂಬುದನ್ನು ಪುಷ್ಟೀಕರಿಸುತ್ತ, ಪ್ರದರ್ಶನ ಹೇಗೆ ಪ್ರಸಂಗ ಮೀರಿ ಬೆಳೆಯುತ್ತದೆ, ಬೆಳೆಯಬೇಕು ಎಂಬುದನ್ನು ಲೇಖಕರು ವಿಶದೀಕರಿಸುತ್ತಾರೆ. ಈ ರಂಗದ ಎಲ್ಲಾ ಧನಾತ್ಮಕ ಅಂಶಗಳನ್ನು ಸರ್ವಂಕಷವಾಗಿ ಸಮೀಕ್ಷಿಸುತ್ತ ಇದರೊಂದಿಗೆ ಬೆಳೆದುಬಂದ ಕೆಲವು 'ಪಿಡುಗು'ಗಳನ್ನು ಪ್ರಸ್ತಾವಿಸಲು ಮರೆಯುವುದಿಲ್ಲ. "ಈ ರಂಗಕ್ಕೆ ದೊಡ್ಡ ಕೊಡುಗೆಗಳನ್ನಿತ್ತ ಕಲಾವಿದರೇ ಈ ಪ್ರವೃತ್ತಿಗಳಿಗೂ ಆಚಾರ್ಯಪುರುಷರಾಗಿರುವುದು ಖೇದಕರ" ಎಂಬ ನಿಷ್ಠುರ ಸತ್ಯವನ್ನು ಪ್ರಕಟಿಸಿದ್ದು ಶ್ಲಾಘ್ಯವೇ ಆಗಿದೆ.

ಯಕ್ಷಗಾನ ಕಲಾವಿದನ 'ಅರ್ಥಪ್ರಕ್ರಿಯೆ'ಯಲ್ಲಿ ಕ್ರಿಯಾಶೀಲವಾಗುವ ಅನೇಕ ಆಕರ ಅಂಶಗಳ ವಿಷಯವನ್ನು 'ಅರ್ಥಗಾರಿಕೆ, ಆಕರ-ಪಠ್ಯ-ನಿರ್ವಹಣೆ' ಎಂಬ ಲೇಖನ ಸೂಕ್ಷ್ಮವಾಗಿ ಚರ್ಚಿಸುತ್ತದೆ. ಇಲ್ಲಿ ಆಕರವೆಂಬುದನ್ನು ಕೇವಲ ಪ್ರಸಂಗ ಪಠ್ಯ ಅಥವಾ ಕೆಲವು ಪುರಾಣ ಗ್ರಂಥಗಳಿಗಷ್ಟೇ ಸೀಮಿತಗೊಳಿಸದೆ ಕಲಾವಿದನಿಗೆ ಮುಖಾಮುಖಿಯಾಗ ತಕ್ಕ ಹಲವಾರು ವಿಚಾರ ಸನ್ನಿವೇಶಗಳನ್ನು ಗಣನೆಗೆ ತೆಗೆದುಕೊಳ್ಳುವ ಎಚ್ಚರ ಕಾಣಿಸುತ್ತದೆ. ಇಲ್ಲಿಯೂ ಸಾಕಷ್ಟು ಸಂದರ್ಭೋಚಿತ ದೃಷ್ಟಾಂತಗಳ ಪುಷ್ಟಿ ಇದೆ. ಔಚಿತ್ಯ - ವಿಚಾರ ಉದ್ದಕ್ಕೂ ಪ್ರಸ್ತಾವಿತವಾಗಿದೆ. ಅರ್ಥಗಾರಿಕೆಯ ಆಕರ ಸಾಮಗ್ರಿಯ ನಿರ್ವಹಣೆಯಲ್ಲಿ 'ಅನುಶಾಸನ-ಸಂಘರ್ಷ-ಸಮನ್ವಯ'ಗಳು ಹೇಗೆ ಸಮುಚಿತವಾಗಿ ಸಮ್ಮಿಶ್ರಿತವಾಗಿವೆ ಎಂಬುದನ್ನು ಖಚಿತೋಚಿತವಾಗಿ ವಿವೇಚಿಸಿದ್ದಾರೆ.

'ಯಕ್ಷಗಾನ ಪಠ್ಯ : ವಿವಿಧ ಹಂತಗಳು' ಎಂಬ ಚಿಕ್ಕ ಲೇಖನವು 'ರಂಗಪಠ್ಯ'ದ ಭಿನ್ನ ಭಿನ್ನ ಆಯಾಮಗಳನ್ನು ಪರಿಶೀಲಿಸಿ, ಸಂದರ್ಭೋಚಿತ ಪರಿವರ್ತನೆಯ ತತ್ವ ಮತ್ತು ಪಾಠಗಳ ಬಹುತ್ವವೇ ಕಲಾಕೃತಿಯ ಜೀವಾಳ ಎಂಬುದನ್ನು ಒತ್ತಿ ಹೇಳುತ್ತದೆ.

ಜೀವನದ ಪ್ರತಿಯೊಂದು ವಿಚಾರದಲ್ಲೂ ಭವಿಷ್ಯದ ಒಂದು ಕಲ್ಪನೆ, ಕನಸು, ನಿರೀಕ್ಷೆ ಇದ್ದೇ ಇರುತ್ತದೆ. ಯಕ್ಷಗಾನದಂಥ ಜನಪ್ರಿಯ ಕಲೆಯ ಬಗೆಗೂ ಭವಿಷ್ಯದ ಕಲ್ಪನೆ ಸಹಜವೇ. "ಇಪ್ಪತ್ತೊಂದನೆಯ ಶತಮಾನದಲ್ಲಿ ಯಕ್ಷಗಾನ : ಪ್ರಸಂಗಗಳು" ಎಂಬ ಲೇಖನವು ಯಕ್ಷಗಾನ ಪ್ರಸಂಗ ಸಾಹಿತ್ಯದ ಚರಿತ್ರೆಯ ಸ್ಥೂಲ ನೋಟದೊಂದಿಗೆ ಪ್ರಸ್ತುತ ಕಾಲದ ಜೀವನ ದರ್ಶನ ಹಾಗೂ ಭವಿಷ್ಯದ ಪ್ರಸಂಗ ರಚನೆಯ ಮುನ್ನೋಟವನ್ನೂ ಒದಗಿಸುತ್ತದೆ.

ಒಟ್ಟಿನಲ್ಲಿ ಈ ಸಂಕಲನವು ಸಂವೇದನಾಶೀಲನೂ, ಬಹುಶ್ರುತನೂ, ಕಲೆಯ ಬಗೆಗೆ ಅತೀವ ಕಾಳಜಿ ಇದ್ದವನೂ ಆದೊಬ್ಬ ಜವಾಬ್ದಾರಿಯುತ ವಿಮರ್ಶಕನ ಪ್ರೌಢವಿಚಾರ ಸಂಚಯವಾಗಿದೆ. ಉತ್ತಮ ಮೀಮಾಂಸಾ ಕೃತಿಯಾಗಿದೆ. ವಸ್ತುನಿಷ್ಠತೆಯ

ಹೆಸರಿನಲ್ಲಿ ಲೇಖಕರು ನೀರಸ ನಿರೂಪಕರಾಗುವುದಿಲ್ಲ. ಎಲ್ಲಾ ಲೇಖನಗಳಲ್ಲೂ ಸಮತೋಲನ ದೃಷ್ಟಿ ಮತ್ತು ಪ್ರಬುದ್ಧತೆ ಗೋಚರಿಸುತ್ತದೆ. ಹಲವು ಆಧುನಿಕ ವಿಮರ್ಶಾ ಗ್ರಂಥಗಳಂತೆ ಇವರ ಶೈಲಿ ಅನಾವಶ್ಯಕವಾದ ಕ್ಲಿಷ್ಟತೆಯನ್ನೂ, ಪೆಡಸುತನವನ್ನೂ ಹೊಂದಿರದೆ ಮಿತವಾದ ಪಾರಿಭಾಷಿಕ ಶಬ್ದಗಳಿಂದ ಕೂಡಿ ಆಪ್ಯಾಯಮಾನವಾಗಿದೆ.

ಗೆಳೆಯ ಡಾ. ಜೋಶಿಯವರ ಈ ಇಷ್ಟವೃತ್ತಿ ಹೀಗಿಯೇ ಸಾಗಲೆಂದೂ, ಯಕ್ಷಗಾನ ವಿಮರ್ಶಾ ದಿಗಂತವನ್ನು ವಿಸ್ತರಿಸಿದ ಈ ಕೃತಿಯು ಯಕ್ಷಗಾನ ಅಧ್ಯಯನಶೀಲರಿಗೆ ಮೆಚ್ಚುಗೆಯಾಗಲೆಂದೂ ಹಾರೈಸುತ್ತೇನೆ.

**(14-02-1998)**






ಯಕ್ಷಗಾನ ಪದಕೋಶ, 1994
ಪ್ರಾದೇಶಿಕ ಜಾನಪಕ ರಂಗಕಲೆಗಳ ಅಧ್ಯಯನ ಕೇಂದ್ರ
ಎಂ.ಜಿ.ಎಂ. ಕಾಲೇಜು, ಉಡುಪಿ

**(ದಿ) ಪ್ರೊ. ಕು.ಶಿ. ಹರಿದಾಸ ಭಟ್ಟ**

.. ಯಕ್ಷಗಾನದ ಶಾಸ್ತ್ರೀಯ ವಿವೇಚನೆಯಲ್ಲಿ ಪಳಗಿದ ವಿಮರ್ಶಕ ಮಿತ್ರ ಡಾ.ಪ್ರಭಾಕರ ಜೋಶಿಯವರ ಒಂದು ಮುಖ್ಯ ಕೃತಿ 'ಯಕ್ಷಗಾನ ಪದಕೋಶ'. ಯಕ್ಷಗಾನ ಕಲೆಯ ಸಮಗ್ರ ಪಾಂಡಿತ್ಯವನ್ನು ತನ್ನ ವ್ಯಕ್ತಿತ್ವದಲ್ಲಿ ಅನುಭವಪೂರ್ಣವಾಗಿ ಅಳವಡಿಸಿ ತನ್ನ ಉಪನ್ಯಾಸ – ಲೇಖನ – ಕಲೆಯ ಪ್ರತ್ಯಕ್ಷ ಹಾಗೂ ನಿಕಟ ದರ್ಶನಗಳಿಂದಾಗಿ ಜೋಶಿಯವರು ಈಗಾಗಲೇ ಯಕ್ಷಗಾನ ಪ್ರಪಂಚದಲ್ಲಿ ಸುಪ್ರಸಿದ್ಧರು. ಅವರ ತರ್ಕಶಕ್ತಿ, ವಾಗ್ಮಿಯತೆಯನ್ನು ಅರಿಯದವರಿಲ್ಲ. ಮೆಚ್ಚಿಕೊಳ್ಳದವರಿಲ್ಲ. ಅವರ ಮಾತಿನ ಸಮ್ಮೋಹಿನಿಗೆ ಮರುಳಾಗದವರಿಲ್ಲ..





ಕೃಷ್ಣಸಂಧಾನ–ಪ್ರಸಂಗ ಮತ್ತು ಪ್ರಯೋಗ, 1998
ಜಾನಪದ ರಂಗಗಕಲೆಗಳ ಅಧ್ಯಯನ ಕೇಂದ್ರ

## ಚಕ್ರದೃಷ್ಟಿಯ ಸಂಶೋಧನೆ

**ಪ್ರೊ ಕು.ಶಿ. ಹರಿದಾಸ್ ಭಟ್ಟ (ದಿ.)**

... 'ಕೃಷ್ಣಸಂಧಾನ : ಪ್ರಸಂಗ ಮತ್ತು ಪ್ರಯೋಗ' – ಇದು ಪ್ರಸಿದ್ಧ ಯಕ್ಷಗಾನ ಅರ್ಥದಾರಿ ಹಾಗೂ ವಿದ್ವಾಂಸ ಡಾ. ಎಂ.ಪ್ರಭಾಕರ ಜೋಶಿ ಅವರು ಮಂಗಳೂರು ವಿವಿ. ಪಿಎಚ್.ಡಿ.ಗೆ ಸಾದರಪಡಿಸಿದ ಮಹಾಪ್ರಬಂಧ. ಒಂದು ಪ್ರಸಂಗವನ್ನೇ ಕೇಂದ್ರೀಯ ಸ್ಥಾನದಲ್ಲಿರಿಸಿ ಅದರ ಸುತ್ತಲೂ ಚಕ್ರದೃಷ್ಟಿ ಬೀರುತ್ತ ಯಕ್ಷಲೋಕದ ಸಾರಸರ್ವಸ್ವವನ್ನು ಸ್ವಾರಸ್ಯಕರವಾಗಿ ವಿಶ್ಲೇಷಿಸುವ ಈ ಪ್ರಬಂಧ ಜಿಜ್ಞಾಸುಗಳಿಂದ ಆದರ ಸಮ್ಮಾನಗಳನ್ನು ಪಡೆಯುವುದರಲ್ಲಿ ಸಂದೇಹವಿಲ್ಲ. ತಾಳಮದ್ದಳೆಯನ್ನು ಒಂದು ವಿಶಿಷ್ಟ ಕಲಾಸ್ವರೂಪವನ್ನಾಗಿ ನಿರ್ಮಿಸಿದ ಹಳೆ ತಲೆಮಾರಿನ ಪೊಳಲಿ ಶಾಸ್ತ್ರಿಯವರು, ಕೆ.ಪಿ.ವೆಂಕಪ್ಪ ಶೆಟ್ಟರು, ಕುಬಣೂರು ಬಾಲಕೃಷ್ಣ ರಾಯರು, ಶಂಕರನಾರಾಯಣ ಸಾಮಗರು, ಎನ್.ಎಸ್.ಕಿಲ್ಲೆಯವರು ಹಾಗೂ ಇಂದಿಗೂ ಕಾರ್ಯನಿರತರಾಗಿರುವ ಸುಪ್ರಸಿದ್ಧ ಅರ್ಥದಾರಿಗಳಾದ ಶೇಣಿ, ಪೆರ್ಲರಂತಹ ಎಷ್ಟೋ ಎಳೆಯವರಾದರೂ ಅವರ ಜತೆಯಲ್ಲಿ ಸರಿದೊರೆಯಾಗಿ ಅರ್ಥ ಹೇಳುವ ಅಪ್ರತಿಮ ಕೌಶಲದಿಂದ ರಸಿಕರನ್ನು ಬೆರಗುಗೊಳಿಸುವ ಪ್ರತಿಭಾಶಾಲಿ ಅರ್ಥಕೋವಿದರು, ಡಾ.ಪ್ರಭಾಕರ ಜೋಶಿ. ಹೆಚ್ಚಿನ ಪಿಎಚ್.ಡಿ. ಪ್ರಬಂಧಗಳಲ್ಲಿ ಅಷ್ಟೋ ಇಷ್ಟೋ ಮೌಲಿಕ ಅನ್ವೇಷಣೆ ಏನೋ ಇರುತ್ತದೆ. ಆದರೆ ಜೋಶಿಯವರ ಅನ್ವೇಷಣೆ ಗಂಗಾಪ್ರವಾಹದಂತೆ ಸುತ್ತಿನೆಲ್ಲವನ್ನು ಒಳಗೊಂಡು ಮುನ್ನಡೆ

ಯುವುದು. ಮತ್ರವಲ್ಲದೆ ಯಕ್ಷಲೋಕದ ವಿರಾಟ್ ಜಗತ್ತಿನಲ್ಲಿ ಇನ್ನೂ ಎಂತೆಂಥ ಅನ್ವೇಷಣೆಗಳು ಸಾಧ್ಯವೆಂಬುದನ್ನು ದರ್ಶಿಸುವಂಥದ್ದಾಗಿದೆ.

ಯಕ್ಷಗಾನದಲ್ಲಿ ಕಲಾವಿದನಾಗಿ ಸ್ವತಃ ಪ್ರವೃತ್ತನಾಗಿದ್ದು, ವಿದ್ವಾಂಸನಾಗಿ ಅದರ ಅಂತರಂಗವನ್ನು ನಾನಾ ದಿಶೆಗಳಿಂದ ಅವಲೋಕಿಸುವ ಜೋಶಿಯವರಿಗೆ ಯಕ್ಷಗಾನ ಒಂದು ಸರ್ವಸಮೃದ್ಧವಾದ ಕಲೆಯಾಗಿದ್ದು ಅದರ ಅಂತಃಸ್ಸತ್ವ ಬಗೆಬಗೆಯಾಗಿ ಗ್ರಹಿಸುವಂತೆ, ಹೂವಿನ ಒಂದೊಂದು ಪಕಳೆಯನ್ನೂ ಎತ್ತಿಹಿಡಿಯುವಂತೆ ಹಾಗೂ ಕೃಷ್ಣ ಸಂಧಾನದ ಮಾರ್ಮಿಕ ಸ್ಥಾನಗಳನ್ನು ನಿಚ್ಚಳವಾಗಿ ಗುರುತಿಸುವಂತೆ ಈ ಮಹಾಪ್ರಬಂಧ ರಚನೆಗೊಂಡಿದೆ. ಯಕ್ಷಗಾನ ರಂಗಭೂಮಿಯ ಸನ್ನಿವೇಶಗಳನ್ನು ಕೂಲಂಕಷವಾಗಿ, ವಿವರಸಹಿತವಾಗಿ, ಸಮಗ್ರ ದೃಷ್ಟಿಯಿಂದ ಮೌಲ್ಯಾಂಕನ ಮಾಡುವ ಈ ಕೃತಿಯು ಶುಷ್ಕ ಪಂಡಿತನಿಂದಲೂ ಸಾಧ್ಯವಿಲ್ಲ. ಕೇವಲ ವೃತ್ತಿನಿರತ ಕಲಾವಿದನಿಂದಲೂ ಸಾಧ್ಯವಿಲ್ಲ. ಎರಡೂ ಸ್ತರದಲ್ಲಿ ಏಕಕಾಲಕ್ಕೆ ಪ್ರವರ್ತಿಸುವ ಜೋಶಿಯಂಥವರೊಬ್ಬರಿಂದಲೇ ಇದು ಸಾಧ್ಯವೆಂದು ಪ್ರಬಂಧ ಓದಿ ಮಗಿಸುವವರಿಗೆ ತಿಳಿದೀತು. ಇವರು ಯಕ್ಷಗಾನದ ಅರ್ಥಗಾರಿಕೆಯ ನಿರಂತರ ಆಸಕ್ತಿ ಪ್ರವೃತ್ತಿಗಳಿಂದಾಗಿ ಈ ಕಲೆಯನ್ನು ಆತ್ಮಸ್ಥವಾಗಿ ಮಾಡಿಕೊಂಡು, ತನ್ನ ಚೇತನದಲ್ಲಿಯೇ ಅಳವಡಿಸಿ ಅಲ್ಲಿಯ ಸೃಜನಶೀಲ ಮೌಲ್ಯಗಳನ್ನು ಬಿತ್ತರಿಸುವಲ್ಲಿ ಅಸಾಧಾರಣ ಪ್ರತಿಭೆಯನ್ನು ಪ್ರಕಟಿಸಿದ್ದು ಅರಿವಾಗುತ್ತದೆ.

ಇದನ್ನೋದಿ ರಸಪ್ರಸಂಗಗಳನ್ನು ಸವಿದು ಅರಗಿಸಿಕೊಳ್ಳುವ ಯಕ್ಷಗಾನ ಕಲಾ ರಸಿಕರು ತಮ್ಮ ಅರಿವಿನ ಮಟ್ಟವನ್ನೆತ್ತರಿಸಿಕೊಳ್ಳುವವರೆಂಬುದರಲ್ಲಿ ನನಗಾವ ಸಂದೇಹವೂ ಇಲ್ಲ.

(1–02–1998)






ಮುಡಿ, 2006
ಜಾನಪದ ರಂಗಕಲೆಗಳ ಅಧ್ಯಯನ ಕೇಂದ್ರ, ಉಡುಪಿ

## ಕಲೆಯ ಮುನ್ನಡೆಗೆ ಮಾರ್ಗದರ್ಶಿ ನೋಟ

**ಡಾ. ಪುರುಷೋತ್ತಮ ಬಿಳಿಮಲೆ**

ಯಕ್ಷಗಾನದ ಕಲೆಯನ್ನು ಭಾಷೆಯಲ್ಲಿ ವಿವರಿಸುವ ಪ್ರಯತ್ನಗಳು ಮತ್ತೆ ಮತ್ತೆ ನಡೆಯುತ್ತಲೇ ಇವೆ. ಇಂಥ ಪ್ರಯತ್ನಗಳ ಮುಂಚೂಣಿಯಲ್ಲಿ ಇರುವವರು ಡಾ. ಎಂ. ಪ್ರಭಾಕರ ಜೋಶಿ. 'ಕೃಷ್ಣ ಸಂಧಾನ'ದಂಥ ಅನನ್ಯ ಪ್ರಸಂಗವೊಂದರ ಸೂಕ್ಷ್ಮ ಅಧ್ಯಯನ ನಡೆಸಿದ ಅವರು ಕೇದಗೆ, ಜಾಗರ, ಮಾರುಮಾಲೆ, ವಾಗರ್ಥ, ಯಕ್ಷಗಾನ ಪದಕೋಶದಂತಹ ಮಹತ್ವದ ಕೃತಿಗಳ ಮೂಲಕ ಯಕ್ಷಗಾನದ ಬಗೆಗೂ ನಮ್ಮ ಅರಿವನ್ನು ಹೆಚ್ಚಿಸಿದ್ದಾರೆ, ಮಾತ್ರವಲ್ಲ ಯಕ್ಷಗಾನದ ಕುರಿತಾದ ಬರಹಗಳು ಹೇಗಿರಬೇಕು ಎಂಬ ಕುರಿತು ಒಂದು ರೀತಿಯ ಚೌಕಟ್ಟನ್ನು ಬರಹಗಾರರಿಗೆ ಒದಗಿಸಿದ್ದಾರೆ. ಸ್ವತಃ ಕಲಾವಿದರಾಗಿರುವ ಜೋಶಿಯವರಿಗೆ ಶೈಕ್ಷಣಿಕ ವಿಷಯಗಳ ಮೇಲೂ ಆಳವಾದ ಹಿಡಿತ ಇರುವುದರಿಂದಾಗಿ ಅವರ ಬರಹಗಳಿಗೆ ಒಂದು ಬಗೆಯ ವಿಶಿಷ್ಟತೆ ಪ್ರಾಪ್ತಿಸಿದೆ.

ಪ್ರಸ್ತುತ ಪ್ರಬಂಧ ಸಂಕಲನದ ಇಪ್ಪತ್ತನಾಲ್ಕು ಲೇಖನಗಳನ್ನು ಇಡಿಯಾಗಿ ಗ್ರಹಿಸಿದರೆ ಅದರಲ್ಲಿ ಒಟ್ಟು ಐದು ಬಗೆಯ ಲೇಖನಗಳಿರುವುದನ್ನು ಗ್ರಹಿಸಬಹುದು. ಅವುಗಳೆಂದರೆ:

1. ಯಕ್ಷಗಾನದ 'ಭಾಷೆ'ಯ ಕುರಿತಾದುವು. ಕಲಾತತ್ವ ಸಂಬಂಧಿಯಾದವು.
2. ಆಧುನಿಕತೆ ಮತ್ತು ಯಕ್ಷಗಾನದ ನಡುವಣ ಸಂಬಂಧವನ್ನು ಪರಿಶೀಲಿಸುವಂಥವು.

3. ಯಕ್ಷಗಾನದ ಪ್ರದರ್ಶನಗಳ ಬಗೆಗಿನ ಲೇಖನಗಳು.

4. ಅರ್ಥಗಾರಿಕೆಯ ಪರಿಶೀಲನೆ ಮತ್ತು

5. ಸಂಶೋಧನಾತ್ಮಕ ಹಾಗೂ ಯಕ್ಷಗಾನವನ್ನು ಇತರ ಕಲೆಗಳೊಂದಿಗೆ ಹೋಲಿಸುವಂತಹ ತೌಲನಿಕ ಬರಹಗಳು.

ಮೇಲಿನ ಐದು ಅಂಶಗಳು ಬೇರೆ ಬೇರೆ ಲೇಖನಗಳಲ್ಲಿ ಆಗಾಗ್ಗೆ ಪ್ರತ್ಯಕ್ಷವಾಗುತ್ತ ಡಾ. ಜೋಶಿಯವರು ಯಕ್ಷಗಾನವನ್ನು ಗ್ರಹಿಸಿದ ಬಗೆಗೆ ಓದುಗರಿಗೆ ತಿಳುವಳಿಕೆ ಮೂಡಿಸುತ್ತವೆ.

ಯಕ್ಷಗಾನದ ಭಾಷೆಯ ಕುರಿತಾದ ಮುಖ್ಯ ಚರ್ಚೆಗಳನ್ನು ಯಕ್ಷಗಾನ ಕಲಾಭಾಷೆ, ಕಲೆ, ಸ್ವತ್ವ, ಒಡ್ಡೋಲಗದ ವೈಭವ, ಪ್ರಸಂಗ ಮತ್ತು ಅರ್ಥ ಹಾಗೂ ಯಕ್ಷಗಾನೋಚಿತ ಶೈಲಿ ಮತ್ತು ಮುಕ್ತತೆ – ಈ ಲೇಖನಗಳಲ್ಲಿ ನಾವು ವಿಶೇಷವಾಗಿ ಕಾಣಬಹುದು. ಇದರಲ್ಲಿ ಡಾ. ಜೋಶಿಯವರು ಯಕ್ಷಗಾನದ ಅನನ್ಯತೆಯನ್ನು ಒಪ್ಪಿಕೊಂಡು ಅದನ್ನು ಸ್ಥಾಪಿಸುತ್ತಾರೆ. ಅವರ ಮಾತುಗಳು ಹೀಗಿವೆ : "ಯಕ್ಷಗಾನದ ವೇಷ, ಮಾತಿನ ರೀತಿ ನಾಟಕದ ಹಾಗಲ್ಲ. ಸಿನೆಮಾದ ಹಾಗೆ ಅಲ್ಲ. ನಮ್ಮ ನಿತ್ಯ ಜೀವನದ ಹಾಗೆ ಅಲ್ಲ. ಅದೇ ಅದರ ಪ್ರತ್ಯೇಕತೆ. ಅದರ 'ಭಾಷಾ ವಿಶೇಷ'. ಇದನ್ನು ತಿಳಿದು ಅರ್ಥವಿಸಿದರೆ ಮಾತ್ರ ನಮಗೆ ಆ ಕಲೆಯನ್ನು ಸವಿಯಲು, ತಿಳಿಯಲು, ಸರಿತಪ್ಪು ಭಾವಿಸಲು ಸಾಧ್ಯ." (ಯಕ್ಷಗಾನದ ಕಲಾಭಾಷೆ, ಪುಟ 2)

ಕಲಾ ಪ್ರಕಾರವೊಂದರ ಸ್ವಭಾವ ವಿಶೇಷದ ಬಗ್ಗೆ ಅಪಾರ ಗೌರವ ಹೊಂದಿರುವ ಕಲಾ ವಿಮರ್ಶಕರಾಗಿ ಡಾ.ಜೋಶಿಯವರು ರೂಪುಗೊಂಡಿರುವುದರಿಂದ ಅವರ ಬರಹಗಳಿಗೆ ಅಧಿಕೃತತೆ ವ್ಯಾಪ್ತಿಸಿದೆ. ಇಲ್ಲಿ ಗಮನಿಸಬೇಕಾದ ಮುಖ್ಯ ಸಂಗತಿ ಎಂದರೆ, ಜೋಶಿಯವರು ಯಕ್ಷಗಾನದ ಭಾಷೆಯನ್ನು ಒಪ್ಪಿಕೊಂಡು ಕೂಡಾ ಅದನ್ನು 'ಸ್ಥಾವರ' ಅಥವಾ 'ಸ್ಥಿರೀಕೃತ' ಪಠ್ಯವಾಗಿ ನೋಡದಿರುವುದು. ಯಕ್ಷಗಾನದ ಚಲನಶೀಲತೆಯನ್ನು ಅವರು ಒಪ್ಪಿಕೊಳ್ಳುತ್ತಾರೆ. ಅವರ ಖಚಿತ ನಿಲುವು ಇಂತಿದೆ – "ಯಕ್ಷಗಾನ ಕಲಾ ವಿಧಾನ ಬೆಳೆದದ್ದು, ತಿದ್ದಿದ್ದು, ಅದನ್ನು ಇನ್ನೂ ಬೆಳೆಸಬಾರದೆ? ತಿದ್ದಬಾರದೇ? ಎನ್ನಬಹುದು. ನಿಜ, ತಿದ್ದಬಹುದು, ಬೆಳೆಸಬಹುದು. ಅದಕ್ಕೆ ಅವಕಾಶವೂ ಇದೆ. ಆದರೆ ಹೀಗೆ ಮಾಡಬೇಕಾದರೆ ಅದರ 'ಭಾಷೆ'ಯ ಹಿಡಿತಬೇಕು. ಅದರಲ್ಲಿ ಶ್ರದ್ಧೆ ಬೇಕು. ಪ್ರತಿಯೊಂದು ಕಲೆಯ ಸೌಂದರ್ಯ ನಿರ್ಣಯಕ್ಕೂ ಅದರದ್ದೇ ಆದ ನಿಕಷಗಳಿವೆ, ಮಾನದಂಡಗಳಿವೆ. ಈ ನಿಕಷಗಳ, ಮಾನದಂಡಗಳ ತಿಳಿವನ್ನೇ ಸೌಂದರ್ಯ ಪ್ರಜ್ಞೆ ಎನ್ನುತ್ತೇವೆ. ಸೌಂದರ್ಯ ಪ್ರಜ್ಞೆ 'ಭಾಷಾ' ಪರಿಜ್ಞಾನ ಇದ್ದಾಗ, ಇದ್ದವರಿಂದ, ಕಲೆಯ ಬೆಳವಣಿಗೆ, ಪರಿಷ್ಕಾರ ಸಾಧ್ಯವಾಗುತ್ತದೆ. ಯಶಸ್ವಿಯಾಗುತ್ತದೆ." (ಪುಟ 6)

ಈ ಎಚ್ಚರವನ್ನು ಲೇಖಕರು ಉದ್ದಕ್ಕೂ ಕಾಪಾಡಿಕೊಂಡು ಬರುತ್ತಾರೆ. "ವ್ಯಾಕರಣವು ಕಾವ್ಯವಲ್ಲ, ವ್ಯಾಕರಣ ಬದ್ಧತೆ ಒಂದು ಒಳ್ಳೆಯ ಕಾವ್ಯದ ಮಾನದಂಡವಾಗದು ನಿಜ. ಆದರೆ ಸುಮ್ಮಸುಮ್ಮನೆ ವ್ಯಾಕರಣನ್ನು ಭಂಗಿಸಿ ಬರೆಯುವುದು ಸುಧಾರಣೆ ಅಲ್ಲ

ಹೇಗೋ ಹಾಗೆಯೇ ಕಲೆಯ ಬಗೆಗೆ ಕೂಡಾ." (ಪುಟ 38). ಹೀಗೆ ಡಾ.ಜೋಶಿಯವರು ಯಕ್ಷಗಾನದ ಅನನ್ಯತೆಯನ್ನು ಒಪ್ಪಿಕೊಂಡು, ಅದರ ಚಲನಶೀಲತೆಯನ್ನು ಗೌರವಿಸಿಕೊಂಡು, ಬದಲಾವಣೆಯನ್ನು ವಿಮರ್ಶಾತ್ಮಕವಾದ, ಆಧುನಿಕ ಪ್ರಜ್ಞೆಯ ಎಚ್ಚರದಲ್ಲಿ ಪರಿಶೀಲಿಸುತ್ತಾರೆ. ಅವರ ಬರಹಗಳಿಗೆ ಗೌರವ ತಂದುಕೊಡುವ ವಿಚಾರಗಳು ಇದಾಗಿವೆ.

ಆಧುನಿಕತೆಯು ಯಕ್ಷಗಾನದ ಕಲೆಯ ಮೇಲೆ ಬೀರುವ ಪರಿಣಾಮವನ್ನು ಒಂದು ಬಗೆಯ ಸಾಂಸ್ಕೃತಿಕ ಎಚ್ಚರದಲ್ಲಿ ಮತ್ತು ಜವಾಬ್ದಾರಿಯಲ್ಲಿ ಪರಿಶೀಲಿಸುತ್ತಾ ಹೋಗುವುದು ಜೋಶಿಯವರ ಎರಡನೇ ಕೆಲಸ. ಈ ಸಂಕಲನದ – ಯಕ್ಷಗಾನದ ಸವಾಲುಗಳು ಮತ್ತು ಪ್ರತಿಫಲನಗಳು, ಯಕ್ಷಗಾನದ ಸಮೃದ್ಧಿ ಮತ್ತು ಗೊಂದಲ, ಕಲೆಯ ಮೂಲಕ ಶೋಧನೆಯ ವಿಧಾನ, ಹರಕೆ ಬಯಲಾಟ ಮತ್ತು ಕಲಾರೂಪ, ಪ್ರಾಯೋಗಿಕತೆ ಹಲವು ಮುಖ, ಕಲೆ ಮತ್ತು ಆಧುನಿಕ ಸ್ಪಂದನ, ವಸ್ತು ಸಾಂಗತ್ಯ–ರೂಪ ನಿಷ್ಠೆ. ಯಕ್ಷಗಾನದ ಪತ್ರಿಕೋದ್ಯಮಕ್ಕೊಂದು ಕಾರ್ಯಸೂಚಿ ಮತ್ತು ಅಮೃತ ಸೋಮೇಶ್ವರರ ಯಕ್ಷಗಾನ ಕೃತಿ ಸಂಪುಟ – ಮೊದಲಾದ ಲೇಖನಗಳಲ್ಲಿ ಡಾ.ಜೋಶಿ ಅವರು ಆಧುನಿಕತೆಗೆ ಮುಖಾಮುಖಿಯಾಗಿದ್ದಾರೆ.

ಪಾರಂಪರಿಕ ಶೈಲೀಕೃತ ರಂಗಭೂಮಿಯು ತನ್ನದೇ ಆದ 'ಭಾಷೆ'ಯೊಂದನ್ನು ಹೊಂದಿದ್ದು, ಆ ಭಾಷೆಯನ್ನು 'ಆಧುನಿಕತೆ' ಎಂಬುದು ಹೀಗೆ ಪರಿವರ್ತಿಸುತ್ತಿದೆ ಎಂಬುದನ್ನು ಸ್ವಲ್ಪ ಆತಂಕದಲ್ಲಿಯೇ ಗಮನಿಸುತ್ತಾರೆ. ಒಟ್ಟಾರೆಯಾಗಿ ಕಾಲಕಾಲಕ್ಕೆ ಕಲಾರೂಪವೊಂದು ಬದಲಾಗುವುದನ್ನು ಜೋಶಿಯವರು ಒಪ್ಪಿಕೊಳ್ಳುತ್ತಾರೆ – "ನಮ್ಮ ಪಾರಂಪರಿಕ ರಂಗಭೂಮಿಯ ಹೆಗ್ಗುರುತೆನ್ನಬಹುದಾದ ಯಕ್ಷಗಾನವು ಕಾಲಕಾಲಕ್ಕೆ ಸವಾಲುಗಳನ್ನು ಇದಿರಿಸುತ್ತಾ ಅವುಗಳನ್ನು ಪರಿಹರಿಸುತ್ತ ತನ್ನನ್ನು ತಾನು ಪುನರ್ರಚನೆಗೊಳಪಡಿಸುತ್ತ, ತಾನು ತಾನಾಗಿಯೇ ಇರುತ್ತ, ನವೀನವಾಗುತ್ತಲೂ ಸಾಗಿ ಬಂದಿದೆ. ಇದೊಂದು ರೋಚಕವಾದ ಕಥೆ." (ಪುಟ 10).

ಇಷ್ಟಿದ್ದರೂ ಆಧುನಿಕತೆಯು ಯಕ್ಷಗಾನವನ್ನು ಹಾಳು ಮಾಡುತ್ತಲಿದೆ ಎಂಬ ಕಡೆಗೆ ಜೋಶಿಯವರ ಒಲವು ಜಾಸ್ತಿ. "ಬಲು ವೇಗದ ಬದಲಿನ ಹುಯಿಲಿನಲ್ಲಿ ನಾವೆಲ್ಲ ಇದ್ದೇವೆ. ಕಲೆಗಳ ಮುಂದೆ ಬರುವ ಮುಖಾಮುಖಿಗಳು ಬಹು ಸ್ವಾರಸ್ಯಕರ ಮತ್ತು ವಿಚಿತ್ರ. ಈ ಗಾಳಿಗೆ ಹೊಟ್ಟನೊಡನೆ ಕಾಳು, ಗಿಡ ಮಾತ್ರವಲ್ಲ ನೆಲವೇ ಹಾರಿ ಹೋಗುವ ಕಾಲವಿದು" (ಪುಟ 22) ಎಂದವರು ಭಾವಿಸುತ್ತಾರೆ. ಜೊತೆಗೆ ಆಧುನಿಕತೆ ಮತ್ತು ಪರಂಪರೆಯ ಕುರಿತು ಪ್ರೌಢವಾದ ಒಂದು ನಿಲುವಿಗೂ ಅವರು ಬರುತ್ತಾರೆ. "ಇದರ ಫಲಿತಾಂಶ ಎರಡು ರೀತಿಯಲ್ಲಾಗಬಹುದು. ಒಂದು – ಈ ಹೊಡೆತಕ್ಕೆ ಸಿಕ್ಕಿ ನಮ್ಮ ಕಲೆಗಳು ದಿಕ್ಕಾಪಾಲಾಗಿ ಛಿದ್ರವಾಗಿ, ವಿಕೃತವಾಗಿ ಅವಸಾನಗೊಳ್ಳಬಹುದು. ಹೀಗಾದರೆ ಅದು ದೊಡ್ಡ ಸಾಂಸ್ಕೃತಿಕ ನಷ್ಟವಾಗುತ್ತದೆ. ಎರಡು – ಹೊಡೆತದಿಂದ ಪಾಠ ಕಲಿತು, ಪಂಥಾಹ್ವಾನವನ್ನು ಸ್ವೀಕರಿಸಿ, ಕಲೆಯು ಶುದ್ಧೀಕರಣ–ಉನ್ನತೀಕರಣ–ಆಧುನಿಕೀಕರಣದ ಕಾರ್ಯವನ್ನು ಹಟದಿಂದ ಕೈಗೊಂಡು ಕಲೆಯ ಗಂಭಿರವಾದ

ಸುಧಾರಣೆ ಮತ್ತು ಪುನರಚನೆ ಆಗಬಹುದು". (ಪುಟ 64)

ಕಲೆಯೊಂದರ ಮೇಲೆ ಆಧುನಿಕತೆಯು ಬೀರುವ ಪರಿಣಾಮದ ಬಗ್ಗೆ ನಡೆಸುವ ಚರ್ಚೆಗಳೆಲ್ಲವೂ ಬಹುಮಟ್ಟಿಗೆ ಹೀಗೇ ಇರುತ್ತವೆ. ಈ ಚರ್ಚೆಗಳಲ್ಲಿ ಕಲೆಯ ಬಗ್ಗೆ ಅಪಾರ ಗೌರವ ಪ್ರಕಟವಾಗುತ್ತದೆ. ಮತ್ತು ಆಧುನಿಕತೆಯ ಆಗಮನವನ್ನು ತಡೆಯಲಾಗದ ಅಸಹಾಯಕತೆಯೂ ಇರುತ್ತದೆ. ಆಧುನಿಕ ಮೌಲ್ಯಗಳನ್ನು ಪರಂಪರೆಯ ಕಲೆಗಳ 'ಭಾಷೆ' ಮೂಲಕ ವಿಶ್ಲೇಷಿಸುವ, ಮೌಲ್ಯಮಾಪನ ಮಾಡುವ ಕೆಲಸ ಮಾತ್ರ ಇದುವರೆಗೆ ನಡೆದಿಲ್ಲ. ಯಕ್ಷಗಾನದ ಮೂಲಕ ಆಧುನಿಕತೆಯನ್ನೇ ವಿಶ್ಲೇಷಿಸುವ ಒಂದು ಪ್ರಯತ್ನವನ್ನು ಯಾರಾದರೂ ಗಂಭೀರವಾಗಿ ಮಾಡಬಹುದಾಗಿದೆ. ಅದಕ್ಕೆ ಬೇಕಾದ ದ್ರವ್ಯವನ್ನು ಇಲ್ಲಿನ ಲೇಖನಗಳು ನೀಡುತ್ತವೆ.

ಡಾ. ಜೋಶಿಯವರ ಮೂರನೇ ಆಸಕ್ತಿಯು ಯಕ್ಷಗಾನದ 'ಪ್ರದರ್ಶನ'ಕ್ಕೆ ಸಂಬಂಧಿಸಿದೆ. ಯಕ್ಷಗಾನ ಪ್ರಸಂಗ ಮತ್ತು ಪ್ರದರ್ಶನ; ಒಡ್ಡೋಲಗ ವೈಭವ, ಕಾಲಮಿತಿ ಮತ್ತು ಪರಂಪರೆ.. ಮತ್ತಿತರ ಲೇಖನಗಳಲ್ಲಿ ಅವರು ಯಕ್ಷಗಾನ ಪ್ರದರ್ಶನ ಹೇಗಿರಬೇಕು, ಹೇಗಿದ್ದರೆ ಚೆನ್ನ ಎಂಬಿತ್ಯಾದಿ ವಿಷಯಗಳ ಬಗ್ಗೆ ಬರೆಯುತ್ತಾರೆ. ಯಕ್ಷಗಾನದ ಪ್ರತಿಯೊಂದು ಪ್ರದರ್ಶನವೂ ಒಂದು ಪ್ರತ್ಯೇಕ ಹಾಗೂ ಸ್ವತಂತ್ರ ಪಠ್ಯ ಎಂಬುದನ್ನು ಗುರುತಿಸುವ ಅವರು ಯಕ್ಷಗಾನದ ಪ್ರದರ್ಶನ ಸಂದರ್ಭವು ನಿರ್ಣಾಯಕ ಎಂಬುದರತ್ತ ಗಮನ ಸೆಳೆಯುತ್ತಾರೆ – "ಆ ದಿನದ ಸಂದರ್ಭ, ಅಂದರೆ ಕಾಲ, ಕಾಲಮಿತಿ, ಸ್ಥಳ, ಪರಿಸರ, ಅಂದಂದಿನ ಘಟನೆಗಳು, ಪ್ರೇಕ್ಷಕ ಸ್ವರೂಪ, ಪ್ರೇಕ್ಷಕರ ಪ್ರತಿಕ್ರಿಯೆಗಳು ಪ್ರದರ್ಶನವನ್ನು ಪ್ರಭಾವಿಸುತ್ತದೆ. ಅದೇ ರೀತಿ ಕಲಾವಿದರ ಹೆಸರು, ಊರಿನ ಹೆಸರುಗಳು ಸಾಮಾಜಿಕ ಘಟನೆಗಳ ಧ್ವನಿ, ರಾಜಕೀಯ ಶ್ಲೇಷೆ ಮೊದಲಾದ ಅಂಶಗಳೂ ಆಶುರಂಗಕ್ಕೆ ಸಹಜವಾದ ವ್ಯಕ್ತಿ ವಿನೋದಗಳೂ ಪ್ರದರ್ಶನದಲ್ಲಿ ಹಾದು ಹೋಗುತ್ತವೆ." (ಪುಟ 51) ಜಾನಪದ ಅಧ್ಯಯನ ಕ್ಷೇತ್ರದಲ್ಲಿ ಇಂದಿಗೂ ಜನಪ್ರಿಯವಾಗಿರುವ 'ಸಂದರ್ಭ ಸಿದ್ಧಾಂತ'ದ ಪ್ರಯೋಜನವನ್ನು ಲೇಖಕರು ಇಲ್ಲಿ ಪಡೆದುಕೊಂಡಿದ್ದಾರೆ.

ಸ್ವತಃ ತಾಳಮದ್ದಲೆಯ ಪ್ರಮುಖ ಅರ್ಥದಾರಿಯಾಗಿರುವ ಪ್ರಭಾಕರ ಜೋಶಿಯವರು ಅರ್ಥಗಾರಿಕೆಯ ಬಗ್ಗೆ ಅಲ್ಲಲ್ಲಿ ಮೌಲಿಕ ಮಾತುಗಳನ್ನು ಹೇಳಿದ್ದಾರೆ. ಯಕ್ಷಗಾನ – ವಾಚಿಕಾಭಿನಯ ಪ್ರಧಾನವೇ? ಯಕ್ಷಗಾನದಲ್ಲಿ ಭಾಷಾ ಪ್ರಯೋಗ, ಪ್ರಸಂಗ ಮತ್ತು ಅರ್ಥ, ಭೀಷ್ಮ ವಿಜಯ ಅರ್ಥ ಮತ್ತು ಅರ್ಥೈಸುವಿಕೆ, ಅರ್ಥದಲ್ಲಿ ಪುನರಾವರ್ತನೆ – ಮೊದಲಾದ ಲೇಖನಗಳಲ್ಲಿ ಅವರು ಯಕ್ಷಗಾನದಲ್ಲಿ ಅರ್ಥಗಾರಿಕೆ ಸಾಗಬೇಕಾದ ರೀತಿಯ ಬಗ್ಗೆ ವಿವೇಚನೆ, ವಿಶ್ಲೇಷಣೆ ನಡೆಸಿದ್ದಾರೆ. ಯಕ್ಷಗಾನದ ಅರ್ಥಗಾರಿಕೆಯೊಂದು ಅಸಾಮಾನ್ಯವಾದ ಅದ್ಭುತ ಲೋಕ. ರಂಗದಲ್ಲಿ ಅದು ಅರಳಿಕೊಳ್ಳುವ ಬಗೆ ಅದ್ಭುತವಾದುದು. ಈ ಅದ್ಭುತ ಲೋಕದ ಬಗ್ಗೆ ಜೋಶಿಯವರು ಬೇರೆಡೆಗಳಲ್ಲಿ ಸಾಕಷ್ಟು ಬರೆದಿದ್ದು, ಈ ಸಂಪುಟದಲ್ಲಿ ಅದರ ಔಚಿತ್ಯದ ಬಗ್ಗೆ ಹೆಚ್ಚು ಒತ್ತು ನೀಡಿದ್ದಾರೆ. "ಹೀಗೆ ಪ್ರಸಂಗ, ಆಕರ ಕಾವ್ಯಗಳೊಂದಿಗೆ ಪಾತ್ರಧಾರಿಯ ಅಧ್ಯಯನ–ಪರಿಶೀಲನೆಗೊದಗಿದ

ಕಾವ್ಯಗಳು, ಸಾಹಿತ್ಯ, ಅನುಭವ, ಕಲ್ಪನೆ ಮೊದಲಾದ ಅನೇಕಾನೇಕ ರೂಪದ ಸಾಮಗ್ರಿಯನ್ನು ಅರ್ಥದಲ್ಲಿ ತಂದು ಹೊಂದಿಸಿ ಅವೆಲ್ಲವನ್ನೂ ಪ್ರಸಂಗದ ಹಂದರದಲ್ಲಿ ಸಕಾರಣವಾಗಿ ಹೊಂದಿಸುವುದು ಅರ್ಥಗಾರಿಕೆಯ ರಚನಾ ರಹಸ್ಯ." (ಪುಟ 109) ಎಂಬಂತಹ ಸೂತ್ರ ರೂಪದ ಮಾತುಗಳನ್ನು ಇಲ್ಲಿ ಹೇಳಿದ್ದಾರೆ.

'ಭೀಷ್ಮವಿಜಯ' ಪ್ರಸಂಗದಲ್ಲಿನ ಪದಗಳಿಗೆ ಅರ್ಥ ಹೇಳುವ ವಿಧಾನ ಹಾಗೂ ಅಲ್ಲಿನ ಪದಗಳನ್ನು ಅರ್ಥೈಸುವ ವಿಧಾನದ ಕುರಿತಾದ ಜೋಶಿಯವರ ಪುಟ್ಟ ಟಿಪ್ಪಣಿಯು ಅಪಾರವಾದ ಒಳನೋಟಗಳನ್ನು ಉಳ್ಳದ್ದಾಗಿದೆ. "ವಾದದ ನಿರೀಕ್ಷೆಯೆಂಬುದು ಕೃತಕ ಮತ್ತು ಕಾಲಿಕ. ನೈಜವಲ್ಲ, ನ್ಯಾಯವಾದುದಲ್ಲ" ಎಂಬ ಅವರ ತೀರ್ಮಾನವು ಮನೋಜ್ಞವಾದುದು. ಹಾಗೆಯೇ 'ಅರ್ಥದಲ್ಲಿ ಪುನರಾವರ್ತನೆ'ಯ ಕುರಿತು ಬರೆಯುತ್ತ, "ಪುನರಾವರ್ತನೆಯ ಸಂದರ್ಭದಲ್ಲಿ ಕಲಾವಿದರು ಎಚ್ಚರವಹಿಸಿ ವಸ್ತು ನಿರ್ವಹಣೆ ಮಾಡಬೇಕು. ಅನಿವಾರ್ಯದಲ್ಲದಿರುವಲ್ಲಿ ಪೂರ್ವ ಕತೆಯನ್ನು ಲಂಬಿಸಬಾರದು. ಸಂಕ್ಷೇಪಗೊಳಿಸಬೇಕು. ಅಲ್ಲದೆ ಅದನ್ನು ಹೇಳುವಲ್ಲಿ ಹೇಳುವ ವಿಧಾನ, ವಿವೇಚನೆಯ ಕೋನ ಮತ್ತು ದಾರಿಗಳಲ್ಲಿ ವೈವಿಧ್ಯವನ್ನು ತರಬೇಕು" ಎಂದು ಮಾತುಗಳು ಅರ್ಥಗಾರಿಕೆಗೆ ಹೊಸ ಹಾದಿಯನ್ನು ತೋರಿಸಬಲ್ಲಷ್ಟು ಸಶಕ್ತವಾಗಿದೆ.

ತಮಿಳುನಾಡಿನ 'ತೆರುಕೂತ್ತು' ಲೇಖನವೊಂದು ಈ ಪುಸ್ತಕದಲ್ಲಿದ್ದು ಅದು ದಕ್ಷಿಣ ಭಾರತದ ರಂಗಭೂಮಿಯ ಕುರಿತಾದ ತಿಳುವಳಿಕೆಯನ್ನು ವಿಸ್ತರಿಸುತ್ತದೆ. ಅಮೃತ ಸೋಮೇಶ್ವರರ 'ಯಕ್ಷಗಾನ ಕೃತಿ ಸಂಪುಟ' ಮತ್ತು 'ಯಕ್ಷಾಂದೋಳ'ದ ಬಗ್ಗೆ ಬರೆದಿರುವ ಎರಡು ಲೇಖನಗಳು ಆ ಕೃತಿಗಳ ಮಹತ್ವವನ್ನು ಸಾಧಾರವಾಗಿ ಮುಂದಿಡುತ್ತವೆ. "ಸಮನ್ವಯ ದೃಷ್ಟಿ, ಗಂಭೀರವಾದ ದೃಷ್ಟಿಕೋನ, ಪರಂಪರೆಯ ಪರಿಜ್ಞಾನ, ಹೊಸ ಆಶಯದ ಕನಸು, ಅಸಾಧಾರಣ ಭಾಷಾ ಸೌಂದರ್ಯಗಳಿಂದ ಅಮೃತರು ಆಧುನಿಕ ಯುಗದ ಅತ್ಯಂತ ಮಹತ್ವದ ಯಕ್ಷಗಾನ ಕವಿ." (ಪುಟ 144) ಎಂಬ ನಿರ್ಣಯಗಳು ಅವರ ಆಳವಾದ ಅಧ್ಯಯನ, ಪರಂಪರೆಯ ಬಗ್ಗೆ ತಿಳುವಳಿಕೆ ಮತ್ತು ಆಧುನಿಕತೆಯ ಬಗೆಗೆ ತೆರೆದ ಮನಸ್ಸಿನಿಂದ ಪ್ರತೀತಗೊಂಡಿದೆ.

ಪುಸ್ತಕದ ಕೊನೆಯಲ್ಲಿ ಇಲ್ಲಿನ ಲೇಖನಗಳನ್ನು ಬರೆದಿರುವ ಸಂದರ್ಭದ ಬಗ್ಗೆ ಲೇಖಕರು ಒಂದು ಸೂಚಿಯನ್ನು ಕೊಟ್ಟಿದ್ದಾರೆ. ಇದನ್ನು ಸೂಕ್ಷ್ಮವಾಗಿ ಪರಿಶೀಲಿಸಿದರೆ, ಇಲ್ಲಿನ ಲೇಖನಗಳು ಯಕ್ಷಗಾನ ಪ್ರದರ್ಶನಗೊಳ್ಳುತ್ತಿರುವ ಭೌಗೋಳಿಕ ಆವರಣ ದೊಳಗಡೆಗೇ ಸಿದ್ಧಗೊಂಡ ಅಥವಾ ಮಂಡಿಸಲಾದ ಒಂದು ಚಿತ್ರ ದೊರೆಯುತ್ತದೆ. ಅಂದರೆ ಯಾರಿಗೆ ಯಕ್ಷಗಾನ 'ಗೊತ್ತಿದೆಯೋ' ಅವರಿಗೆ ಯಕ್ಷಗಾನದ ಬಗ್ಗೆ ತಿಳಿಸಿ ಹೇಳುವ ಪ್ರಯತ್ನವಿದು. ಹೀಗಾಗಿ ಇಲ್ಲಿನ ಬರಹಗಳಿಗೆ 'ಸಂಕ್ಷಿಪ್ತತೆ' ಒದಗಿ ಬಂದ ಗುಣವಾಗಿದೆ. ಎಷ್ಟೋ ಪರಿಭಾಷೆಗಳನ್ನು ವಿವರಿಸಬೇಕಾದ ಅರ್ಥವಂತೂ ದಕ್ಕಿರುತ್ತದೆ. ಹೀಗೆ ಸರಾಗವಾಗಿ ಮುಂದೆ ಹೋಗುತ್ತಾ ಅದಕ್ಕೆ ಸಂಬಂಧಿಸಿದ ವಿವರಗಳನ್ನು ಲೇಖಕರು ನೀಡಿದರಾಯಿತು. ಈ ಬಗೆಯ ಸಂಕ್ಷಿಪ್ತತೆಯು ಡಾ.ಜೋಶಿಯವರ ಬರಹಗಳ

ಗುಣವೂ ಹೌದು, ದೌರ್ಬಲ್ಯವೂ ಹೌದು. ಕರಾವಳಿಯೇತರ ಜನರಿಗೆ ಈ ಸಂಪುಟವು ಸುಲಭವಾಗಿ ಸಂವಹನಗೊಳ್ಳದು.

ಡಾ. ಜೋಶಿಯವರು ಯಕ್ಷಗಾನದ ಒಳಗಿನವರಾಗಿರುವುದರಿಂದಾಗಿ ಸಹಜವಾಗಿ ಕೆಲವು ನಿರ್ಣಯಗಳಿಗೆ ಬಂದು ಬಿಡುತ್ತಾರೆ. ಹಾಗೆ ನೋಡಿದರೆ ಒಂದಲ್ಲ ಒಂದು ಬಗೆಯ ನಿರ್ಣಯಗಳಿಲ್ಲದ ಲೇಖನಗಳೇ ಇಲ್ಲಿಲ್ಲ. 'ಇದನ್ನು ಮನ ಒಲಿಕೆ ಮತ್ತು ನಿಯಮಗಳ ಮೂಲಕ ಪರಿಹರಿಸುವುದು ಅಗತ್ಯ' (ಪುಟ 20), 'ಔಚಿತ್ಯ ಮೀರಿದ ಅಭಿವ್ಯಕ್ತಿ ಯಾವುದಿದ್ದರೂ ಅದು ಅನುಚಿತ' (ಪುಟ 27), 'ಅದರ ಕಲಾ ಸೌಂದರ್ಯವನ್ನು ಅಡೆತಡೆಗಳಿಲ್ಲದೆ, ರಗಳೆಗಳಿಲ್ಲದೆ ಸವಿಯಬೇಕಾದರೆ ಅಂತಹವುಗಳು ಇರಲೇ ಬಾರದು' (ಪುಟ 82), 'ಅದು ಪಾತ್ರದ ಅರ್ಥವೇನೋ ಆದೀತು. ಪ್ರಸಂಗದ ಅರ್ಥವಾಗದು' (ಪುಟ 111) – ಎಂಬಂಥ ಮಾತುಗಳನ್ನು ಬಹುತೇಕ ಇಲ್ಲಿನ ಎಲ್ಲ ಲೇಖನಗಳಲ್ಲಿಯೂ ಕಾಣಬಹುದು. ಇದು ಡಾ.ಜೋಶಿಯವರ ಬರಹದ ಶೈಲಿಯೂ ಹೌದು.

ಹೀಗೆ ಪ್ರಭಾಕರ ಜೋಶಿಯವರು ತಮ್ಮ ಬರಹಗಳಲ್ಲಿ ಯಕ್ಷಗಾನದ ಅನನ್ಯತೆಯನ್ನು ಕಾಪಿಡಲು ಹೆಣಗುತ್ತಾರೆ. ಆಧುನಿಕತೆಯು ಯಕ್ಷಗಾನದ ಮೇಲೆ ಉಂಟು ಮಾಡಿದ ಒಳ್ಳೆಯ ಮತ್ತು ಕೆಟ್ಟ ಪರಿಣಾಮಗಳ ವಿಶ್ಲೇಷಣೆ ನಡೆಸುತ್ತಾರೆ. ಅರ್ಥಗಾರಿಕೆಯ ಮಹತ್ವವನ್ನು ಮತ್ತು ತಾತ್ವಿಕ ಅಪೇಕ್ಷೆಗಳನ್ನು ಓದುಗರಿಗೆ ಸಾದರ ಪಡಿಸುತ್ತಾರೆ. ಯಕ್ಷಗಾನವನ್ನು ಇತರ ಕಲೆಗಳೊಡನೆ ಹೋಲಿಸಲು ಬೇಕಾದ ಚೌಕಟ್ಟನ್ನು ನಿರ್ಮಾಣ ಮಾಡಿಕೊಡುತ್ತಾರೆ. ಕಲಾವಿದನಾಗಿ ತಾನು ಪಡೆದ ಅನುಭವಗಳ ಆಧಾರದ ಮೇಲೆ ಕಲೆಯು ಮುನ್ನಡೆಯಬೇಕಾದ ರೀತಿಯ ಬಗ್ಗೆ ಕೆಲವು ಮಾರ್ಗದರ್ಶಿ ಮಾತುಗಳನ್ನು ಹೇಳುತ್ತಾರೆ.

ಕಲಾವಿದರೂ ವಿಮರ್ಶಕರೂ ಆಗಿರುವ ಜೋಶಿಯವರ ಮಾತುಗಳನ್ನು ನಾವೆಲ್ಲ ಗಂಭೀರವಾಗಿ ಸ್ವೀಕರಿಸಬೇಕು.





ಯಕ್ಷಗಾನ ಸ್ಥಿತಿಗತಿ, 2016
ಪ್ರಸಾರಾಂಗ, ಮಂಗಳೂರು ವಿಶ್ವವಿದ್ಯಾನಿಲಯ

# ಅತ್ಯುತ್ತಮ ಸಾಂದ್ರ ಸಮಗ್ರ ವಿನ್ಯಾಸಗಳ ಸೃಜನಶೀಲ ಚಿಂತನ ವಿನ್ಯಾಸ

**ಪ್ರೊ. ಕೆ. ಚಿನ್ನಪ್ಪ ಗೌಡ**

.. ಯಕ್ಷಗಾನ ಪರಂಪರೆ ಮತ್ತು ಪ್ರಯೋಗ, ಸ್ವರೂಪ ಮತ್ತು ವಿವಿಧ ತಿಟ್ಟುಗಳು, ವಸ್ತು ಮತ್ತು ಆಕರಗಳು, ಉದ್ದೇಶ ಮತ್ತು ಸ್ಥಿತ್ಯಂತರಗಳು – ಹೀಗೆ ಯಕ್ಷಗಾನದ ಬೇರೆ ಬೇರೆ ವಿಷಯಗಳಿಗೆ ಸಂಬಂಧಿಸಿದಂತೆ ಕೆಲವು ಕೃತಿಗಳನ್ನು ಮಂಗಳೂರು ವಿಶ್ವವಿದ್ಯಾನಿಲಯದ ಯಕ್ಷಗಾನ ಅಧ್ಯಯನ ಕೇಂದ್ರವು ಈಗಾಗಲೇ ಪ್ರಕಟಿಸಿದೆ. ಪುತ್ತೂರು ಶೀನಪ್ಪ ಭಂಡಾರಿಯವರ ಅನುಭವ ಕಥನ 'ಯಕ್ಷಭಂಡಾರಿ', 'ಯಕ್ಷಸ್ತ್ರೀ' (ಸ್ತ್ರೀವೇಷ, ಸ್ತ್ರೀಪಾತ್ರ ಮತ್ತು ಮಹಿಳಾ ಯಕ್ಷಗಾನ ವಿವೇಚನೆ) 'ಯಕ್ಷತರು, ಯಕ್ಷಮುಡಿ, ಯಕ್ಷಸಿರಿ, ಯಕ್ಷಕೇದಗೆ, ಕೋಟ ಶಿವರಾಮ ಕಾರಂತರು' (ಯಕ್ಷಗಾನ ಚಿಂತನೆ ಮತ್ತು ಪ್ರಯೋಗ) – ಮೊದಲಾದ ಕೃತಿಗಳು ಯಕ್ಷಗಾನ ರಂಗದ ಅರಿವು ಮತ್ತು ತಿಳುವಳಿಕೆಯನ್ನು ವಿಸ್ತರಿಸಿವೆ. ಒಟ್ಟಂದದ ಯಕ್ಷಗಾನದ ಪರಂಪರೆ ಮತ್ತು ಆಧುನಿಕತೆಯ ಕುರಿತ ಅರಿವನ್ನು ಇನ್ನಷ್ಟು ವಿಸ್ತರಿಸುವ ಡಾ.ಎಂ.ಪ್ರಭಾಕರ ಜೋಶಿಯವರ 'ಯಕ್ಷಗಾನ ಸ್ಥಿತಿಗತಿ' ಎಂಬ ಸಂಪುಟವನ್ನು ಪ್ರಕಟಿಸಲು ಅತೀವ ಸಂತೋಷವಾಗುತ್ತದೆ.

ಯಕ್ಷಗಾನ ಸ್ಥಿತಿಗತಿ ಎಂಬ ಈ ಸಂಪುಟದಲ್ಲಿ ಒಟ್ಟು ಇಪ್ಪತ್ತೆರಡು ಲೇಖನಗಳಿವೆ. ಆಖ್ಯಾನ–ವ್ಯಾಖ್ಯಾನವನ್ನೊಳಗೊಂಡಿರುವ ಯಕ್ಷಗಾನದ

ವ್ಯಾಕರಣವನ್ನು ಈ ಲೇಖನಗಳು ಸೂತ್ರ–ಟಿಪ್ಪಣಿಗಳ ರೂಪದಲ್ಲಿ ಪರಿಣಾಮಕಾರಿಯಾಗಿ ತಿಳಿಸುತ್ತವೆ. ಯಕ್ಷಗಾನದ ಶಾಸ್ತ್ರೀಯ ಪರಂಪರೆ ಮತ್ತು ಆಧುನಿಕ ಅನ್ವಯಿಕ ಪ್ರಯೋಗ – ಈ ಅಂಶಗಳನ್ನು ತನ್ನದೇ ಆಗಿರುವ ವಿಶಿಷ್ಟ ವಿವೇಕವನ್ನು ಬಳಸಿ ಡಾ. ಎಂ. ಪ್ರಭಾಕರ ಜೋಶಿಯವರು ವಿಶ್ಲೇಷಿಸಿ ತಮ್ಮ ಅಭಿಪ್ರಾಯಗಳನ್ನು ಕರಾರುವಕ್ಕಾಗಿ ಮಂಡಿಸಿದ್ದಾರೆ.

ಈ ಸಂಪುಟದಲ್ಲಿ ಯಕ್ಷಗಾನದ ರಂಗಕಲಾ ಭಾಷೆ ಮತ್ತು ಕಲಾವಚನ ಸ್ವರೂಪವನ್ನು ವಿವೇಚಿಸುವ ಲೇಖನಗಳಿವೆ. ಯಕ್ಷಗಾನ ರಂಗಭೂಮಿಯ ಭವಿಷ್ಯ ಮತ್ತು ಮುನ್ನೋಟದ ಚಿಂತನೆಗಳಿರುವ ಬರಹಗಳಿವೆ. ಯಕ್ಷಗಾನದ ವಸ್ತು, ಆಯ್ಕೆ, ಮಂಡನೆ ಮತ್ತು ಆರ್ಥೈಸುವಿಕೆಗೆ ಸಂಬಂಧಪಟ್ಟ ವಿಶ್ಲೇಷಣಾತ್ಮಕ ಲೇಖನಗಳಿವೆ. ಅರ್ಥಗಾರಿಕೆಯ ಬಗೆಗೆ ಹೊಸ ಬಗೆಯ ಗ್ರಹಿಕೆಗಳನ್ನು ಮಂಡಿಸುವ ಬರಹಗಳಿವೆ. ವಿಚಲನೆಯ ದೌರ್ಭಾಗ್ಯದಂತಿರುವ ಹರಕೆ ಬಯಲಾಟಗಳ ಕುರಿತಂತೆ ಎಚ್ಚರದ ಮತ್ತು ಎಚ್ಚರಿಕೆಯ ಸೂಚನೆಗಳಿರುವ ಲೇಖನಗಳಿವೆ. ಯಕ್ಷಗಾನದ ನಿರ್ದಿಷ್ಟ ವಿಷಯ ಅಥವಾ ಪರಿಕಲ್ಪನೆಗೆ ಸಂಬಂಧಪಟ್ಟಂತೆ ಪ್ರಚಲಿತವಿರುವ ರಂಗ ತಿಳುವಳಿಕೆಯನ್ನು ಡಾ.ಜೋಶಿಯವರು ಲೇಖನಗಳಲ್ಲಿ ವಿಸ್ತರಿಸಿದ್ದಾರೆ ಎಂಬುದು ಮುಖ್ಯ ಮಾತು.

ಯಕ್ಷಗಾನ ರಂಗದ ಜತೆಗೆ ಅವರು ಇಟ್ಟುಕೊಂಡಿರುವ ನಿರಂತರ ನಿಕಟ ಸಂಪರ್ಕ, ರಂಗಾನುಭವದ ಮೂಲಕ ಸ್ಫುಟಗೊಂಡ ಕಲಾಧೋರಣೆ, ರಹಸ್ಯ ಕಾರ್ಯಸೂಚಿ ಇಲ್ಲದ ತೆರೆದ ಮನಸ್ಸಿನ ಚಿಂತನೆ, ಹದವರಿತ ಮಾತಿನ ಹರಿತ ಶೈಲಿ – ಈ ಅಂಶಗಳು ಇಲ್ಲಿಯ ಲೇಖನಗಳಿಗೆ ಸೈದ್ಧಾಂತಿಕ ಚೌಕಟ್ಟು ಮತ್ತು ಅಭಿವ್ಯಕ್ತಿಯ ಸೊಗಸನ್ನು ಒದಗಿಸಿವೆ ಹಾಗೂ ಯಕ್ಷಗಾನದ ಕುರಿತಂತೆ ನಾವು ಹೊಂದಬೇಕಾದ ಅರಿವಿನ ವೇಗವನ್ನು ಇಲ್ಲಿನ ಬರಹಗಳ ಶೈಲಿಯಿಂದಲೇ ಗುರುತಿಸಬಹುದು. ಚಿಂತನಗಳಂತಿರುವ ಹಲವು ಲೇಖನಗಳಲ್ಲಿ ನಿರ್ದಿಷ್ಟ ವಿಷಯಕ್ಕೆ ಸಂಬಂಧಿಸಿದಂತೆ ಡಾ.ಜೋಶಿಯವರು ಚೆಲ್ಲಿ ಬಿಡುವ ಆಲೋಚನೆಗಳನ್ನು ಪೋಣಿಸಿ ನೋಡಿದರೆ ಅವರ ಆಲೋಚನೆಯ ಸಮಗ್ರ ನೆಲೆಯನ್ನು ಗುರುತಿಸಲು ಸಾಧ್ಯ.

ಯಕ್ಷಗಾನದ ರಂಗಭಾಷೆ, ಯಕ್ಷಗಾನದ ರಚನಾ ಸ್ವರೂಪ, ಯಕ್ಷಗಾನದಲ್ಲಿ ಚಿತ್ರಾಭಿನಯ, ವಸ್ತುಮಂಡನೆ, ಯಕ್ಷಗಾನದ ಪ್ರಾಯೋಗಿಕ ನೆಲೆಗಳು – ಈ ಅಂಶಗಳನ್ನು ವಿವೇಚಿಸುವ ಲೇಖನಗಳು ಸಾಕಷ್ಟು ವಿಸ್ತಾರವಾಗಿವೆ. ಇನ್ನು ಕೆಲವು ಬರಹಗಳು ಪುಟ್ಟ ಪ್ರತಿಕ್ರಿಯೆಯ ರೂಪದಲ್ಲಿದೆ. ಪುಟ್ಟ ಬರಹಗಳನ್ನು ಪತ್ರಿಕೆಗಳಲ್ಲಿ ಪ್ರಕಟಿಸಿ ವಿಷಯಕ್ಕೆ ಉನ್ನತಿಕೆಯನ್ನು ಡಾ.ಜೋಶಿಯವರು ತಂದುಕೊಟ್ಟಿದ್ದಾರೆ. ಬೇರೆ ಬೇರೆ ವಿನ್ಯಾಸಗಳಲ್ಲಿ ಅತ್ಯುತ್ತಮವಾಗಿ, ಸಾಂದ್ರವಾಗಿ ಮತ್ತು ಸಮಗ್ರವಾಗಿ ಯಕ್ಷಗಾನಕ್ಕೆ ಪ್ರತಿಕ್ರಿಯಿಸುವ / ಚಡಪಡಿಸುವ ಸೃಜನಶೀಲ ಮನಸ್ಸೊಂದನ್ನು ಡಾ.ಜೋಶಿಯವರಲ್ಲಿ ನಾವು ಗುರುತಿಸಬಹುದು.

"ಯಕ್ಷಗಾನವೆಂಬ ಶೈಲಿಬದ್ಧ, ಶೈಲೀಕೃತ, ಅವಾಸ್ತವ ಪ್ರಧಾನ, ರಮ್ಯಕಲೆ ವಿಧಾನವು

ಜಿಗುಟಲ್ಲ. ಪ್ರಯೋಗ ವಿರೋಧಿಯಲ್ಲ, ನಾವೀನ್ಯ ನಿರಾಕರಣ ಶೀಲವಲ್ಲ. ಸಮಕಾಲೀನ ರಂಗ ನಾಟಕದ ಹಾಗೆ ಮುಕ್ತವೂ ಅಲ್ಲ. ಅ–ಶಿಷ್ಟವೂ ಅಲ್ಲ", "ಇತ್ತೀಚೆಗೆ ಯಕ್ಷಗಾನದಲ್ಲಿ ಕಾಣುವ ಅನೇಕಾನೇಕ ನರ್ತನಗಳು, ಪದಾಭಿನಯಗಳು, ಚಲನೆಗಳು 'ವಿಕೃತಿ'ಗಳಾಗಿ ಕಾಣುವುದು ಈ ಕೃತಿಯ ಒಟ್ಟು ವ್ಯಾಕರಣ, ಕಲಾಭಾಷೆಯ ಗ್ರಹಿಕೆ ಇಲ್ಲದ ರಚನೆಗಳಾಗುವುದರಿಂದ", "ಕಲೆಯ ಕುರಿತು ಅಭಿಮಾನವನ್ನು ತಾಳುವುದರೊಂದಿಗೆ ಇದರ ಮಿತಿಗಳನ್ನು ಮೀರುವ, ಇದನ್ನು ಕಾಲೋಚಿತವಾಗಿ ಬೆಳೆಸುವ ಪರಿಶ್ರಮಪೂರ್ವಕ, ಬುದ್ಧಿಪೂರ್ವಕವಾದ, ಗಂಭೀರವಾದ ಪ್ರಯತ್ನಗಳು ನಡೆಯಬೇಕಾಗಿರುವುದು ಅಗತ್ಯ", "ಯಕ್ಷಗಾನ ಪಾತ್ರದ ಪದ. ಪದ್ಯಾಭಿನಯ ಹಾಗೆ ಸ್ವತಂತ್ರವಲ್ಲ. ಅದು ಆ ಪಾತ್ರದ ಭಾವ ಮತ್ತು ಪ್ರತಿಕ್ರಿಯೆ, ಪದಗಳಲ್ಲಿ ಬರುವ ಇತರ ಪಾತ್ರ, ಘಟನೆಗಳ ಸಾಂದರ್ಭಿಕ ಚಿತ್ರಣಗಳಿಗೆ ಸೀಮಿತ. ಅದು ಪಾತ್ರಾನುಕೃತಿ ಹೊರತು 'ಏಕಪಾತ್ರಾಭಿನಯ'ದಂತಹ ನಾಟ್ಯವಲ್ಲ", "ಸಂವಾದ ನಿರತ ಪಾತ್ರಗಳು, ಒಬ್ಬರನ್ನೊಬ್ಬರು ಸಂವಾದಕ್ಕೆ ಬಳಸಿಕೊಳ್ಳುವಾಗ ಅವರವರ ಮಾತಿನ ರೀತಿ, ಅಧ್ಯಯನದ ನೆಲೆ ಹಿನ್ನೆಲೆ, ಅಭಿವ್ಯಕ್ತಿ ವಿಧಾನಗಳನ್ನು ಅನುಸರಿಸಿ ಪದಗಳನ್ನು ಅತ್ತಿತ್ತ ವಿನಿಮಯ ಮಾಡಿದಾಗ, ಟಾಸ್ ಮಾಡಿದಾಗ ಆಗುವ ಒಟ್ಟು ರೂಪಕಸೃಷ್ಟಿ ಉತ್ತಮ ಅನುಭವವನ್ನು ನಿರ್ಮಿಸುತ್ತದೆ. ಶಾಸ್ತ್ರೀಯ ಅಧ್ಯಯನ, ಸಾಹಿತ್ಯದ ಪರಿಶ್ರಮ, ತರ್ಕದ ಪರಿಣತಿ, ವ್ಯಾವಹಾರಿಕ ಜಾಣ್ಮೆಯ ಅನುಭವ, ಪೌರಾಣಿಕ ಮಾಹಿತಿಗಳ ಜ್ಞಾನ, ಗಾದೆ ಮೊದಲಾದ ಭಾಷಾಂಗಗಳ ಹಿಡಿತ, ನವೀನ ವ್ಯಾಖ್ಯಾನ ಪ್ರತಿಭೆ, ತಟ್ಟನೆ ಪ್ರತಿಕ್ರಿಯೆಗೆ ಒದಗುವ ಸಾಮರ್ಥ್ಯ, ಪ್ರಾಸ ಲಾಲಿತ್ಯಗಳ ಹಿಡಿತ – ಹೀಗೆ ಅರ್ಥದಾರಿಗಳಲ್ಲಿ ಒಂದೊಂದು ಬಗೆಯ ಅಥವಾ ಹಲವು ಸಾಮರ್ಥ್ಯಗಳ ಪ್ರಾವೀಣ್ಯವುಳ್ಳವರು ಇರುತ್ತಾರೆ".

ಇಂತಹ ಅನೇಕ ಮಾತುಗಳು ಡಾ.ಜೋಶಿಯವರ ಯಕ್ಷಗಾನದ ಕುರಿತ ಚಿಂತನ ವಿನ್ಯಾಸವನ್ನು ಸ್ಪಷ್ಟಪಡಿಸುತ್ತವೆ. ಯಕ್ಷಗಾನ ಸಂಘಟನೆ, ಯಕ್ಷಗಾನದಲ್ಲಿ ಏಕವ್ಯಕ್ತಿ ಪ್ರದರ್ಶನ, ಹರಕೆ ಬಯಲಾಟಗಳ, ಕಾಲಮಿತಿ ಯಕ್ಷಗಾನ – ಮೊದಲಾದ ಸಂಗತಿಗಳ ಬಗೆಗೂ ತಮ್ಮ ಖಚಿತ ನಿಲುವನ್ನು ಪ್ರಕಟಿಸಿದ್ದಾರೆ....

**(ಪುಸ್ತಕದ ಉಪೋದ್ಘಾತದ ಆಯ್ದ ಭಾಗ)**



ಕೊರಳಾರ, 2017
ಆಕೃತಿಆಶಯ ಪಬ್ಲಿಕೇಷನ್ಸ್, ಮಂಗಳೂರು

## ಕೊರಳಾರಕ್ಕೊಂದು ನುಡಿ ನೋಟ

**ಪ್ರೊ. ಉದ್ಯಾವರ ಮಾಧವ ಆಚಾರ್ಯ**

ಹಲವು ನೋಟಗಳನ್ನೊಳಗೊಂಡ ಈ ವಿಶಿಷ್ಟ ಪ್ರಬಂಧ ಸಮುಚ್ಚಯ ದೆಡೆಗೆ 'ನಿಮ್ಮದೊಂದು ಮೊದಲ ನೋಟಬೇಕೆಂದು' ಸನ್ಮಿತ್ರ ಡಾ। ಎಂ ಪ್ರಭಾಕರ ಜೋಶಿ ಅವರು ಬಯಸಿದ್ದು ನನ್ನ ಭಾಗ್ಯ. ಇದರ ಹಿಂದೆ ಶುದ್ಧ ವಿಶ್ವಾಸವಿದೆ. ಪ್ರೀತಿಯಿದೆ. ಸ್ನೇಹಕ್ಕಿಂತ ಮಿಗಿಲಾಗಿ ಗುರುತಿಸು ವಿಕೆಯ ಆತ್ಮೀಯ ಗೌರವವಿದೆ. ತಮ್ಮ ಚಿಂತನೆಗಳ ಓಟಕ್ಕೆ ಮಿತ್ರನೊಬ್ಬನ ಹಸಿರು ತಡೆ ಇದಾಗಲಿ ಎಂಬ ಆಶಯವೂ ಇದೆ. ಈ ಎಲ್ಲಕ್ಕೂ ತಲೆಬಾಗಿ ನನ್ನ ಮಿತಿಯೊಳಗೆ ನಾಲ್ಕು ನುಡಿ ನೋಟಗಳನ್ನು ಮುನ್ನುಡಿಯ ಬರಹವಾಗಿಸಲೇ...?

ಈ ಗುರುತರ ಹೊಣೆಗಾರಿಕೆಯನ್ನು ಸುಲಭಗೊಳಿಸಲು ಡಾ। ಜೋಶಿ ಅವರೇ ಈ ಸಂಕಲನದಲ್ಲಿ ಒಂದಾಗಿಸಿದ – ಡಾ। ಪಾದೇಕಲ್ಲು ವಿಷ್ಣು ಭಟ್ಟರ 'ಯಕ್ಷಗಾನಾಧ್ಯಯನ' ಗ್ರಂಥಕ್ಕೆ – ಬರೆದ ಮುನ್ನುಡಿಯ ಮೊದಲ ಸಾಲುಗಳನ್ನೇ (ಪು 12) ಪುನರುಚ್ಚರಿಸಿದರೆ ಖಂಡಿತ ಸಾಕು ಎಂದೇ ನನ್ನೆಣಿಕೆ. ಆದರೆ ಒಂದು ವ್ಯತ್ಯಾಸವಿದೆ. ಡಾ। ಪಾದೇಕಲ್ಲು ಅವರ ಆಳವಾದ ಸಂಶೋಧನೆಯ ಗ್ರಂಥಕ್ಕೆ ಅಷ್ಟೇ ಗಡುಸಾದ ಮತ್ತು ಹರಿತದ ಶಿಲ್ಪಘಾತವನ್ನು ನೀಡುವಂತೆ ಆ ಪುಸ್ತಕಕ್ಕೆ ಮುನ್ನುಡಿ ಬರೆದಿದ್ದಾರೆ ಡಾ। ಜೋಶಿ. ನನ್ನಿಂದ ಅಂಥ ವಿಮರ್ಶಾತ್ಮಕ ಸೂಕ್ಷ್ಮ ಕೆತ್ತನೆ ಸಾಧ್ಯವೇ ಈ ವಿಶಿಷ್ಟ ಪುಸ್ತಕಕ್ಕೆ? ಸಾಧ್ಯವಾಗದು. ಕಾರಣ, ಈ ಹೊಸ ಬಗೆಯ

ಸಂಕಲನದ ವ್ಯಾಪ್ತಿ ನನ್ನ ಅಧ್ಯಯನಾಸಕ್ತಿಯಿಂದ ತುಂಬ ಭಿನ್ನವಾದುದು. ಆಳವಾದದ್ದು. ವಿವೇಚನೆಯ ಸಾಧ್ಯತೆಗಳನ್ನು ಡಾ। ಜೋಶಿ ಅವರು ಈ ಪುಸ್ತಕದಲ್ಲಿ ತುಸು ವಿಸ್ತಾರವಾಗಿ ಸ್ಪರ್ಶಿಸಿದ್ದಾರೆ. ಅವನ್ನೆಲ್ಲ ಒಂದು 'ಗುಬ್ಬಚ್ಚಿ ಪಕ್ಷಿ ನೋಟಕ್ಕೂ' ಒಳಪಡಿಸಲಾಗದ ಚಿಂದಿ ಚಿಂತನೆಗಳ ಸರದಾರ ನಾನು. ಆದರೂ ಬರೆಯಲೊಪ್ಪಿದ್ದೇನೆ. ಕಾರಣ, ಪುಟ 12ರಲ್ಲಿ ಜೋಶಿ ಹೇಳಿಕೊಂಡಂತೆ '...ಅವರು (ಪಾದೇಕಲ್ಲು) ನನ್ನ ಬಗೆಗಿರಿಸಿದ ಪ್ರೀತಿ ವಿಶ್ವಾಸಗಳಿಂದ ಈ ಬರೆಹ ಅಷ್ಟೆ...' ಜೋಶಿ ಅವರ ಈ ಮಾತೇ ನನಗೂ ಶ್ರೀರಕ್ಷೆ.

ಇರಲಿ. ಈ ಪ್ರೀತಿ ವಿಶ್ವಾಸದ ನೋಟಗಳ ಪರಸ್ಪರ ವಿನಿಮಯ ಕೇವಲ ಹೊಗಳಿಕೆಯ ಗಾಳಿಜೀಸು ಆಗಬಾರದಲ್ಲ. ಸಂಕಲನದ ವಿವಿಧ ಪ್ರಬಂಧಗಳು ಒಳಗೊಂಡ ಹಲವಾರು ಹಿರಿಮೆಗಳ ಪರಿಮಳವನ್ನು ತುಸು ಸ್ಪಂದನಾತ್ಮಕವಾಗಿ ಹೊತ್ತು ಸಾಗಲಿ ಎಂದೇ ನನ್ನಾಸೆ.

ಪ್ರಾರಂಭದಲ್ಲಿಯೇ ಹಲವು ನೋಟಗಳನ್ನೊಳಗೊಂಡ ಹೊತ್ತಗೆ ಎಂದೆ. ಒಂದೆ ಮಾತಿನಲ್ಲಿ ಹೇಳುವುದಾದರೆ ಈ ಹಲವು ನೋಟಗಳೇ ಈ ಪುಸ್ತಕದ ಹಿರಿಮೆ. ಹಲವು ಎಂದರೆ ಒಂದೆರಡಲ್ಲ. ಒಂದು ಪ್ರದೇಶದ ಸುತ್ತಮುತ್ತ ಯಕ್ಷಗಾನದ ಜಗತ್ತು ಹೇಗೆ ಸೃಷ್ಟಿಯಾಗಿದೆ, ಕ್ರಿಯಾಶೀಲವಾಗಿದೆ, ಎಂಥ ಸಮಸ್ಯೆಗಳನ್ನು ಎದುರಿಸುತ್ತಿದೆ ಎಂಬುದನ್ನೆಲ್ಲ ವಿವೇಚಿಸುವ – 'ಮಂಗಳೂರಿನಲ್ಲಿ ಯಕ್ಷಗಾನ' (ಪು 22ರಿಂದ) ಎಂಬ ನನಗೆ ತುಂಬ ಆಪ್ತವಾದ ಸಂಶೋಧನೆಯ ನೆರಳನ್ನು ಹಾಯಿಸುವ ಲೇಖನದಿಂದ ಹಿಡಿದು 'ಸಂಪಾಜೆ ಮಹಾ ವಿದ್ಯಮಾನ' (ಪು 53ರಿಂದ) ಎಂಬ ಆತ್ಮೀಯ ದಾಖಲೆಯ ಲೇಖನದ ತನಕ ಡಾ।ಜೋಶಿ ಅವರ ಚಿಂತನೆಗಳ ಜುಗಲ್ಬಂದಿ (ಅವರೇ ನನ್ನ ಕೇಳಿಕೆಗೆ ಸ್ಪಂದಿಸಿ ಮಾಡಿದ ಏಕವ್ಯಕ್ತಿ ತಾಳಮದ್ದಲೆ ಪ್ರಯೋಗದಂತೆ) ಸಾಗಿದೆ ಈ ಗ್ರಂಥದಲ್ಲಿ.

ಹೌದಲ್ಲ. ನನ್ನ ಅನೇಕ ಪ್ರಯೋಗಗಳಿಗೆ ಜೋಶಿ ಅವರದು ಏಕವ್ಯಕ್ತಿ ಸ್ಪಂದನವೆ. ಸಂದರ್ಭ ಬಂದಾಗಲೆಲ್ಲ ನನ್ನ ಹುಚ್ಚಾಟಗಳನ್ನು ಮೆಚ್ಚಿ ಸ್ಮರಿಸಿದ್ದಾರೆ. 'ಏಕವ್ಯಕ್ತಿ ತಾಳಮದ್ದಲೆ ಮಾಡುವ' ಎಂದೆ. ಬಹು ಎತ್ತರವಾಗಿ ಬೆಳೆದ ತಾಳಮದ್ದಲೆಯ ಮೂಲಸ್ವರೂಪಕ್ಕೇ ಪೆಟ್ಟು ಕೊಡುವಂಥ ಈ ಕಲ್ಪನೆಗೆ ಪರಂಪರೆಯ ಪ್ರೀತಿಗರು ಒಪ್ಪದಿದ್ದರೂ ಡಾ. ಜೋಶಿ ಅವರು ಬಂದು ಭಾಗವಹಿಸಿದ್ದರು (25–03–2002). ಅದೇ ರೀತಿ ಕಡೆಂಗೋಡ್ಲು ಕೃತಿ 'ಸೀತಾಪಹಾರ'ವನ್ನು ಆಧರಿಸಿ ಪ್ರಯತ್ನಿಸಿದ 'ಕಾವ್ಯ ತಾಳಮದ್ದಲೆ' (25–10–1998) ಎಂಬ ಹೊಸ ಸಾಧ್ಯತೆಗೆ ಸಹಕಾರ ಸಾಧ್ಯವೇ ಎಂದು ಕೇಳಿದ್ದೆ. ಹಿಂದೆ ಮುಂದೆ ನೋಡದೆ ಒಪ್ಪಿ ಬಂದಿದ್ದರು. ಆ ಕಾವ್ಯವನ್ನು ಆಳವಾಗಿ ಅಧ್ಯಯನ ಮಾಡಿ ತನ್ನ ಅಪಾರ ತಾಳಮದ್ದಲೆ ವಾಗ್ಮಿತೆಯನ್ನು ಆ ಕಲ್ಪನೆಗೆ ಇಂಬು ಕೊಡುವಂತೆ ಗಂಗಾಪ್ರವಾಹವಾಗಿಸಿದ್ದರು. ಇನ್ನೂ ಒಂದು ಹೆಜ್ಜೆ ಮುಂದೆ – ಹಿಮ್ಮೇಳವೇ ಇಲ್ಲದೆ ಆಶು 'ತರ್ಕ ಮದ್ದಳೆ'ಯ ಪ್ರಯತ್ನದ ಬಗ್ಗೆ ಪ್ರಸ್ತಾಪಿಸಿದಾಗ ಆತ್ಮೀಯರಾದ ವಾಸುದೇವ ರಂಗಾಭಟ್ಟರನ್ನು ಕೂಡಿಕೊಂಡು ನಮ್ಮ 'ಊರ್ವಶೀ ವಿಲಾಸ ವಿಲಾಪ'ಕ್ಕೆ ಒಂದು

ಎತ್ತರವನ್ನು ಸಾಧ್ಯಗೊಳಿಸಿದ್ದರು. (11-01-2015)

ಹೀಗೇ ಸಂದರ್ಭವೊದಗಿದಾಗಲೆಲ್ಲ ತಮ್ಮ ಸಮಕಾಲೀನರ ಸಾಧನೆಗಳ ಶೋಧನೆಗಳ ಕಾಣ್ಕೆಗಳ ಅಭಿಪ್ರಾಯಗಳ ದಾಖಲೆಯನ್ನು ತನ್ನ ಲೇಖನಗಳಲ್ಲೋ ಉಪನ್ಯಾಸಗಳಲ್ಲೋ ನೆನಪಿಸಿಕೊಂಡು ಹೇಳುವ ಪರಿಪಾಠವನ್ನು ಡಾ। ಜೋಶಿ ಅವರು ನಿಡುಗಾಲದಿಂದ ಮಾಡುತ್ತಾ ಬಂದಿದ್ದಾರೆ. ಈ ಗ್ರಂಥದ ಹಲವು ಲೇಖನಗಳಲ್ಲಿ ಅದಕ್ಕೆ ಆಧಾರ ದೊರಕುತ್ತದೆ. ಇದು ಇಂಥವರು ಹೇಳಿದ್ದು, ಇದು ಇಂಥವರ ಮಾತು, ಕೊಡುಗೆ ಎಂಬಿತ್ಯಾದಿಗಳನ್ನೆಲ್ಲ ಪ್ರಸ್ತಾಪಿಸಲು ಮರೆಯದಿರುವ 'ಸಾಕ್ಷಿ ಪ್ರಜ್ಞೆಯ ಬೌದ್ಧಿಕ ವ್ಯಕ್ತಿತ್ವ' ಅವರದ್ದಾದದ್ದರಿಂದಲೇ ಈ ಗ್ರಂಥದ ವಿವಿಧ ನೆಲೆಗಳಲ್ಲಿ ವಿವೇಚನೆಗಳು ಸಾಧ್ಯವಾಗಿದೆ. ಏನು ಋಣವೋ? ನನಗಂತು ಒಂದೆರಡು ಮುನ್ನುಡಿ ಎಂಬ ಶಿಷ್ಟಾಚಾರವನ್ನೂ ಮೀರಿ ಪ್ರಸ್ತಾಪಿಸಲೇ ಉದಾಹರಣೆಗೆ 'ಮಂಗಳೂರಿನಲ್ಲಿ ಯಕ್ಷಗಾನ' ಎಂಬ ಅವರ ವಿಶಿಷ್ಟ ಬಗೆಯ ಅಧ್ಯಯನ ನೋಟದಲ್ಲಿ ಸೇರಿಕೊಳ್ಳಬಹುದಾದ ಒಂದು ಸಂಗತಿ – ಮುಳಿಯ ಶತಮಾನೋತ್ಸವ ಸಂದರ್ಭ ಸಂತ ಎಲೋಶಿಯಸ್ ಸಭಾಭವನದಲ್ಲಿ ನಡೆದ ತೆಂಕುತಿಟ್ಟಿನಲ್ಲಿ ಪ್ರಥಮ ಎನ್ನಬಹುದಾದ ಬ್ಯಾಲೆ ಪ್ರಯೋಗವಾದ 'ನವನೀತ ರಾಮಾಯಣ' ಆಧಾರಿತ ರಂಗಪ್ರಯತ್ನದ(18-03-1989) ಕುರಿತಾಗಿ ಡಾ। ಜೋಶಿ ಅವರು ಹಲವು ವೇದಿಕೆಗಳಲ್ಲಿ ಮೆಚ್ಚಿ ಆಡಿದ್ದನ್ನಾಗಲೀ (ಲೇಖನದಲ್ಲಿ ಆ ಮರೆವೆ ದೋಷವಾಗಿಲ್ಲ) ಡಾ। ಕಾರಂತರು ಸ್ತ್ರೀ ವೇಷಕ್ಕಾಗಿ ರೂಪಿಸಿದ ಶಿರೋಭೂಷಣ (ಸ್ತ್ರೀ ಕೇದಗೆ ಕಿರೀಟ)ದ ಒಟ್ಟಂದದ ಕೊಡುಗೆಯನ್ನು ಸೂಕ್ಷ್ಮವಾಗಿ ವಿಶ್ಲೇಷಿಸಿ (ಪು 73) ಪರ್ಯಾಯವಾಗಿ ಶ್ರೀ ಕೊಳ್ಯೂರು, ಶ್ರೀ ಪಾತಾಳ ಅವರು ವಿನ್ಯಾಸಗೊಳಿಸಿ ಪ್ರಯತ್ನಿಸಿದ (ನನ್ನ ಪಾಂಚಾಲಿಯಲ್ಲಿ 'ಕಮಲಮುಂದಲೆ' ಎಂಬ ಪರಿಕಲ್ಪನೆಯಲ್ಲಿ ರೂಪಿಸಿದ) ಆಹಾರ್ಯಗಳ ಕೊಡುಗೆಗಳನ್ನು ನೆನಪಿಸಿಕೊಳ್ಳುವಂತೆ ವಿವೇಚಿಸಿದ ಡಾ। ಜೋಶಿ ಅವರ ದಾಖಲೀಕರಣ ಪ್ರಯತ್ನ ವಿಶಿಷ್ಟ ಬಗೆಯದು. 'ಅವರು(ಕಾರಂತರು) ಸ್ತ್ರೀ ವೇಷಕ್ಕೆ ತಯಾರಿಸಿದ 'ಕಿರಣ'ದ ಮುಡಿ ಸ್ತ್ರೀ-ಪುರುಷ ವೇಷಗಳ ನಡುವಿನ ವಿಸಂವಾದ ವನ್ನು ನಿವಾರಿಸಿ ಆನುರೂಪ್ಯ (harmony) ಸಾಧಿಸಿತು. ಅದೊಂದು 'ಅಸಾಮಾನ್ಯ ಸೃಜನ' ಎಂಬ ಡಾ। ಜೋಶಿ ಅವರ ಮಾತು ಕೇವಲ ಒಂದು ವಾಕ್ಯವಲ್ಲ ಒಂದಷ್ಟು ಚಿಂತನೆಗಳಿಗೆ ಬುನಾದಿಯಾಗುವಂತಿದೆ ಎಂದೇ ನನ್ನೆಣಿಕೆ.

ಕಾರಂತರ ಮೂಲ ಚಿಂತನೆಯ ಕೊಡುಗೆಗಳ ಸುತ್ತಮುತ್ತ ಇಂದೀಗ ನಡೆಯುತ್ತಿರುವ ವಿಧ ವಿಧದ ಪ್ರಯೋಗ ವಿಸ್ತಾರಗಳೆಡೆಗೆ ಗಮನಹರಿಸಬೇಕೆಂದು ಸೂಚಿಸುವಂತಿದೆ ಇಂತಹ ಅನೇಕ ಪರಿಶೀಲನೆಗಳು. ಅದೇ ರೀತಿ ಪುಟ 30ರಲ್ಲಿ ದಾಖಲಿಸಿದ ಮಂಗಳೂರು ವಿಶ್ವವಿದ್ಯಾನಿಲಯದ ಡಾ. ಪಿ. ದಯಾನಂದ ಪೈ, ಶ್ರೀ ಪಿ. ಸತೀಶ್ ಪೈ ಯಕ್ಷಗಾನ ಅಧ್ಯಯನ ಕೇಂದ್ರವನ್ನು ಮುಖ್ಯ ವಿದ್ಯಮಾನವೆಂದು ಗುರುತಿಸಿ ಪ್ರೊ. ಬಿ.ಎ. ವಿವೇಕ ರೈ ಅವರು ಈ ಬಗ್ಗೆ ಬಹಳ ಹಿಂದೆ ಚಿಂತಿಸಿ ಯೋಜನೆ ಹಾಕಿದಾಗ ಆ ಕುರಿತ ಸ್ಥೂಲ ನಕ್ಷೆ ತಯಾರು ಮಾಡುವಾಗ ಸಹಕರಿಸುವ ಅವಕಾಶ ದೊರಕಿದ ಮಧುರ

ಸ್ಮೃತಿಯನ್ನು ಉಜ್ಜೀವನಗೊಳಿಸಿದ್ದಾರೆ.

ಹಗುರ ನುಡಿನೋಟಗಳನ್ನು ಲೆಕ್ಕಿಸದೆ ನನ್ನ ಅನೇಕ ಪ್ರಯೋಗಗಳಿಗೆ ಸ್ಪಂದಿಸಿದವರು ಡಾ। ಜೋಶಿ. ಆ ಪ್ರಯೋಗಗಳ ಹೊಸ ನೋಟ, ಸಹ ಸ್ಪಂದನ ಹೇಗಿರಬೇಕು ಎಂಬುದನ್ನು ಒಂದು ಸಿದ್ಧಾಂತದಂತೆ ಬೆಲೆಕಟ್ಟುವುದರಲ್ಲಿ ಡಾ। ಜೋಶಿ ಅವರ ಹಾದಿ ನೇರ, ಸರಳ ಮತ್ತು ಸರಸ ಸಂಭಾಷಣೆಯ ರೂಪದ್ದು ಎಂಬುದಕ್ಕೆ ಈ ಗ್ರಂಥದ ಹೆಚ್ಚಿನ ಲೇಖನಗಳಲ್ಲಿ ನಮಗೆ ಉದಾಹರಣೆಗಳು ದೊರಕುತ್ತವೆ. 'ಭಾರತೀಯ ಕಲೆಗಳ ಅಂತಾರಾಷ್ಟ್ರೀಯ ಅರ್ಥೈಸುವಿಕೆ' (ಪು 77ರಿಂದ) ಲೇಖನವನ್ನೇ ಗಮನಿಸಿ. ಆ ಲೇಖನದಲ್ಲಿ ಬರುವ – ಒಂದು ಜಾನಪದ ಕುತೂಹಲದ ಜನಾಂಗೀಯ ನೋಟಕ್ಕಿಂತ ಭಿನ್ನವಾಗಿ ನಮ್ಮ ಯಕ್ಷಗಾನ ಪ್ರದರ್ಶನವನ್ನು 'ಒಂದು ರಂಗಕಲೆಯಾಗಿ ವಿಶಿಷ್ಟ ಕಾಲದ (period) ಮಾಧ್ಯಮವಾಗಿ ಪುರಾಣ ವಸ್ತುವಿನ ಅರ್ಥೈಸುವಿಕೆ ಮತ್ತು ಪ್ರಸ್ತುತಿಯಾಗಿ... ಕಾಣಬೇಕಾಗಿದೆ; ನಾವು ಕಾಣಿಸಬೇಕಾಗಿದೆ...' ಎಂಬ ಡಾ। ಜೋಶಿ ಅವರ ಗಂಭೀರ ಆಗ್ರಹ ನಿಜಕ್ಕೂ ಒಂದು ಹೊಸ ಬಗೆಯ ಅರ್ಥಪೂರ್ಣ ಚಿಂತನೆ. ಆ ನಿಟ್ಟಿನ ಪ್ರಯತ್ನ ಇದು ತನಕ ಸಾಗಿಲ್ಲ ಎಂಬುದನ್ನು ಎಚ್ಚರಿಸುವಂತೆ ಸೂಚಿಸುವ ಮಾತುಗಳು ಇವು. ಇಂಥ ಪರಿಶೀಲನೆಯ ಮೂಲಕ ಡಾ। ಕಾರಂತರ ಪ್ರಯತ್ನದಿಂದ ಹಿಡಿದು ಇಂದೀಗ ನಾಡಿನ ಒಳಗೆ ಮತ್ತು ಹೊರರಾಷ್ಟ್ರಗಳಲ್ಲಿ ನಡೆಯುತ್ತಿರುವ ಯಕ್ಷಗಾನ ಪ್ರಯೋಗ ಪ್ರದರ್ಶನಗಳ ಇತಿಮಿತಿಗಳೆಡೆಗೆ ನಮ್ಮ ಗಮನ ಹರಿಯುವಂತೆ ಮಾಡಿದ್ದಾರೆ ಡಾ। ಜೋಶಿ.

ಹೀಗೆ ಪ್ರತಿಯೊಂದು ಪ್ರಬಂಧದಲ್ಲಿ ಸುಮಾರು ಇನ್ನೂರು ಮುನ್ನೂರು ವರ್ಷಗಳ ಯಕ್ಷಗಾನದ ಬೆಳವಣಿಗೆಯ ವಿವಿಧ ವಿಭಾಗಗಳೆಡೆಗೆ ತನ್ನ ಚಿಂತನೆಯ ಹಾರಾಟವನ್ನು ನಡೆಸಿ ಈ ಗ್ರಂಥವನ್ನು ಸಂಗ್ರಹ ಯೋಗ್ಯವಾಗಿಸಿದ್ದಾರೆ ಲೇಖಕರು. ಒಂದನ್ನು ಪ್ರಸ್ತಾಪಿಸುವಾಗ ಇನ್ನಷ್ಟು ವಿಚಾರಗಳೆಡೆಗೆ ಅಥವಾ ತನ್ನ ಸಮಕಾಲೀನ ಶ್ರೇಷ್ಠರ ಸಾಧನೆಗಳ ಬಗೆಗೆ ಓದುಗನ ಆಸಕ್ತಿ ಕೆರಳುವಂತೆ ಮುಕ್ತ ಸಂಭಾಷಣೆಯ ಲಹರಿಯನ್ನು ನೀವೀ ಪುಸ್ತಕದಲ್ಲಿ ಕಾಣಬಹುದು. ಕಾರಂತರ ಪ್ರಸ್ತಾಪದಲ್ಲಿ ಕುಕ್ಕಿಲರ ಶ್ರೇಷ್ಠತೆಯ ವಿವೇಚನೆ ಅಧ್ಯಯನ ಯೋಗ್ಯವಾಗಿ ಬಂದಿದೆ. ಯಕ್ಷಗಾನದ ಭಾಷೆಯಲ್ಲೇ ಹೇಳುವುದಾದರೆ ಚೌಕಿಯಿಂದ ರಂಗಸ್ಥಳಕ್ಕೆ ಹೊಸ ಹೊಸ ವೇಷ ಬಂದ ಹಾಗೆ. ಯಕ್ಷಗಾನ ಕವಿ ಚರಿತ್ರೆಯ ವಿಷಯವನ್ನು ಹೇಳುವಲ್ಲಿ ಕಾರಂತರ ವಿಶೇಷ ಕೊಡುಗೆಯ ವಿವೇಚನೆ ನಡೆದಿದೆ. ಕುಕ್ಕಿಲ ಕೃಷ್ಣ ಭಟ್ಟರು, ನೀರ್ಪಾಜೆ ಭೀಮ ಭಟ್ಟರು, ದಿ। ಮಂಜೇಶ್ವರ ಗೋವಿಂದ ಪೈಗಳು ಇವರೆಲ್ಲರನ್ನು ವಾದದ ಒಂದು ಪಕ್ಷವಾಗಿಸಿ ಕಾರಂತರು ಮತ್ತು ಬೈಕಾಡಿ ವೆಂಕಟಕೃಷ್ಣರಾಯರನ್ನು ಇನ್ನೊಂದು ಪಕ್ಷದಲ್ಲಿರಿಸಿ 1950–80ರ ತನಕ ನಡೆದ ಪಾರ್ತಿಸುಬ್ಬನ ಸಮಸ್ಯೆಯ ಒಳಹೊರಗುಗಳನ್ನು ಪುಟ 87ರಿಂದ ಹಿಡಿದು ಎರಡು ಮೂರು ಪುಟಗಳಲ್ಲಿ ಓದುಗ ಗಂಭೀರವಾಗಿ ಗಮನಿಸುವಂತೆ ವಿವೇಚನೆ ನಡೆದಿದೆ.

ಅಲ್ಲಲ್ಲಿ – ಪ್ರೊ. ಅಮೃತರ ಆಳ ಚಿಂತನೆಗಳ ಪ್ರಸ್ತಾವ, ಡಾ. ರಾಘವ ನಂಬಿಯಾರ್ ನಡೆಸಿದ ದೊಂದಿ ಬೆಳಕಿನ ಪ್ರಯೋಗದ ಪ್ರಸ್ತಾಪ ಅಥವಾ ಕೆರೆಮನೆ ಕಲಾವಿದರ ಅದರಲ್ಲೂ ಮುಖ್ಯವಾಗಿ ದಿ।ಶಂಭು ಹೆಗಡೆಯವರ ಮೂಲ ಚಿಂತನೆಗಳ ವಿಶ್ಲೇಷಣೆ ಇತ್ಯಾದಿಗಳೆಲ್ಲ ಮುಂದಿನ ಪುಟಗಳಲ್ಲಿ ಓದುಗನ ಆಸಕ್ತಿಯನ್ನು ಕೆರಳಿಸುವಂತೆ ಬಂದಿದೆ. ನನ್ನ ಮಿತಿಯ ಅರಿವು ನನಗಿದೆ. ಪ್ರತಿಯೊಂದು ಲೇಖನದ ವೈಶಿಷ್ಟಗಳನ್ನು ಹೇಳದೆ ಮಾದರಿಗಾಗಿ ಕೆಲವನ್ನು ಮಾತ್ರ ಪ್ರಸ್ತಾಪಿಸಿದ್ದೇನೆ. ಆದುದರಿಂದಲೇ ಒಂದು ನಿರೀಕ್ಷೆ, ಮುಖ್ಯವಾಗಿ ಯಕ್ಷಗಾನಕ್ಕೆ ಸಂಬಂಧಿಸಿ ಮತ್ತು ನಾಡಿನ ಕಲೆ–ದರ್ಶನಾದಿಗಳಿಗೆ ಸಂಬಂಧಿಸಿ ಸೂಕ್ಷ್ಮ ದಾಖಲೆಗಳ ಮಹಾಸಂಪುಟ ಡಾ. ಜೋಶಿ ಅವರ ಲೇಖನಿಯಿಂದ ಬರಲಿ ಎಂಬುದೇ ಈ ಮುನ್ನುಡಿಕಾರನ ಪ್ರೀತಿಯ ನಿರೀಕ್ಷೆ. ಅವರಿಂದ ಮಾತ್ರ ಸಾಧ್ಯವಾಗಬಹುದಾದ ಕ್ರೋಢೀಕರಣದ ಕಾರ್ಯ ಅದು. ತಾನು ಕೇಳಿದ್ದು ಕಂಡದ್ದು ಉಳಿದವರೆಲ್ಲ ಹೇಳಿದ್ದು ಹತ್ತು ಹಲವು ಬಗೆಗಳಲ್ಲಿ ಹೇಗೆ ಬರಬೇಕು ಎನ್ನುವುದಕ್ಕೆ ಕೆಲವು ಮಾದರಿಗಳು ಈ ಪುಸ್ತಕದಲ್ಲೇ ದೊರಕುತ್ತವೆ. ಈ ನಿಟ್ಟಿನಲ್ಲಿ ಬರಿದಾಗದ ಉಗ್ರಾಣ ಅವರದು ಎಂಬ ಸೂಚನೆಯೂ ದೊರಕುತ್ತದೆ. 'ನಿಮ್ಮ ಸಮೂಹದ ಪ್ರಯೋಗ ಗಳ ಸಮಗ್ರ ಅಧ್ಯಯನ ನಡೆಯಬೇಕು ಆಚಾರ್ಯರೆ' ಎಂದು ಎದುರಾದಾಗಲೆಲ್ಲ ಎಚ್ಚರಿಸುತ್ತಿದ್ದ ಜೋಶಿ ಅವರಿಗೆ ಅವರ ಧಾಟಿಯಲ್ಲೇ ಹೇಳುವ 'ಅಸ್ತ್ರಕ್ಕೆ ಪ್ರತಿ ಅಸ್ತ್ರ' ಎಂಬ ವರಸೆಯಿಂದ ನಾನು ಈ ಆಶಯವನ್ನು ವ್ಯಕ್ತಪಡಿಸುತ್ತಿಲ್ಲ. ಮುನ್ನುಡಿ ಬರೆಯ ಹೊರಟು ಒಂದು ಸ್ವಗತ ಕಥನವಾಗಿಸಿದ್ದೇನೆ ನನ್ನ ಮಿತಿಯೊಳಗೆ. ಅವರ ನಿರೀಕ್ಷೆಗೆ ಭಿನ್ನವಾಗಿ.

ಆದರೂ ಮುಗಿಸುವ ಮೊದಲು ಮತ್ತೆ ಹೇಳಬೇಕು ಹಲವು ನೋಟಗಳ ಈ ಪುಸ್ತಕ ಹಲವು ಚಿಂತನೆಗಳ ಅನುಸಂಧಾನಕ್ಕೆ ಒಂದು ಪ್ರವೇಶಿಕೆಯಂತಿದೆ. ಕುಕ್ಕಿಲ ಸಂಪಾದಿತ 'ಪಾರ್ತಿಸುಬ್ಬನ ಯಕ್ಷಗಾನ' ಪ್ರಕಟಣೆ ಒಂದು ಘಟನೆ ಎಂದು ಡಾ। ಜೋಶಿ ಉಲ್ಲೇಖಿಸುವಾಗ ಆ ವಿಚಾರ ಅಲ್ಲಿಗೇ ನಿಲ್ಲುವುದಿಲ್ಲ. ಹಲವು ಪದರಗಳನ್ನೊಳಗೊಂಡ ಪ್ರಸ್ತಭೂಮಿಯಂತೆ ಚಿಂತನೆಯ ಕೃಷಿಗೆ ತೆರೆದುಕೊಳ್ಳುವಂತಿದೆ. ಮೊದಲ ಲೇಖನವಾದ 'ಅರ್ಥಗಾರಿಕೆ...'ಯಲ್ಲಿ (ಪು 3ರಿಂದ) ಜೋಶಿಯವರ ಮುಖ್ಯ ಮಾಧ್ಯಮವಾದ ತಾಳಮದ್ದಲೆ ಮಾತುಗಾರಿಕೆಯ ಹಲವು ಸಾಧ್ಯತೆ ಮತ್ತು ಸಮಸ್ಯೆಗಳನ್ನು ವಿಶ್ಲೇಷಿಸಿದ್ದಾಗಲಿ, ಕಲೆ ಮತ್ತು ಕಲಾವಿದರ ಹಿತರಕ್ಷಣೆಯ ವಿಷಯ ಬರುವಾಗ ಉಡುಪಿಯ ಯಕ್ಷಗಾನ ಕಲಾರಂಗದ ಪ್ರಸ್ತಾಪವಾಗಲಿ(ಪು 67), 'ಮಂಗಳೂರಿನಲ್ಲಿ ಯಕ್ಷಗಾನ' ಎಂಬ ಲೇಖನದಲ್ಲಿ ನಗರ ಕೇಂದ್ರಿತವಾಗಿ ಯಕ್ಷಗಾನದ ಉಳಿವು ಬೆಳವಣಿಗೆ ಯಾರಿಂದ ಹೇಗೆ ಎಷ್ಟು ಬಗೆಗಳಲ್ಲಿ ಕಷ್ಟ ನಷ್ಟಗಳ ಗಡಿಯನ್ನು ಮೀರಿ ನಡೆದಿದೆ ನಡೆಯಬೇಕು ಎಂಬುದರ ವಿಶ್ಲೇಷಣೆಯಾಗಲಿ – ಎಲ್ಲವೂ ಡಾ. ಜೋಶಿಯವರಿಂದ ಸಾಧ್ಯವಾಗಬಹುದಾದ ದಾಖಲೆಗಳ ವಿಶ್ವಕೋಶದ ಹೊಳಹುಗಳಾಗಿ ಕಾಣಿಸುತ್ತದೆ ನನಗೆ.

ಈ ಎಲ್ಲದರ ನಡುವೆ ಹೇಳಬಹುದು. ಈ ಮಹತ್ತ್ವದ ಪ್ರಬಂಧ ಸಂಕಲನದ ದೊಡ್ಡ ಕೊರತೆಯೇ – ಲೇಖನ ಲೇಖನಗಳ ನಡುವೆ ಒಂದು ವ್ಯವಸ್ಥಿತ ತಾತ್ವಿಕ ಕೊಂಡಿ ದೊರಕದಿರುವುದು. ವೈವಿಧ್ಯಮಯ ನೋಟಗಳ ಸಂಗ್ರಹವಿದು ಎಂದು ಒಪ್ಪಿದರೂ ಈ ಕೊರತೆಯನ್ನು ನಿರಾಕರಿಸುವಂತಿಲ್ಲ. 'ಯಕ್ಷಗಾನ ಮಹಾಕವಿ ನೀಡಿದ ಬುನಾದಿ' (ಪು 40ರಿಂದ) 'ಪ್ರದರ್ಶನ–ಮೌಲ್ಯ ಸಂವರ್ಧನ' (ಪು 50ರಿಂದ) 'ಸ್ಥಿರೀಕರಣ–ಪರಿಷ್ಕರಣ–ವಿಸ್ತರಣ' (ಪು 55ರಿಂದ) ಇಂಥ ಲೇಖನಗಳ ಸೂತ್ರ ಸಿದ್ಧಾಂತಗಳು 'ಕಾರಂತ ವಿಸ್ತರಣ' (ಪು 71ರಿಂದ) 'ಕಲಾಪೋಷಕರ ಸುತ್ತ' (ಪು 19ರಿಂದ)ದಂಥ ಲೇಖನಗಳೊಂದಿಗೆ ಸೈದ್ಧಾಂತಿಕ ಸ್ಪರ್ಶಗಳನ್ನು ಹೊಂದದಿರುವ ಕೊರತೆ ಓದುಗನನ್ನು ಕಾಡದಿರದು. ಭಿನ್ನ ವಿನ್ಯಾಸದ ಏರುಪೇರಿನ ಸೌಧ ಸಮುಚ್ಚಯದಂತೆ ಈ ಸಂಕಲನ ಏಕೀಕೃತ ನೋಟದ ಅನುಭವವನ್ನು ಓದುಗನಿಗೆ ನೀಡದೆ ಹೋಗಬಹುದು. ಈ ಕೊರತೆಯನ್ನು ಮೀರಲು ಭಿನ್ನ ಸಂದರ್ಭಗಳಲ್ಲಿ ಭಿನ್ನ ಉದ್ದೇಶಗಳಿಗಾಗಿ ಬರೆದ ಪ್ರಬಂಧಗಳ ಸಂಕಲನವಿದು ಎಂದು ಅರ್ಥೈಸುವ ಸಹೃದಯತನ ನಮ್ಮದಾಗಬೇಕು. ಆಗ ಈ ಲೇಖನಗಳಲ್ಲಿ ಬರುವ ಬಗೆಬಗೆಯ ಆಳವಾದ ಪರಿಶೀಲನೆಗಳನ್ನು ಓದುಗ ತನ್ನ ಮನೋಭಿತ್ತಿಯಲ್ಲಿ ಒಂದು ದೀರ್ಘ ಚಿಂತನೆಯ ರೇಖೆಯಾಗಿ ಗುರುತಿಸುವ ದಾರಿ ದೊರಕುತ್ತದೆ. ಅಂಥ ಸಹೃದಯತನ ದೊರಕಲಿ ಎಂದು ಆಶಿಸಿ ನನ್ನೀ ಮೊದಲ ಹಸಿರು ತಡೆಯನ್ನು ತೋರಣವಾಗಿಸುತ್ತಿದ್ದೇನೆ.





# ಸ್ಥಿರೀಕರಣ–ಪರಿಷ್ಕರಣ–ವಿಸ್ತರಣ

ಡಾ. ಎಂ. ಪ್ರಭಾಕರ ಜೋಶಿ

ಸರ್ವಾಶಾ ಪರಿಪೂರಣಕ್ಷಮಕರಂ ಸರ್ವೋಪಕಾರೋದಯಂ ।
ಸನ್ಮಾರ್ಗಾಭಿರತಂ ಸಮಸ್ತ ದುರಿತ ಪ್ರಧ್ವಂಸಿ ಸತ್ಯಾಸ್ಪದಂ ।
ಬ್ರಹ್ಮಾವಾಸ ಮಹೇಶ ವೇದನಿಲಯಂ ವಿದ್ಯಾಧರೈರಾಜಿತಂ ।
ಪ್ರತ್ಯಕ್ಷಂ ಭುವಿ ಭಾನು ಬಿಂಬ ಸದೃಷಂ ವಂದೇ ಸಭಾಮಂಡಲಂ ।

ಗುರುವೆ ಪರಮಾನಂದ ಸದ್ಗುಣಭರಿತ ಪಾವನಚರಿತ ಸನ್ನುತ
ಸುರನರೋರಗ ಲೋಕರಕ್ಷಕ ವಿಶ್ವಮೂರುತಿಯೆ
ದುರಿತ ತಿಮಿರ ಪತಂಗ ವಿದ್ಯಾಶರಧಿ ಸರ್ವೋತ್ತುಂಗ ಸಂತತ
ಕರುಣದಿಂ ನೀನೆಮಗೆ ಪಾಲಿಸು ಮತಿಗೆ ಮಂಗಲವ

ವಾಚಾತೀತಂ ಮನೋತೀತಂ ಭಾವಾತೀತಂ ನಿರಂಜನಂ
ಸರ್ವಶೂನ್ಯಂ ನಿರಾಕಾರಂ ನಿಶ್ಶಬ್ದಂ ಬ್ರಹ್ಮ ಉಚ್ಚತೇ
– ಪಾರ್ತಿಸುಬ್ಬನ ಯಕ್ಷಗಾನ 'ಸಭಾಲಕ್ಷಣ'ದಿಂದ

ಆತ್ಮೀಯರಾದ ಯಕ್ಷಗಾನ ಕಲಾವಿದರೆ, ಕಲಾಭಿಮಾನಿಗಳೆ, ಸಂಘಟಕರೆ,

ಕರ್ನಾಟಕ ಸಾಂಸ್ಕೃತಿಕ ಕಲಾ ಪ್ರತಿಷ್ಠಾನದ ಈ ಸಮ್ಮೇಳನಕ್ಕೆ ನನ್ನನ್ನು ಅಧ್ಯಕ್ಷನನ್ನಾಗಿ ಆರಿಸಿ ತೋರಿಸಿದ ಈ ದೊಡ್ಡ ಗೌರವಕ್ಕಾಗಿ, ಪ್ರೀತಿಗಾಗಿ ಪ್ರತಿಷ್ಠಾನದ ಮುಖ್ಯಸ್ಥರಾದ ಸಾಂಸ್ಕೃತಿಕ ಕಾರ್ಯಸಾಹಸಿ ಶ್ರೀ ಎಸ್.ಎನ್. ಪಂಜಾಜೆ ಮತ್ತು ಬಳಗಕ್ಕೆ ಕೃತಜ್ಞತೆ ಎಂದಷ್ಟೇ ಹೇಳಿದರೆ ಸಾಲದು.

**ವಂದೇ ಗುರುಪರಂಪರಾಂ**

ಈ ಸಂದರ್ಭದಲ್ಲಿ ನಾನು ಯಕ್ಷಗಾನ ಕ್ಷೇತ್ರದಲ್ಲಿ ಪ್ರವೇಶಿಸಿ ಮುನ್ನಡೆಯಲು ಕಾರಣರಾದವರನ್ನು ಸಂಕ್ಷೇಪವಾಗಿ ಸ್ಮರಿಸುವುದು ಕರ್ತವ್ಯ. ನನ್ನ ಹಿರಿಯರು, ಯಕ್ಷಗಾನದ ಗುರುಗಳಾಗಿ ನಮ್ಮೂರ ಪರಿಸರದಲ್ಲಿ ಖ್ಯಾತರಾಗಿದ್ದ ನನ್ನ ಅಜ್ಜ ದಿ. ಅನಿರುದ್ಧ ಭಟ್, ನನ್ನನ್ನು ಬೆಳೆಸಿದ ಮಾಳದ ಶ್ರೀ ಪರಶುರಾಮ ಯಕ್ಷಗಾನ ಮಂಡಳಿ, ಕಾರ್ಕಳದ ಶ್ರೀ ಅನಂತಪದ್ಮನಾಭ ಯಕ್ಷಗಾನ ಮಂಡಳಿ, ಶ್ರೀ ವೆಂಕಟರಮಣ ಯಕ್ಷಗಾನ ಕಲಾ ಸಮಿತಿ, ವಿವಿಧ ಯಕ್ಷಗಾನ ಸಂಘಗಳು, ವೇದಿಕೆಗಳು, ಹಿರಿಕಿರಿಯ ಸಹವರ್ತಿಗಳು ಸ್ಮರಣೀಯರು. ಯಕ್ಷಗಾನದ ಮಹಾ ಪ್ರತಿಭೆ ಡಾ. ಶೇಣಿ ಅವರು, ಮಲ್ಪೆ ಸಾಮಗ ಸೋದರರು ಮೊದಲಾದ ಹಿರಿಯರಿಂದ ತೊಡಗಿ ಇಂದಿನ ಸಹಕಲಾವಿದರ ತನಕ ನನ್ನ ಬೆಳವಣಿಗೆಗೆ ಕಾರಣರು. ಡಾ. ಶಿವರಾಮ ಕಾರಂತ, ಕುಕ್ಕಿಲ ಕೃಷ್ಣಭಟ್ಟರಿಂದ ಮೊದಲ್ಗೊಂಡು ಪ್ರೊ. ಅಮೃತ ಸೋಮೇಶ್ವರ, ಡಾ. ಕೆ.ಎಮ್. ರಾಘವ ನಂಬಿಯಾರ್, ದಿ.ಮಹಾಬಲ ಹೆಗಡೆ, ಶಂಭು ಹೆಗಡೆ ತನಕ ಅನೇಕ ಹಿರಿಕಿರಿಯರು ಸಂಶೋಧನೆ, ವಿಮರ್ಶೆಗಳಿಗೆ ಸಹವರ್ತಿಗಳು ಸ್ಫೂರ್ತಿದಾಯಕರು. ಸಂಘಟನೆಗಳು, ವೇದಿಕೆಗಳು, ಸಂಸ್ಥೆಗಳು, ಪ್ರಸಾರ ಮಾಧ್ಯಮಗಳು ನೀಡಿದ ಅವಕಾಶಗಳು, ಎಲ್ಲಾ ಕಲಾವಿದ ಮಿತ್ರರು ನೀಡಿದ ಅವಕಾಶ, ಪ್ರೀತಿ ಸ್ನೇಹಗಳು ಅವಿಸ್ಮರಣೀಯ. ನನ್ನ ಕುಟುಂಬದ ಸಹಾಯ ವಿಶೇಷವಾದದ್ದು. ಇವರೆಲ್ಲ ಒಂದಲ್ಲ ಒಂದು ಬಗೆಯಿಂದ ಗುರುಗಳೇ. ಅವರಿಂದ ನಾನು ಉಪಕೃತ.

ಹಿಂದಿನ ಸಮ್ಮೇಳನಗಳ ಅಧ್ಯಕ್ಷರಾದ ಹೊಸ್ತೋಟ ಮಂಜುನಾಥ ಭಾಗವತರು, ರಾಮದಾಸ ಸಾಮಗ, ದಿ. ಮುದೇನೂರು ಸಂಗಣ್ಣ, ಡಾ.ರಮಾನಂದ ಬನಾರಿ ಅವರನ್ನು ಈ ಸಂದರ್ಭದಲ್ಲಿ ನೆನೆಯುತ್ತೇನೆ.

**ನಿರೀಕ್ಷೆ**

ಇಂತಹ ಸಮ್ಮೇಳನಗಳ ಅಧ್ಯಕ್ಷ ಭಾಷಣವೆಂಬುದು ಏನನ್ನು ಒಳಗೊಂಡಿರಬೇಕೆಂಬ ಕೆಲವು ನಿರೀಕ್ಷೆಗಳಿರುತ್ತವೆ. ಕಲೆಯ ಭೂತ ವರ್ತಮಾನ ಭವಿಷ್ಯಗಳ ವಿವೇಚನೆ, ಮುಖ್ಯತಃ, ಪ್ರಸ್ತುತ ಸ್ಥಿತಿ – ಗತಿಗಳ ಮತ್ತು ಆಗಬೇಕಾದ ಕೆಲಸಗಳ ಚಿಂತನೆಗಳು ಇವೆಲ್ಲ ಅಪೇಕ್ಷಿತ. ಆದರೆ ಹೀಗೆ ಮಾಡುವಾಗ, ಎಲ್ಲಿ ಇದು ನಾನು ಭಯಪಡುವ

'ಉಪದೇಶ ಸಂಹಿತೆಯಾಗುತ್ತದೋ', ಅಲ್ಲ 'ನನಗೆ ಚೆನ್ನಾಗಿ ಪರಿಣತಿ ಇರುವ ಪ್ರಸಂಗವಾದ ಅಧಿಕಪ್ರಸಂಗವಾಗಿ ಬಿಡುತ್ತದೋ' ಎಂಬ (ಕುಶಿ ಅವರು ಟಂಕಿಸಿದ ಒಂದು ನುಡಿ ನಾಣ್ಯ) ಭೀತಿಯಿಂದಲೇ ಕೆಲವು ವಿಚಾರಗಳನ್ನು ಮಂಡಿಸುತ್ತೇನೆ. ಇದು ಮಾರ್ಗದರ್ಶಿ ಪ್ರವಚನವಲ್ಲ. ನಾವು ನೀವೆಲ್ಲ ಸೇರಿ ಸಹಚಿಂತನ ಮಾಡಬಹುದಾದ 'ಸಂಗತಿ ಪ್ರಸಂಗ', ಇದು ನಿಮ್ಮದೇ ಸಂಭಾಷಣ.

**ಯಕ್ಷಗಾನ – ಯಕ್ಷಗಾನಗಳು**

ಯಕ್ಷಗಾನವೆಂಬ, ಪ್ರಾಯಃ ಗೀತ ಪ್ರಬಂಧ ಜಾತಿಯಿಂದ ತನ್ನ ಹೆಸರನ್ನು ಹೊಂದಿರುವ ಈ ಸಾಂಪ್ರದಾಯಿಕ ರಂಗ ಪ್ರಕಾರವು ಕರ್ನಾಟಕವು ಹೆಮ್ಮೆಪಟ್ಟುಕೊಳ್ಳ ಬಹುದಾದ ಕಲಾ ಸಂಪದ. ಆಟ, ಬಯಲಾಟ, ದಶಾವತಾರ ಆಟ, ಕೇಳಿಕೆ ಹೀಗೆ ಬೇರೆ ಬೇರೆ ಹೆಸರುಗಳಿಂದ ಬಂದಿರುವ, ಕರಾವಳಿ–ಮಲೆನಾಡುಗಳಲ್ಲಿ ಪ್ರದರ್ಶನದಿಂದ ಅಭಿವೃದ್ಧಿ ಹೊಂದಿರುವ ಯಕ್ಷಗಾನವು ಭಾರತಾದ್ಯಂತ ಕಾಣಿಸುವ, ವಿಶೇಷತಃ ಅಸ್ಸಾಂನಿಂದ ಶ್ರೀಲಂಕಾ ತನಕ 'ಭಕ್ತ ಪಥ' (ಬತ್ತದ ದಾರಿ, ಅಕ್ಕಿ ಪಟ್ಟಿ, Rice Belt )ದ ಸಬಲವಾದ ಚೈತನ್ಯಶಾಲಿ ಕಲೆಗಳ ಕುಟುಂಬಕ್ಕೆ ಸೇರಿದ್ದು ಈ ಎಲ್ಲಾ ಕಲೆಗಳೂ ಪರಸ್ಪರ ಸಂಬಂಧ ವುಳ್ಳವು, ಏಕಮೂಲವೆಂಬಷ್ಟು ಸಾಮ್ಯ, ಹಾಗೆಯೆ ವಿಚಿತ್ರ ಭಿನ್ನತೆಗಳು ಇವುಗಳೊಳಗಿವೆ.

ಕರ್ನಾಟಕದಲ್ಲಿ ಕರಾವಳಿಯ ಯಕ್ಷಗಾನ ತೆಂಕು, ಬಡಗು, ಉತ್ತರಕನ್ನಡ ತಿಟ್ಟುಗಳಲ್ಲದೆ; ಮೂಡಲಪಾಯ, ದೊಡ್ಡಾಟ, ಸಣ್ಣಾಟ, ಪಾರಿಜಾತ, ಗಟ್ಟದ ಕೋರೆ, ಕೇಳಿಕೆ, ದಾಸರಾಟ ಮೊದಲಾದ ವಿವಿಧ ರೀತಿಯ ಬಯಲಾಟಗಳಿವೆ. ಇವುಗಳು ಒಂದೇ ಸಮೂಹದ ಕಲೆಗಳಾದರೂ ಬೆಳೆದು ಬಂದ ಸ್ಥಿತಿ ಗತಿಗಳು ಬೇರೆ. ಎಲ್ಲ ಪ್ರಕಾರಗಳಿಗೆ ಹೊಂದುವಂತೆ ಅಡಕವಾದ ವಿವೇಚನೆ ಕಠಿಣ, ಆದರೂ ಇಲ್ಲಿ ಪ್ರಸ್ತಾಪಿಸಿದ ಅಂಶಗಳಲ್ಲಿ ಎಲ್ಲಾ ಪ್ರಕಾರಗಳಿಗೆ ಭಾಗಶಃ ಹೊಂದಿಕೆಯಾಗಬಹುದಾದವು. ಹತ್ತನೆಯ ಶತಮಾನದ ಬಳಿಕ ವಿಶೇಷ ಉತ್ಕರ್ಷವನ್ನು ಕಂಡ ಭಕ್ತಿ ಪಂಥದಿಂದ ರೂಪುಗೊಂಡು ಇಂದಿನವರೆಗೆ ಬೆಳೆದು ಬಂದಿರುವ ಕಲೆ ಬಯಲಾಟ. ಇದಕ್ಕೆ ಎಂಟು ಶತಮಾನಗಳ ಖಚಿತವಾದ ಹಿನ್ನೆಲೆ ಇದೆ. (ಜನ್ನನ ಯಶೋಧರ ಚರಿತೆಯ 'ಕೇಳಿಕೆ'ಯ ಉಲ್ಲೇಖ – ಕುಕ್ಕಿಲ ಸಂಪುಟ. ಕುಕ್ಕಿಲ ಕೃಷ್ಣ ಭಟ್ಟ, ಕರ್ನಾಟಕ ಸಂಘ, ಪುತ್ತೂರು)

ಭರತ ಮುನಿಯ ನಾಟ್ಯಶಾಸ್ತ್ರದಲ್ಲಿ ಕಾಣುವ ನಾಟ್ಯರಂಗದ ಅನೇಕ ವಿವರಗಳು ನಮ್ಮ ಅಖಿಲ ಭಾರತೀಯ ಬಯಲಾಟಗಳ ಅನೇಕ ಅಂಶಗಳನ್ನು ತದ್ವತ್ತಾಗಿ ಹೋಲುತ್ತವೆ. (ಉಲ್ಲೇಖ ಅದೇ) ಅಂದರೆ, ಭಾರತದಲ್ಲಿ ಈ ಬಗೆಯ ನಾಟ್ಯ ಪರಂಪರೆ ಕ್ರಿಸ್ತಪೂರ್ವ ನಾಲ್ಕನೆಯ ಶತಮಾನಕ್ಕೂ ಮೊದಲಿನದು, ನಾಟ್ಯ ಶಾಸ್ತ್ರಕಾರನು ಸಂಗ್ರಹಿಸುವ ಕಾಲಕ್ಕೆ ಅವನ ಮುಂದೆ ಇದ್ದದ್ದು ಎಂಬುದು ಸ್ಪಷ್ಟ. ಅಲ್ಲಿಂದ ಮುಂದೆ ಇದು ಹಲವು ಹಂತ ಗಳನ್ನು ದಾಟಿ ಕವಲುಗಳಾಗಿ ಬೆಳೆದು ಬಹುಶಃ ಹದಿನಾರನೆಯ ಶತಮಾನಕ್ಕಾಗುವಾಗ, ಇಂದು ನಾವು ಕಾಣುವ ರೂಪಗಳ ಮಾತೃಕೆಯಾಗಿ ಆಕಾರಗೊಂಡಿರಬೇಕು.

**'ಯಕ್ಷಗಾನ' ಒಂದು – ಅದರೊಳಗೆ ಹಲವು**

ನಾವು ಕಲಾ ದೃಷ್ಟಿಯಿಂದ ಒಂದು ಬಗೆಯ 'ಆದರ್ಶ ರೂಪ'ವನ್ನು ಕಲ್ಪಿಸಿಕೊಂಡು ಆ ಮಾನದಿಂದ ವಿಮರ್ಶಿಸುವುದು ಸಹಜವೇ. ಅದು ಕಲಾವಿಮರ್ಶೆಯ ದೃಷ್ಟಿಯಾದರೆ, ಅಧ್ಯಯನ ದೃಷ್ಟಿಯಿಂದ ಹಲವು ಬಗೆಯ ಯಕ್ಷಗಾನಗಳಿವೆ. ಸಾಂಪ್ರದಾಯಿಕ, ನಾಟಕ ಮಿಶ್ರಿತ, ಹವ್ಯಾಸಿ – ವ್ಯವಸಾಯಿ ಇತ್ಯಾದಿ ಪ್ರಾಯೋಗಿಕ ರೂಪವಾಗಿ ಬೇರೆಯೇ ಆಗಿ ಗಣನಾರ್ಹ. ಹೀಗೆ ಯಕ್ಷಗಾನ ಇದೆ, ಯಕ್ಷಗಾನಗಳೂ ಇವೆ.

**ಪಾರಂಪರಿಕ ಕಲೆ – ಸ್ವತ್ವದ ಸತ್ವ**

ಯಕ್ಷಗಾನವೂ. ತತ್ಸಮಾನವಾದ ಅನೇಕ ಸಾಹಿತ್ಯ ಕಲೆಗಳೂ (ಉದಾ – ಜಾತ್ರಾ, ತೆರುಕ್ಕುತ್, ಭಾಗವತರು. ದಶಾವತಾರಿ.. ಇತ್ಯಾದಿ) ಸಾರತಃ ಪಾರಂಪರಿಕ ರಂಗಕಲೆಗಳು, ನೃತ್ಯ ವಾದ್ಯ, ನಾಟಕ, ಆಹಾರ್ಯಾದಿ ಅಂಶಗಳ ಮಿಶ್ರಣವಾಗಿರುವ 'ಸಮಗ್ರ' ರಂಗಗಳು. ಇವು ಜಾನಪದವೋ. ಶಾಸ್ತ್ರೀಯವೋ (Folk classical) ಎಂಬ ಪ್ರಶ್ನೆಯನ್ನೆತ್ತಿಕೊಂಡು ಚರ್ಚೆ ನಡೆದಿದ್ದು ಹಲವು ಬಗೆಯ ನಿರ್ಣಯಗಳು ಬಂದಿವೆ. ಪಾಶ್ಚಾತ್ಯ Folk ಮತ್ತು classical ಎಂಬ ವಿಭಜನೆ ನಮ್ಮ ಪ್ರಾಕಾರಗಳಿಗೆ ಹಲವು ಬಾರಿ ಹೊಂದುವುದಿಲ್ಲ. ನಮ್ಮ 'ದೇಶಿ' – 'ಮಾರ್ಗ' ಎಂಬ ವಿಭಾಗವು ಜಾನಪದ ಮತ್ತು ಶಾಸ್ತ್ರೀಯ ಎಂಬ ಅರ್ಥದವು ಅಲ್ಲ. ಯಕ್ಷಗಾನವು ಆಂತರಿಕವಾಗಿಯೇ ಖಚಿತವಾದ ನಿರ್ಣಯಗಳನ್ನು ಅರ್ಥಾತ್ ಶಾಸ್ತ್ರವನ್ನು ಒಳಗೊಂಡ ಶಾಸ್ತ್ರೀಯ ಕಲೆ, ದೇಶಿ ಕಲೆ – ಇದನ್ನು 'ಪಾರಂಪರಿಕ ರಂಗಭೂಮಿ' (Traditional Theatre) ಅನ್ನುವುದು ಸೂಕ್ತ.

ಯಕ್ಷಗಾನದಂತಹ ಶೈಲಿಬದ್ಧವಾದ, ರಮ್ಯಾದ್ಭುತವಾದ ಮತ್ತು ಅವಾಸ್ತವ ರಂಗದ ಸತ್ವವು ನಿಂತಿರುವುದು ಅದರ ರೂಪ, ಸೌಂದರ್ಯ, ಗಾಂಭೀರ್ಯಗಳಲ್ಲಿ ಅರ್ಥಾತ್ ಅದರ ಗಾನ, ನರ್ತನ, ವೇಷಗಳ ಶೈಲಿ, ಅಭಿವ್ಯಕ್ತಿಯ ರಂಗ ವಿಧಾನಗಳು ಅಂಗೀಕೃತ ಮೂಲಾಂಶಗಳು. ಶೈಲಿಯ ಹೊರಗೆ ರೂಪವನ್ನು ಭಂಗಿಸಿ ಮಾಡುವ 'ಹೊಸತನ' ವಾಗಲಿ, ರಂಗದ ಯಶಸ್ಸು ಆಗಲಿ ಇಲ್ಲಿ ಸ್ವೀಕಾರ್ಯವಲ್ಲ. ಯಕ್ಷಗಾನ ಯಕ್ಷಗಾನವಾಗಿ ಬಾಳಬೇಕು, ಬೆಳೆಯಬೇಕು. ಮೆರೆಯಬೇಕು. ಬೇರೆ ಏನೋ ಆಗಿ ಅಲ್ಲ. ಈ ಸ್ವರಕ್ಷಣೆ, ಪ್ರಜ್ಞೆ, ಗುರುತಿನ ಪ್ರತ್ಯೇಕ ಅದರ ಜೀವಶಕ್ತಿ.

ಜತೆಗೆ ಗಮನಿಸಬೇಕಾದುದು ಯಕ್ಷಗಾನದ ಕಲೆಯ ಪ್ರದರ್ಶನ ತಂತ್ರ, ರೂಪ, ಕಥಾನಕ, ಆಶಯಗಳಲ್ಲಿ ಕಲೋಚಿತವಾದ ಮತ್ತು ಕಾಲೋಚಿತವಾದ ಸುಧಾರಣೆಗಳಿಗೆ ಇದರಲ್ಲಿ ಅವಕಾಶ ಇದ್ದೇ ಇದೆ. ಕಲಾ ಸೌಂದರ್ಯ, ಪರಂಪರೆಯ ರಕ್ಷಣೆಯೆಂದರೆ ಇದ್ದಂತೆ ಇರುವುದು ಎಂದಷ್ಟೇ ಅಲ್ಲ. ನವೀನ ಜ್ಞಾನ ಪ್ರಭಾವ. ಪ್ರಗತಿಗಳನ್ನು ತನ್ನ ಹಾಗೆ ಜೀರ್ಣಿಸಿಕೊಂಡು ಆತ್ಮೀಕರಿಸಿಕೊಳ್ಳುವುದು. ಮುನ್ನೋಟದಿಂದ ಮುನ್ನಡೆಯುವುದೂ ಹೌದು.

ಶತಮಾನಗಳ ಕಾಲ ಬೆಳೆದು ಬಂದ ಒಂದು ರೂಪಕ್ಕೆ ಸಂದಿರುವ, ವಿವಿಧ

ಅಂಗೋಪಾಂಗಗಳಿಂದ ಕೂಡಿದ ಪ್ರೌಢವೂ, ಸುಂದರವೂ, ಸಂಕೀರ್ಣವೂ ಆಗಿರುವ ಒಂದು ಸಮುಚ್ಚಯ ಕಲೆಯಲ್ಲಿ ಮುಂದಡಿಯಿಡುವಾಗ ತುಂಬಾ ಜಾಗ್ರತೆ, ಭಯ, ವಿನಯಗಳು ಅಗತ್ಯ. ಈ ದೃಷ್ಟಿಯಿಂದ ಯಕ್ಷಗಾನಕ್ಕೆ ಇಂದು ಬೇಕಾಗಿರುವುದು ಸ್ಥಿರೀಕರಣ–ಪರಿಷ್ಕರಣ–ವಿಸ್ತರಣ ಎಂಬ ತ್ರಿವಿಧ ಕ್ರಿಯಾ ಸೂತ್ರ.

**ಸ್ಥಿತಿ–ದ್ವಿಮುಖ ಚಲನೆ**

ಈ ಕುರಿತು ಯೋಚಿಸುವುದಕ್ಕೆ ಹಿನ್ನೆಲೆಯಾಗಿ ಒಟ್ಟು ರಂಗ ಸ್ಥಿತಿ ಚಿತ್ರವನ್ನು ಗಮನಿಸಬಹುದು. ಸುಮಾರು ಮೂವತ್ತೈದು (ಈಗ ನಲವತ್ತೈದು) ವ್ಯವಸಾಯಿಕ, ಅರೆವ್ಯವಸಾಯಿಕ ತಂಡಗಳು; ನೂರರಷ್ಟು ಹವ್ಯಾಸಿ ಗುಂಪುಗಳು ಕರಾವಳಿ–ಮಲೆನಾಡು ಗಳಲ್ಲಿವೆ. ಒಂದು ಸಾವಿರದಷ್ಟು (ಈಗ ಒಂದು ಸಾವಿರದ ಐನ್ನೂರು) ವ್ಯವಸಾಯಿಕ ಕಲಾವಿದರಿದ್ದಾರೆ. ಮಕ್ಕಳ ಮೇಳಗಳು, ಮಹಿಳಾ ತಂಡಗಳು, ಆಕಾಶವಾಣಿ ತಂಡಗಳಿವೆ. ಬೊಂಬೆಯಾಟದ ಐದು ತಂಡಗಳಿವೆ. ಹರಕೆ ಬಯಲಾಟದ ಮೇಳಗಳಲ್ಲಿ ಕೆಲವು ಹಲವು ವರ್ಷಗಳ ಮುಂಗಡ ಬುಕ್ಕಿಂಗ್ ಹೊಂದಿವೆ. ವರ್ಷಕ್ಕೆ ಸುಮಾರು ಹದಿನೈದು ಸಾವಿರ ಪ್ರದರ್ಶನಗಳಾಗುತ್ತಿವೆ. ಹಲವು ಸಂಶೋಧನೆ, ವಿಮರ್ಶೆ, ಕಮ್ಮಟ, ಗೋಷ್ಠಿಗಳು ಕಳೆದ ಐದು ದಶಕಗಳಲ್ಲಿ ಜರಗಿವೆ. ಶಿಕ್ಷಣ ಕೇಂದ್ರಗಳು ಕಾರ್ಯನಿರತವಾಗಿವೆ. ಹೀಗೆ ಒಟ್ಟು ಚಿತ್ರವು ಆಶಾದಾಯಕವಾಗಿದೆ. ಬಹುಶಃ ಯಕ್ಷಗಾನವು ದೇಶದ ಸಾಂಪ್ರದಾಯಿಕ ರಂಗಭೂಮಿಗಳಲ್ಲೇ ಅತ್ಯಂತ ಜೀವಂತ ರಂಗವಾಗಿರಬಹುದು. ಕರ್ನಾಟಕದ ಇತರ ಬಯಲಾಟಗಳು ಸಾಕಷ್ಟು ಜೀವಂತವಾಗಿವೆ. ಇದು ಒಂದು ಮುಖ.

ಇನ್ನೊಂದೆಡೆ, ಹರಕೆ ಆಟಗಳೆಂಬವು ಕೆಲವೊಮ್ಮೆ 'ಹರಕೆ'ಗಳೇ ಆಗುತ್ತಿವೆ. ಇಡೀಯ ರಾತ್ರಿಯ ಪ್ರದರ್ಶನಗಳಿಗೆ ಪ್ರೇಕ್ಷಕ ವರ್ಗ ಕಡಿಮೆಯಾಗುತ್ತಿದೆ. (ಇದಕ್ಕೆ ಚಿಕ್ಕ ಕುಟುಂಬಗಳು, ಕಾನೂನು ಭದ್ರತೆ ಸ್ಥಿತಿಗಳ ಆತಂಕ, ಸೌಲಭ್ಯದ ಅಪೇಕ್ಷೆ, ನಗರೀಕರಣ, ಹೆಚ್ಚು ಜನರು ದುಡಿಯಬೇಕಾದ ಸ್ಥಿತಿ, ಅಸ್ಥಿರವಾಗುತ್ತಿರುವ ಕೃಷಿ ಕ್ಷೇತ್ರ, ಮನೆಯಲ್ಲೇ ಸಿಗುವ ಎಲೆಕ್ಟ್ರಾನಿಕ್ ರಂಜನೆಯ ರಾಶಿ.. ಇತ್ಯಾದಿ ಸಾಮಾಜಿಕ ಕಾರಣಗಳಿವೆ) ಅಂತೆಯೇ ಡೇರೆ ಮೇಳಗಳ ಸಂಖ್ಯೆ ಇಳಿದಿದೆ. ಮೇಳಗಳ ಪ್ರಮಾಣಕ್ಕೆ ತಕ್ಕಂತೆ ಕಲಾವಿದರು ದೊರಕುತ್ತಿಲ್ಲ. ಬಾಲಗೋಪಾಲ, ಕೋಡಂಗಿ ವೇಷಗಳಿಗೆ ಕಲಾವಿದರ ತೀರ ಕೊರತೆ, ಇದೇ ಕೊರತೆ ಮುಂದೆ ಇತರ ವೇಷಗಳಿಗೆ ಬರಲಿದೆ. ಯಕ್ಷಗಾನ ಕೇಂದ್ರಗಳಿಗೆ ವಿದ್ಯಾರ್ಥಿಗಳೇ ಇಲ್ಲದ ಸ್ಥಿತಿ.

ರಂಗದ ಮೇಲೆ ಸುಲಭ ರಂಜಕ ಕಥಾನಕಗಳು. ಸಂಕರ ನೃತ್ಯಗಳು, ವಿಚಿತ್ರ ಅಭಿರುಚಿಗಳನ್ನು ಉಣಬಡಿಸುವ ತಂತ್ರಗಳು, ವೇಗದ ಆಕರ್ಷಣೆ, ಶೈಲಿ, ಭಂಗ, 'ವಿಶೇಷ ಆಕರ್ಷಣೆ', ಅಂಗೋಪಾಂಗ ಅಸಮಾಂಜಸ್ಯ ಪ್ರಯೋಗವೆಂಬ ಹೆಸರಿನ ಅಗ್ಗದ ನೂತನ ನಾವೀನ್ಯಗಳು ಆ ಯಕ್ಷಗಾನೀಯ ರೂಪಗಳು. ಇವೆಲ್ಲ ಶ್ರೀಮಂತ ಶೈಲಿ ಬದ್ಧ ಕಲೆಯೊಂದರ ಬುಡವನ್ನೇ ಅಲುಗಾಡಿಸಿವೆ. ಇತರ ಕಲೆಗಳಿಗೆ ರಂಗಗಂಧ

ನೀಡಬಲ್ಲ ಯಕ್ಷಗಾನ (ರಂಗ ಅವಧೂತ ಬಿ.ವಿ.ಕಾರಂತರ ನುಡಿ) ಸಿನಿಮಾ ಮೊದಲಾದ ಕಲೆಗಳಿಂದ ವಸ್ತುತಂತ್ರ ಪಡೆಯುವ ಸ್ಥಿತಿಗೆ ಬಂದಿದೆ. ನಮ್ಮ ಶ್ರೀಮಂತಿಕೆ ನಮಗೆ ಗೊತ್ತಿಲ್ಲವಾಗಿದೆ.

**ವ್ಯಾವಸಾಯಿಕ ಅಸ್ಥಿರತೆ**

ಯಕ್ಷಗಾನ ವೃತ್ತಿ ಇಂದು ಆಕರ್ಷಕವೇನಲ್ಲ. ಹಿಂದಿನ ಕಷ್ಟಗಳಿಗೆ ಹೋಲಿಸಿದಾಗ ಸೌಲಭ್ಯ ಹೆಚ್ಚಿದ್ದರೂ ಮನೆಮನೆಗೆ ಬಂದ ಸೌಕರ್ಯ, ಆರ್ಥಿಕ ವಿಸ್ತಾರಗಳೆಡೆಯಲ್ಲಿ ಊರೂರು ತಿರುಗಿ, ಅಸೌಕರ್ಯ, ರಾತ್ರಿ ಇಡೀ ನಿದ್ದೆಗೆಡುವ ಕಠಿಣವಾದ ಉದ್ಯೋಗದತ್ತ ಬರುವವರು ಕಡಿಮೆಯಾಗುವುದು ಸಹಜ. ಇಷ್ಟು ಜನ ವ್ಯವಸಾಯಿ ಕಲಾವಿದರಿರುವುದೇ ಆಶ್ಚರ್ಯ. ಕಲೆಯ ಹುಚ್ಚು ಒಂದು ಆಕರ್ಷಣೆ, ಕಲಾವಿದತ್ವ ಇನ್ನೊಂದು. ಇಂದಿನ ಸನ್ನಿವೇಶದಲ್ಲಿ ಯಕ್ಷಗಾನ ಕಲಾವಿದ ಪಡೆಯುವ ದೊಡ್ಡ ಸಂಬಳ ಕೂಡಾ ತೃಪ್ತಿಕರ ಜೀವನದಲ್ಲ. ಮಕ್ಕಳನ್ನು ಡಾಕ್ಟರ್, ಇಂಜಿನಿಯರ್ ಓದಿಸುವ ಕನಸು ಕಲಾವಿದನಿಗೂ ಸಹಜ ತಾನೇ? ಇದಕ್ಕೆಲ್ಲ ಈ ಗಳಿಕೆ ಪರ್ಯಾಪ್ತವಲ್ಲ. ಯಕ್ಷಗಾನದ ಶೈಲಿ ಸ್ವರೂಪಗಳ ಸಮಗ್ರ ಹಿಡಿತವಿರುವ ಕಲಾವಿದರ ಸಂಖ್ಯೆ ಕಡಿಮೆಯಾಗುತ್ತಿದೆ.

ಮೇಳದ ಸಂಚಾಲಕ, ಯಜಮಾನನಿಗೂ ಸಮಸ್ಯೆಗಳಿವೆ, ವೆಚ್ಚಗಳು ಏರುತ್ತಿವೆ. 'ವೀಳ್ಯ' ಏರಿಕೆಗೆ ವಿರೋಧ ಬರುತ್ತಿದೆ. ಹರಕೆ ಆಟಗಳ ಗೌಜಿ ಗದ್ದಲಗಳಿಗೆ ತುಂಬಾ ವೆಚ್ಚ ಮಾಡುವ ಹರಕೆದಾರರು ವೀಳ್ಯದ ಮೊತ್ತದ ಏರಿಕೆಗೆ ಅಸಮಾಧಾನ ಪಡುತ್ತಾರೆ. 'ಕಲಾವಿದರು ಶಿಸ್ತಿಗೊಳಪಟ್ಟು ಇರುವುದಿಲ್ಲ' ಎಂದು ಮೇಳದ ಯಜಮಾನರು ಹೇಳುತ್ತಾರೆ. ಹುಟ್ಟಿನಲ್ಲಿ ವ್ಯವಸಾಯಿಕ ಯಕ್ಷಗಾನದ ಭವಿಷ್ಯ ಭದ್ರವಾಗಿಲ್ಲ. ಇನ್ನು ಮುಂದೆ ಹೆಚ್ಚು ಹೆಚ್ಚು ಕಲಾವಿದರು ಅರೆ ಹವ್ಯಾಸಿ 'ಫ್ರೀಲ್ಯಾನ್ಸ್' ವ್ಯವಸಾಯಿಗಳಾಗುವ ಲಕ್ಷಣಗಳು ಕಾಣಿಸುತ್ತಿವೆ, ಮೇಳಗಳ ರೂಪಗಳು ಬದಲಾಗಬಹುದು.

**ಸ್ಥಿರೀಕರಣ**

ಯಾವುದೇ ಕಲೆಯು ತನ್ನ ವಿಕಾಸವನ್ನು ಸಾಧಿಸಬೇಕಾದರೆ ತನ್ನನ್ನು ತಾನು ಕಂಡುಕೊಂಡು ಬಲಪಡಿಸಿಕೊಳ್ಳಬೇಕು. ಸ್ವಾತ್ಮಾನುಸಂಧಾನ ಮೊದಲು ಮತ್ತು ಆ ಬಳಿಕ ವಿಕಾಸ. ಯಕ್ಷಗಾನದ ತಿಟ್ಟುಗಳು ಮೊದಲು ತಮ್ಮ ಪ್ರತ್ಯೇಕ ರೂಪಗಳನ್ನು ಮರುಶೋಧನೆ ಮಾಡಿ, ಗುರುತಿಸಿ ಸ್ಥಿರೀಕರಿಸಬೇಕು. ದೊಡ್ಡಾಟ, ಗಟ್ಟದ ಕೋರೆಗಳು ಹಾಗೆಯೇ. ಕಲೆ ಒಳಗಿಂದ ಬೆಳೆಯಬೇಕು, ಸಂಕರ ಮತ್ತು ತೇಪೆಗಳಿಂದಲ್ಲ. ತನ್ನ ನೆಲೆಗಳ ಸ್ಪಷ್ಟ ಅರಿವಿದ್ದಾಗ, ಶೈಲಿಯ ಹಿಡಿತ ಸ್ಪಷ್ಟವಿದ್ದಾಗ ಅನ್ಯ ಪ್ರಭಾವಗಳು ಶೈಲಿಗೆ ಎರಕವಾಗಿ ಸೇರಿ, ಹೊಂದಿ, ಶೈಲಿ ವಿಸ್ತರಣಕ್ಕೆ ಕಾರಣವಾಗುತ್ತದೆ ಎಂಬುದಕ್ಕೆ ದಿ.ಕೆರೆಮನೆ ಶಂಭುಹೆಗಡೆ, ಕೆ. ಗೋವಿಂದ ಭಟ್ಟರ ನೃತ್ಯಶೈಲಿಗಳು ದೃಷ್ಟಾಂತಗಳು.

ಎಲ್ಲ ತಿಟ್ಟುಗಳಿಗೆ ಸಂಬಂಧಪಟ್ಟವರು ಮೊದಲು ತಮ್ಮ ತಿಟ್ಟುಗಳ ವೇಷಭೂಷಣ,

ನೃತ್ಯ, ಗಾನ, ವಿಧಾನ, ರಂಗವಿಧಾನ, ಬಣ್ಣಗಾರಿಕೆಗಳ ಕುರಿತು ಸಮಗ್ರವಾದ ದೃಷ್ಟಿಯಿಂದ, ರಾಜಿ ಇಲ್ಲದ ಮೌಲಿಕ ಕಲಾ ಮೌಲ್ಯ ರಕ್ಷಣೆಯ ('ಮೂಲ ಘಟಕ ಸಂರಕ್ಷಣೆ' – ಡಾ. ಪುರುಷೋತ್ತಮ ಬಿಳಿಮಲೆಯವರ ನುಡಿಗಟ್ಟು) ಕೆಲಸಕ್ಕೆ ಗಮನ ಕೊಡಬೇಕಾದುದು ಪ್ರಾಥಮಿಕ. ಇದು ತೆಂಕುತಿಟ್ಟಿಗೆ ಹೆಚ್ಚು ತುರ್ತಿನದು. ಕಾರಣ ಕಳೆದ ಏಳು ದಶಕಗಳಿಂದ ಸತತ ವಿಘಟನೆಗೊಳ್ಳುತ್ತ ಬಂದಿದೆ. ನಿಶ್ಚಿತ ವೇಷಗಳು, ಕಥಾ ನಡೆಯ, ಕಾಲ ಪ್ರಭೇದದಂತಹ ಸಾಮಾನ್ಯ ವಿಚಾರಗಳಲ್ಲೂ ಒಮ್ಮತವಿಲ್ಲದಿದ್ದರೆ ನಾವು ನಮ್ಮ ನಾಡಿನ 'ಹೆಮ್ಮೆಯ ಕಲೆ' ಎಂದು ಹೇಳುವುದು ಹುಸಿ ಪ್ರತಿಷ್ಠೆಯಾಗುತ್ತದೆ.

ದೊಡ್ಡಾಟ, ಸಣ್ಣಾಟ, ಗಟ್ಟದ ಕೋರೆ, ಬಯಲಾಟಗಳ ಸ್ವರೂಪ, ಸ್ಥಿರೀಕರಣ ಪರಿಷ್ಕಾರಗಳು ಒಟ್ಟೊಟ್ಟಿಗೆ ಆಗಬೇಕಾಗಿವೆ. ವೃತ್ತಿಪರತೆ, ಸಾತತ್ಯ ಮತ್ತು ಶಿಕ್ಷಿತರ ಬೆಂಬಲ ಇಲ್ಲದೆ ಈ ಕಲೆಗಳು, ಶ್ರೀಮಂತ ಕಲೆಗಳಾದರೂ ಅಪರಿವಿಷ್ಕಾರದಿಂದ ಅಳಿವಿನತ್ತ ಸಾಗಿವೆ. ಬೇಕು ಮೂಡಲಪಾಯ, ದೊಡ್ಡಾಟಗಳಿಗೊಬ್ಬ ಕಾರಂತ, ಒಬ್ಬ ಕು.ಶಿ., ಒಬ್ಬ ಶಂಭು.

**ಪರಿಷ್ಕರಣ–ನಿರ್ದೇಶನ**

ಯಾವುದೇ ಕಲೆಯ ಕಾಲ ಕಾಲಕ್ಕೆ ತಕ್ಕ ಸೂಕ್ತ ಪರಿಷ್ಕಾರಗಳನ್ನು ಸಾಧಿಸಬೇಕಷ್ಟೆ? ಹಾಗೆ ಮಾಡುವಾಗ ಕಲಾ ಸ್ವರೂಪ ಗುಣವೃದ್ಧಿ, ಅಭಿವ್ಯಕ್ತಿ ಸೌಂದರ್ಯದ ವರ್ಧನ, ಸೌಲಭ್ಯದ ಅರ್ಥಪೂರ್ಣ ಅಳವಡಿಕೆ, ಕಥೆ–ಕಥಾನಕಗಳ ಅರ್ಥೈಸುವಿಕೆಯ ಮಂಡನೆ, ಆಶಯ, ಔದಾರ್ಯ, ಅಂಗೋಪಾಂಗಗಳಲ್ಲಿ ನಾಜೂಕು ಮತ್ತು ಬಳಕೆಯಲ್ಲಿ ಹೊಸ ಯೋಜನೆಗಳಾಗುವ ಅಗತ್ಯವಿದೆ. ಇದಾಗದಿದ್ದರೆ ಈ ತರಹದ ಕಲೆಗಳ ಭವಿಷ್ಯ ಭದ್ರವಾಗಲಾರವು.

ಈ ದೃಷ್ಟಿಯಿಂದ ಯಕ್ಷಗಾನ ಪ್ರದರ್ಶನಗಳಿಗೆ ಒಂದು ಮಾಧ್ಯಮಬದ್ಧವಾದ ನಿರ್ದೇಶನದ ವ್ಯವಸ್ಥೆ ಅತೀ ಅಗತ್ಯ. 'ಭಾಗವತನೇ ನಿರ್ದೇಶಕ'ನೆಂಬ ಹಳೆಯ ನಂಬುಗೆಯನ್ನು ಮರಳಿ ಚಿಂತಿಸೋಣ. 'ಭಾಗವತ ಭಾಗವತನೇ ಅವನ ಸ್ಥಾನವನ್ನಿಟ್ಟು ಕೊಂಡು ನಿರ್ದೇಶನ ಸಾಧ್ಯ ಮತ್ತು ಅಗತ್ಯ'. (ಪ್ರೊ. ಉದ್ಯಾವರ ಮಾಧವ ಆಚಾರ್ಯ) ಇಡಿಯ ಪ್ರದರ್ಶನವನ್ನು ಯೋಚಿಸಿ ಕಲ್ಪಿಸಿ ಓತಪ್ರೋತವಾಗಿ ರೇಖಿಸಲು ಪ್ರತ್ಯೇಕವಾದ ನಿರ್ದೇಶನದ ವ್ಯವಸ್ಥೆ ಬೇಕು. ಅದು ನಾಟಕ, ಚಲನಚಿತ್ರ, ನೃತ್ಯನಾಟಕಗಳ ನಿರ್ದೇಶನ ಗಳಿಗಿಂತ ಭಿನ್ನವು ಆಗಿರುವುದು ಅಪೇಕ್ಷಿತ.

ಆಧುನಿಕ ತಂತ್ರಜ್ಞಾನವನ್ನು ಬಳಸಿಕೊಳ್ಳುವಾಗ ಯಕ್ಷಗಾನಕ್ಕೆ ಆಧುನಿಕ ಸಾಮಗ್ರಿ ತಂತ್ರಗಳನ್ನು ಹೊಂದಿಸಬೇಕಲ್ಲದೆ ಸಾಮಗ್ರಿಗೆ ಯಕ್ಷಗಾನವನ್ನು ಒಗ್ಗಿಸುವುದಲ್ಲ. ಈಗ ನಮಗೆ ಬೇಕಾದ ಬಗೆಯ, ಬೇಕಾದಷ್ಟು ತೀವ್ರತೆಯ ಬೆಳಕನ್ನು ಮಾಡಬಹುದು. ಅತೀ ಸೂಕ್ಷ್ಮವಾದ ನಾದ ವ್ಯವಸ್ಥೆ, ಧ್ವನಿವರ್ಧಕ, ಎಲೆಕ್ಟ್ರಾನಿಕ್ ಶ್ರುತಿ ವ್ಯವಸ್ಥೆ ಲಭ್ಯ. ವರ್ಣದ್ರವ್ಯ ಸುಲಭವಾಗಿವೆ. ವೇಷಭೂಷಣ ರಚನೆಯಲ್ಲಿ ಫೈಬರ್, ಥರ್ಮೋಕೋಲ್, ಡ್ಯೂರೊಕೋಲ್

ಗಳ ಬಳಕೆಯಿಂದ ಶೈಲಿಯನ್ನು ಉಳಿಸಿ ಉಜ್ವಲಗೊಳಿಸಲು ಶಕ್ಯ, ಅಪೇಕ್ಷಿತ. ನಾವು ಎಷ್ಟೋ ಬಾರಿ ಆಧುನಿಕ ಸೌಕರ್ಯ ಸಾಮಗ್ರಿಯನ್ನು ಫ್ಯಾಶನ್‌ನಂತೆ ಬಳಸುತ್ತೇವೆ. ಉದಾ: ಟ್ಯೂಬ್‌ಲೈಟ್ ಬೆಳಕು, ಜಗಜಗಿಸುವ ವೇಷಭೂಷಣ, ಮಾರಕ ವೇಷ ವಿಧಾನ ಇತ್ಯಾದಿ.

ಪರಿಷ್ಕರಣದ ಮೊದಲ ಹಂತವೆಂದರೆ ನಿರ್ಮಲೀಕರಣ, ನಾವೀನ್ಯದ ಹೆಸರಿನಲ್ಲಿ ಒಳಗೆ ನುಸುಳಿರುವ ವಿಕೃತಿಗಳನ್ನು ನಿರ್ದಾಕ್ಷಿಣ್ಯವಾಗಿ ನಿವಾರಿಸಬೇಕು. ಕಲೆಯೊಳಗೆ ವೈರಸ್ ಬಂದರೆ ಮತ್ತೆ ಹೋಗುವುದಿಲ್ಲ. ಉತ್ತಮಾಂಶ ಮಾಯವಾದರೆ ಮತ್ತೆ ಬರುವುದಿಲ್ಲ. ಇದೊಂದು ಕಟು ಸತ್ಯ. ಕಲೆಯ ಬಗೆಗೆ ಹೆಮ್ಮೆ ಪಡುವ ನಮಗೆ ಈ ಕುರಿತ ಎಚ್ಚರ ಅಗತ್ಯ. ಅತ್ಯುತ್ಸಾಹದಿಂದ ಕಲೆ ಕೆಡುತ್ತದೆ, ಅಜ್ಞಾನದಿಂದ ನಾಶವಾಗುತ್ತದೆ.

ಯಕ್ಷಗಾನದ ಸೌಂದರ್ಯಾಂಶದ ಪ್ರಜ್ಞಾಪೂರ್ವಕ ಅಭಿವ್ಯಕ್ತಿಗೆ, ಸರಿಯಾದ ಬಿಗಿಯಾದ ಅಭಿವ್ಯಕ್ತಿಗೆ ಬದ್ಧವಾದ 'ಸಂವಹನ ವ್ಯವಸ್ಥೆ' ಯಕ್ಷಗಾನದೊಳಗೆ ಬೆಳೆಯಬೇಕು. ಅದಕ್ಕಾಗಿ ಅತಿಯಾದ ಪುನರಾವರ್ತನೆ, ಜಾಳುಜಾಳಾದ ಅಭಿವ್ಯಕ್ತಿಗಳನ್ನು, ಬೊಬ್ಬೆ – ಗಲಾಟೆಯಂತಹ ಹಿಮ್ಮೇಳಗಳನ್ನು ತಿದ್ದಿ ಸರಿಪಡಿಸಲೇಬೇಕು. ಕಲೆಗೆ ಅನ್ಯವಾದ, ಕಲಾ ಸೌಂದರ್ಯದ ಭವಿಷ್ಯಕ್ಕೆ ಕಂಟಕಪ್ರಾಯವಾದ ಸುಡುಮದ್ದು, ಬ್ಯಾಂಡ್‌ವಾಲಗ, ಜಾತ್ರೆ ನಿರ್ಮಾಣ, ವ್ಯಕ್ತಿ ವೈಭವೀಕರಣಗಳನ್ನು ನಿರ್ದಾಕ್ಷಿಣ್ಯವಾಗಿ ನಿಯಂತ್ರಿಸಿ ರೂಪ ರಕ್ಷಣೆ ಮನಸ್ಸು ಮಾಡದಿದ್ದರೆ 'ಪರಾಧೀನ ಸರಸ್ವತಿ' ಎಂಬಂತೆ (ಚಿಂತಕ ಪ್ರೊ. ಪು.ಗ. ಸಹಸ್ರಬುದ್ಧೆ ಅವರ ಮಾತು) ಯಕ್ಷಗಾನವೆಂಬ ನಮ್ಮ ಸಂಪತ್ತಿನ ವಿನಾಶಕ್ಕೆ ನಾವು ಸಾಕ್ಷಿಗಳೂ, ಭಾಗಿಗಳೂ ಆಗಬೇಕಾಗುತ್ತದೆ.

ಇರುವ ಸಂಪನ್ಮೂಲ ಸಾಧನ ವ್ಯವಸ್ಥೆ, ಸರಕಾರಿ–ಖಾಸಗಿ ಪ್ರೋತ್ಸಾಹಗಳನ್ನು ಬಳಸಿ, ಸೂಕ್ತವಾದ ಅಭಿಯಾನವೊಂದನ್ನು ಮಾಡದಿದ್ದರೆ ಕಾಲ ಮಿಂಚಿ ಹೋಗಲಿದೆ. ಸಾಂಪ್ರದಾಯಿ ಸೌಂದರ್ಯದ ಸುಂದರ ಕಲೆಯಾಗಿದ್ದ ಮಹಾರಾಷ್ಟ್ರದ ದಶಾವತಾರಿ ಬಯಲಾಟ ಕಲೆ, ಇದೀಗ ಮರಾಠಿ ಸಂಗೀತ ನಾಟಕದ ಪಡಿಯಚ್ಚಾಗಿ ಸ್ವಂತದ ಸ್ವರೂಪ ನಾಶ ಹೊಂದಿರುವ ಉದಾಹರಣೆ ಕಣ್ಣ ಮುಂದಿದೆ.

ಪರಿಷ್ಕರಣವೆಂದರೆ ಕಲೆ ಬೇರೇನೋ ಆಗುವುದಲ್ಲ, ತಾನಾಗಿದ್ದು ಬೆಳೆಯುವುದು. 'ಬೇರೆ ಕಲೆಯಲ್ಲಿ ಏನನ್ನು ಸಾಧಿಸಿದ್ದಾರೆ. ಏನು ಪರಿಷ್ಕಾರ, ಹೇಗೆ ಮಾಡಿದ್ದಾರೆ ಎಂದು ನೋಡಿ ಅದನ್ನೇ ಇಲ್ಲಿ ತರುವುದಿಲ್ಲ. ಅವರು ಅವರ ಮಾಧ್ಯಮದಲ್ಲಿ ಸಾಧಿಸಿದ್ದನ್ನು ಆದರ್ಶವಾಗಿಸಿ, ಕಲೆಯಲ್ಲಿ ನಾವು ಮುನ್ನಡೆಯುವುದು'. (ದಿ.ಶಂಭು ಹೆಗಡೆ)

**ಅಭಿನಯ**

ವೇಷ, ನೃತ್ಯ, ಗಾನ, ರಂಗವಿಧಾನ, ಮಾತುಗಾರಿಕೆ, ವಾದನ ಎಲ್ಲ ಸೇರಿ ಅಭಿನಯ. ಇವು ಪರಸ್ಪರ ಪೂರಕ. ಯಾವುದನ್ನು ಬದಲಿಸಿದರೂ ಉಳಿದ ಅಂಶಗಳಿಗೆ ಅದು ಸಾಮರಸ್ಯದಿಂದ ಆಗಬೇಕು. ವೇಷ ಶೈಲಿಗೆ ಹೊಂದಿದ ಅಭಿನಯ, ಗಾನಕ್ಕೆ ಹೊಂದದ

ವಾದನ ಇವೆಲ್ಲ ಸಮಸ್ಯೆಗಳಿಗೆ ಕಾರಣ.

ಇಂದು ಆಗಿರುವುದು ಇದೇ. ಉತ್ತರ ಕನ್ನಡ ಪದ್ಧತಿಯಲ್ಲಿ ಒಂದು ದೀರ್ಘ ಪರಂಪರೆಯ ಫಲವಾಗಿ ಮೂಡಿದ ಪದಾಭಿನಯ, ಚಿತ್ರಾಭಿನಯಗಳನ್ನು ಇಂದು ಎಲ್ಲೆಡೆ ಅವಿಚಾರಿತವಾಗಿ, ಅದರ ಸರಿಯಾದ ತಿಳಿವಿಲ್ಲದೆ ಬಳಸುತ್ತಿದ್ದೇವೆ. ಇದು ಆಂಶಿಕ ವರ್ಗಾವಣೆ, ಸುಲಭ ದಾರಿಗಳ ಫಲ. ಇದರಿಂದ ಅಭಿನಯವೆಂಬ ಹೆಸರಿನ ವಿಕಾರಗಳು ರೂಪಿತವಾಗಿವೆ.

ವಿಚಿತ್ರವಾದ ಬಾಗುವಿಕೆ, ಅತಿರೇಕದ ಚಾಲೂಕುಣಿತ, ತೀರ ಚಿಲ್ಲರೆ ಅನಿಸುವ ಶಬ್ದ ಪುನರಾವರ್ತನೆಗಳು ರಂಗದ ಸ್ವರೂಪವನ್ನು ದಿಕ್ಕುಗೆಡಿಸಿವೆ. ಇಂತಹುದಕ್ಕೆಲ್ಲ ಚಪ್ಪಾಳೆಗಳೂ, ಪ್ರಶಂಸೆಗಳೂ ಸಲ್ಲುತ್ತಿರುವುದು ಖೇದಕರ. ಅಭಿನಯ ತತ್ವವು ತುಂಬ ಗಹನ. ಅದರ ಅಗ್ಗಗೊಳಿಸುವಿಕೆ ಸುಲಭ ಮತ್ತು 'ಆಪತ್ಕಾರಿ'.

ಬಂದಿರುವ ಹೊಸತನಗಳಲ್ಲಿ ಕಲೆ ಇದೆ, ಕಳೆಯೂ ಇದೆ. ನಾಲ್ಕಾರು ದಶಕಗಳಲ್ಲಿ ಆಗಿರುವ, ಬಂದಿರುವ ಎಲ್ಲವೂ ನಮಗೆ ಅಧ್ಯಯನ ಯೋಗ್ಯ, ಗೌರವಾರ್ಹ. ಆದರೆ ಸ್ವೀಕಾರ ಮಾಡಿ ಬೆಸೆಯುವಾಗ ಕಲಾ ಬದ್ಧತೆ ಮುಖ್ಯ. ದಾಕ್ಷಿಣ್ಯ ಮತ್ತು ಕ್ಷಣಿಕ ರಮಣೀಯತೆ ಅಲ್ಲ.

**ವಿಸ್ತರಣ**

ತನ್ನ ಕ್ಷೇತ್ರದಲ್ಲಿ ಯಕ್ಷಗಾನವು ಸ್ಥಿರೀಕರಣ, ಪರಿಷ್ಕರಣಗಳನ್ನು ಹೊಂದುವುದರ ಜೊತೆಗೆ, ಒಂದು ವಿಸ್ತರಣವನ್ನೂ ಸಾಧಿಸಬೇಕು. ವಿಸ್ತರಣವು ಬಹು ವಿಧ. ಭೌಗೋಲಿಕವಾಗಿ ಅನ್ಯ ಪ್ರದೇಶಗಳಿಗೆ, ಇತರ ಭಾಷೆಗಳಿಗೆ, ಅನ್ಯ ಮಾಧ್ಯಮಗಳಿಗೆ ಮತ್ತು ತನ್ನ ನೆಲೆಯಲ್ಲೇ ವಸ್ತು ವಿಸ್ತಾರ ಮತ್ತು ಅಭಿವ್ಯಕ್ತಿ ವಿಸ್ತಾರವನ್ನು ಸಾಧಿಸಬೇಕು.

ಯಕ್ಷಗಾನಕ್ಕೆ ಅಂತಹ ಕಲಾಸಾಮರ್ಥ್ಯ, ಸಾಧ್ಯತೆಗಳು ಇವೆ. ಕರ್ನಾಟಕದ ಹೊರಗೆ ಯಕ್ಷಗಾನವು ಬೇರೆ ಪ್ರಾಂತ್ಯಗಳಲ್ಲಿ, ಬೇರೆ ದೇಶಗಳಲ್ಲಿ ಹಲವು ಬಾರಿ ಪ್ರದರ್ಶಿತವಾಗಿದೆ. ಕಲಾರಸಿಕರ, ತಜ್ಞರ ಮನ್ನಣೆಯನ್ನೂ ಗಳಿಸಿದೆ. ವಿದೇಶಿ ಸಂಶೋಧಕರು ಯಕ್ಷಗಾನದ ಬಗೆಗೆ ಅಧ್ಯಯನಗಳನ್ನು ನಡೆಸಿದ್ದು, ಅವು ಎಷ್ಟೋ ವಿಷಯದಲ್ಲಿ ಉತ್ಕೃಷ್ಟವೂ, ನಮ್ಮ ಸಂಶೋಧಕರ ಸಂಶೋಧನೆಗಳಿಗಿಂತ ಭಿನ್ನವೂ ಆಗಿವೆ. ಮಾರ್ಗದರ್ಶಕವೂ ಆಗಿವೆ. (ಅಮೆರಿಕದ ಡಾ. ಮಾರ್ತಾ ಆಶ್ಟನ್, ಜರ್ಮನಿಯ ಡಾ. ಕ್ಯಾಥರಿನ್‌ರವರ ಮಹಾಪ್ರಬಂಧ ಗಳನ್ನಿಲ್ಲಿ ಸ್ಮರಿಸಬಹುದು) ಯಕ್ಷಗಾನ ಗೊಂಬೆಯಾಟವು ಮುಖ್ಯತಃ ದಿ. ಕೆ.ಎಸ್. ಉಪಾಧ್ಯಾಯರ ಪ್ರಯತ್ನಗಳಿಂದ ವಿಶೇಷ ಪ್ರಸಾರ ಗಳಿಸಿದೆ. ಮಕ್ಕಳ ಮೇಳ ಸಾಲಿಗ್ರಾಮ, ಡಾ. ಕಾರಂತರ ತಂಡ, ಉಡುಪಿಯ ಯಕ್ಷಗಾನ ಕೇಂದ್ರ ಇವು ಸೀಮೋಲ್ಲಂಘನದ ದಾಖಲೆ ನಿರ್ಮಿಸಿದ (ನಿ. ಶ್ರೀಧರ ಹಂದೆ) ಹೆಗ್ಗಳಿಕೆ ಹೊಂದಿವೆ.

ಹಿಂದಿ ಯಕ್ಷಗಾನ ಪ್ರದರ್ಶನಗಳಿಗೂ ನಾಲ್ಕು ದಶಕಗಳ ಇತಿಹಾಸವಿದೆ. ಅನ್ಯಪ್ರಾಂತ, ದೇಶಗಳಲ್ಲಿ ಯಕ್ಷಗಾನ ಪ್ರದರ್ಶನವಾದಾಗ, ಅದರ ಮಟ್ಟ ಯಾವುದೇ ಇರಲಿ ಅದನ್ನೊಂದು

ಅದ್ಭುತವಾಗಿ, ಜನರು ಕಾಣುವುದು ಅನುಭವಕ್ಕೆ ಬರುತ್ತದೆ. ರಾಷ್ಟ್ರೀಯ, ಅಂತಾರಾಷ್ಟ್ರೀಯ ಕಾರ್ಯೋತ್ಸವಗಳಲ್ಲಿ ಯಕ್ಷಗಾನವನ್ನು ಕೊನೆಯ ಪ್ರದರ್ಶನವಾಗಿ ಇರಿಸುತ್ತಾರೆ. ಕಾರಣ, ಯಕ್ಷಗಾನದ ಬಳಿಕ ಉಳಿದ ಯಾ ಪ್ರದರ್ಶನವೂ ಸಪ್ಪೆಯಾಗುತ್ತದೆ! ಇದು ಹೆಮ್ಮೆ ತರುವ ಧೈರ್ಯ ಮತ್ತು ಜಾಗ್ರತೆಯನ್ನು ಬೋಧಿಸುವ ಸಂಗತಿ. ಯಕ್ಷಗಾನದಂತಹ ಸಮೃದ್ಧ ರಂಗಗುಣದ ಕಲೆಯ ಹಸಿವು ಸರ್ವತ್ರ ಇದೆ. ಅದನ್ನು ಬಳಸಿ ವಿಸ್ತರಿಸುವುದು ನಮ್ಮ ಕೆಲಸ. ಇಂದಿನ ಪ್ರಸಾರ ಸಂಪರ್ಕ, ಪ್ರಯಾಣ ಸೌಲಭ್ಯಗಳ ದಿನಗಳಲ್ಲಿ ಇದು ಸುಲಭ. ಸರಿಯಾದ ನಿಷ್ಠಾವಂತರ ನೇತೃತ್ವ ಮತ್ತು ಈ ಕೆಲಸಕ್ಕೊಪ್ಪುವ ಕಲಾವಿದರು ಇದ್ದರೆ, ಸಿದ್ಧರಾದರೆ ಅನೇಕ ಸಾಧ್ಯತೆಗಳು ಈ ದಿಕ್ಕಿನಲ್ಲಿ ಇವೆ.

**ತನ್ನೊಳಗೆ**

ಇದೆಲ್ಲ ಸಾಧಿತವಾಗುವುದು ಕಲೆ ತನ್ನತನದಲ್ಲಿ, ತನ್ನೊಳಗೆ ತಾನಾಗಿದ್ದು ಹೊಸ ಸಾಧ್ಯತೆಗಳಿಗೆ ಚಾಚಿಕೊಂಡಾಗ, ಅದು ಹೇಗೆ? ಎರಡು ಬಗೆ; ವಸ್ತು ಕಥಾನಕಗಳಲ್ಲಿ, ಅಭಿವ್ಯಕ್ತಿಯ ವಿಧಾನ ವಿಸ್ತಾರದಲ್ಲಿ ಬೆಳೆ ಬೆಳವಣಿಗೆಯಲ್ಲಿ ಕ್ರಿ.1800ರಿಂದಲೇ ವಸ್ತು ವಿಸ್ತಾರ ಜರುಗುತ್ತಾ ಬಂದಿದೆ. (ಉದಾ: ಮಾನಸ ಚರಿತ್ರೆ) ಇಂದಿಗೂ ನಡೆದಿದೆ. ಅದರ ಕಲಾಮೌಲ್ಯ ಯೋಗ್ಯತೆಯ ವಿಮರ್ಶೆ ಪ್ರತ್ಯೇಕ. ಇಲ್ಲಿ ಹೊಸ ಚಾಚುವಿಕೆಗಳ ಭರ, ವಾಣಿಜ್ಯೀಕರಣದ ಅಬ್ಬರ, ನಾವಿನ್ಯೈಕ ದೃಷ್ಟಿಯ ನಿರ್ಭರಗಳಲ್ಲಿ ಹಿಂತಿರುಗಿ ನೋಡದೆ, ಕಳೆದ ಅರ್ಧಶತಮಾನದಲ್ಲಿ ಶತಶತ ನೂತನ ಪ್ರಸಂಗಗಳೂ ಬಂದಿವೆ. ಕೆಲವು ನಿಜಕ್ಕೂ ನೈಜ ಪಂಥಾಹ್ವಾನಯುತ ನಾವೀನ್ಯವನ್ನು ಸಾಧಿಸಿದ್ದೂ ಹೌದು. ಇದಕ್ಕೆ ಬೇರೆ ಬೇರೆ ಕಾಲಗಳಲ್ಲೂ, ತಿಟ್ಟುಗಳಲ್ಲೂ ಉದಾಹರಣೆಗಳಿವೆ. ಡಾ. ಕಾರಂತರಿಂದ ತೊಡಗಿ, ಇತ್ತೀಚಿನವರೆಗೆ ಪ್ರಾಯೋಗಿಕ ಯಕ್ಷಗಾನಗಳ ಒಂದು ದೀರ್ಘ ಪರಂಪರೆ ಇದೆ. ನವೀನ ಪ್ರಯೋಗರಂಗ (Experimental Theatre) ಒಂದು ಗಹನವಾದ ವಿಚಾರ, ಪರಿವರ್ತನೆಯನ್ನೆಲ್ಲಾ ಪ್ರಯೋಗವೆಂದೂ, ವಿಕಾರಗಳನ್ನು ಪ್ರಗತಿಯೆಂದೂ ಸಮರ್ಥಿಸಲು ಈ ಪದ ಬಳಕೆ ಆಗಬಾರದು.

**ದೈವಿಕ – ಲೌಕಿಕ**

ಕಳೆದ ಹಲವು ವರ್ಷಗಳಲ್ಲಿ ಯಕ್ಷಗಾನದ ಪ್ರಧಾನರಂಗದಲ್ಲಿ ಕಾಣಿಸಿಕೊಂಡ ಕಥಾನಕಗಳಲ್ಲಿ ರಂಜನೆ, ಕಥನ ಕುತೂಹಲಗಳು ಮುಖ್ಯವಾಗಿ ಬಂದದ್ದು ನಿಜ. ಆದರೆ ನಾಟಕಗಳಿಂದ, ಕಾಲ್ಪನಿಕ, ಜಾನಪದ, ಸಿನಿಮೀಯ, ಸಮ್ಮಿಶ್ರ – ಹೀಗೆ ಹಲವು ಕಥೆಗಳು ಬಂದು ಜನಪ್ರಿಯವಾಗುವುದಕ್ಕೆ ಇನ್ನೊಂದು ಕಾರಣವೂ ಇದೆ. ಆನಾಭಿರುಚಿಯು ವಿಶಿಷ್ಟ ವರ್ಗದಿಂದ ಸಾಮಾನ್ಯಕ್ಕೆ, ಪೌರಾಣಿಕತೆಯಿಂದ ಲೌಕಿಕಕ್ಕೆ ಬದಲಾಗಿರುವುದು (Sacred to Secular) ಇದಕ್ಕೆ ಕಾರಣ. ಕಲಾಸಹೃದಯತೆಯಲ್ಲಿ ಅಡಿ (Taste - Base) ವಿಸ್ತರಿಸಿದ್ದೂ ಇದಕ್ಕೆ ಕಾರಣ. ಹಾಗಾಗಿ 'ಗುಣಸುಂದರಿ, ಕನಕರೇಖೆ, ಸಿರಿಗಿಂಡೆ,

ಕೋಟಿ ಚನ್ನಯ, ಶೂದ್ರತಪಸ್ವಿನಿ..' ಇತ್ಯಾದಿ ಪ್ರಸಂಗಗಳ ಜನಪ್ರಿಯತೆಯು ಅಗ್ಗದ ಜನಪ್ರಿಯತೆಯೆಂದು ತಳ್ಳಿಹಾಕಲಾಗುವುದಿಲ್ಲ. ಅದಕ್ಕೆ ಸಾಮಾಜಿಕ – ಸಾಂಸ್ಕೃತಿಕ ಕಾರಣಗಳಿವೆ. ಅದು ವಿಸ್ತರಣೆಯೇ. ಆ ಬಗೆಯ ಅಭಿರುಚಿಯನ್ನು ಬಳಸಿ, ದಿಕ್ಕು ನೀಡಿ ಕಲೆಯ ಸ್ಥಿರೀಕರಣದ ತತ್ವದಿಂದ ಸಾಧಿಸುವುದು ಈ ರಂಗದ ಹೊಣೆಗಾರಿಕೆ.

ಯಕ್ಷಗಾನಕ್ಕೆ ಕಥೆಗಳು ಪೌರಾಣಿಕವಾಗಿರಬೇಕು ಎಂಬುದರ ತತ್ವ ಅವುಗಳು ಈ ಮಾಧ್ಯಮಕ್ಕೆ ಹೊಂದುತ್ತವೆ ಎಂಬುದು. ಅಂದರೆ – ಹೆಚ್ಚು ಖಚಿತವಾಗಿ ಹೇಳುವುದಾದರೆ ಪೌರಾಣಿಕ ಎಂಬುದಕ್ಕಿಂತ ಯಕ್ಷಗಾನ ಸ್ನೇಹಿ, ಯಕ್ಷಗಾನೀಯ ಅನ್ನುವುದು ಸರಿಯೇನೋ.

**ವಿದ್ಯುನ್ಮಾನ, ವಿಶ್ವಗೋಳೀಯಕರಣ**

ವಿದ್ಯುನ್ಮಾನ ಕ್ರಾಂತಿಯಿಂದಾಗಿ ಮನೆ ಮನೆಗೆ ಬಂದಿರುವ ಅಗ್ಗದ (ಎರಡೂ ಅರ್ಥದಲ್ಲಿ) ರಂಜನೆಯ ರಾಶಿಯ ಮುಂದೆ, ಜೀವಂತ ಪ್ರದರ್ಶನ ಕಲೆಯ ಉಳಿವು ಬಿಕ್ಕಟ್ಟಿನಲ್ಲಿರುವುದು ನಿಜ. ಈಗ ಪ್ರಚಲಿತವಿರುವ ಮಾದರಿಯ ವಿಶ್ವಗೋಳೀಕರಣ (Globalization)ದಿಂದಾಗಿ ಆಕಾಶ ಪಾತಾಳಗಳಿಂದಾಗುತ್ತಿರುವ ವಿವಿಧ ಪ್ರಕಾರಗಳ ಆಗಮನ ಆಕ್ರಮಣಗಳಿಂದ ನಮ್ಮ ಸುಂದರ ಸಾಂಪ್ರದಾಯಿಕ ರೂಪಗಳ ಅಡಿ ಕಂಪಿಸುತ್ತಿದೆ. "ಹೊಸ ಗಾಳಿ ಬರಲಿ, ಆದರೆ ಬಿರುಸಿನಿಂದ ಬಂದು ನನ್ನ ಆಸನ ಸಹಿತ ನನ್ನನ್ನು ಹಾರಿಸುವ ಝುಂಝಾವಾತ ಬೇಡ" ಎಂದು ಮಹಾತ್ಮ ಗಾಂಧೀಜಿಯವರು ಹೇಳಿದರಂತೆ. ನಾವೂ ಇನ್ನೂ ಜೋರಾಗಿ ಹೇಳಬೇಕಾಗಿದೆ. 'ವಿಶ್ವವ್ಯಾಪಿ'ಯಾದ ತೆಳ್ಳಗಿನ, ಏಕರೂಪಿ ಕಲಾಪ್ರಕಾರಗಳ ಭಾರವು ಸಾಂಸ್ಕೃತಿಕ ಭಯಾನಕತೆಯನ್ನು ಸೃಷ್ಟಿಸುತ್ತಿದೆ. ಮಾಧ್ಯಮ ಗಳಲ್ಲೂ, ಜನರ ಮಟ್ಟದಲ್ಲೂ, ಸರ್ವತ್ರ ಹಬ್ಬಿರುವ ಚಲಚಿತ್ರಾರಾಧನೆ ಇತರ ಕಲಾಪ್ರಕಾರ ಗಳಿಗೆ ಭಯೋತ್ಪಾದಕವಾಗಿದೆ. ಸಾಂಸ್ಕೃತಿಕ ದೃಷ್ಟಿಧೋರಣೆಗಳಲ್ಲಿ ನ್ಯಾಯವನ್ನು ವ್ಯವಸ್ಥಿತವಾದ ಬೆಂಬಲವನ್ನು (ಸಬ್ಸಿಡಿ ಯೋಜನೆ) ನಾವು ಬಯಸುವುದು ಸಾಂಸ್ಕೃತಿಕ ಹಕ್ಕು, ನೀತಿನಿರ್ಮಾಪಕರ ಆದ್ಯ ಕರ್ತವ್ಯ ಎಂದು ಸೂಚಿಸಬಯಸುತ್ತೇನೆ.

ಈ ಮಧ್ಯೆ ಗಮನಿಸಬೇಕಾದ ಇನ್ನೊಂದು ಮುಖ್ಯಾಂಶ ಎಂದರೆ ಇಲೆಕ್ಟ್ರಾನಿಕ್ ವಿಸ್ತರಣೆ ಮತ್ತು ವಿಶ್ವವ್ಯಾಪೀಕರಣಗಳು ಬಂದೇ ಬಂದಿವೆ, ಬರುತ್ತಿವೆ. ಅವು ಅನಿವಾರ್ಯ ಪ್ರಾರಂಭಗಳು, ಪ್ರಾರಬ್ಧಗಳೂ ಹೌದು, ಅವು ಉಪಕರಣಗಳು. ಅವುಗಳನ್ನು ಬಳಸುವ ರೀತಿಯಲ್ಲಿ ಮಾತ್ರ ನಮಗೆ ಒಂದಿಷ್ಟು ಆಯ್ಕೆ ಇರುವುದು.

ಟಿ.ವಿ., ವಿಡಿಯೋ, ಮೊದಲಾದ ಮಾಧ್ಯಮಗಳನ್ನು ಒಂದು ಅಪಾಯವೆಂದಷ್ಟೇ ನೋಡದೆ, ಅವಕಾಶ ಎಂದೂ ನೋಡಬಹುದು. ನಮ್ಮ ಕಲೆಯ ಸ್ವಭಾವಕ್ಕೆ ಹೊಂದುವಂತಹ ಅದರ ಗುಣವನ್ನು, ಸೌಂದರ್ಯವನ್ನು ಕಾಣಿಸುವ ದಾಖಲೀಕರಣ, ಪ್ರದರ್ಶನ ವಿಡಿಯೋಗಳ ತಯಾರಿಯ ಬಗೆಗೆ ಕೆಲಸಗಳಾಗಬೇಕಾಗಿವೆ. ಯಕ್ಷಗಾನ ಮತ್ತು ದಾಖಲೀಕೃತ ರಂಜನ ಮಾಧ್ಯಮ ವೀಡಿಯೋ, ಸಿನಿಮಾ ಮಾಧ್ಯಮಗಳೆರಡರಲ್ಲೂ

ಹಿಡಿತವುಳ್ಳ, ಯಕ್ಷಗಾನದ ಕುರಿತು ಪ್ರೀತಿಯುಳ್ಳ ನಿರ್ದೇಶಕ-ನಿರ್ಮಾಪಕರಿಂದ ಇಂತಹ ಕೆಲಸ ಆಗಬೇಕು. ಈ ರೀತಿಯ ವ್ಯವಸ್ಥಿತ ಕಾರ್ಯವು ಯಕ್ಷಗಾನವನ್ನು ಬೇರೆ ಬೇರೆ ಮಟ್ಟಗಳಲ್ಲಿ ಬಿಂಬಿಸಿ ಪ್ರಚಾರ ಪ್ರಸಾರ ಪಡೆಸಲು ಅತ್ಯುತ್ತಮ ಸಾಧನವಾಗುವುದು. ಅದಕ್ಕಾಗಿ ಯಕ್ಷಗಾನವೂ ಹೆಚ್ಚು ಸೂಕ್ಷ್ಮವಾಗಿ, ಸೂಕ್ತ ಪರಿಪಾಕಕ್ಕೆ ಸಿದ್ಧವಾಗಬೇಕಾದುದು ಅಗತ್ಯ.

**ಸಹಕಾರ ಜಾಲ**

ಯಕ್ಷಗಾನದ ಬಗೆಗೆ ಶೈಕ್ಷಣಿಕ ಕಾರ್ಯ, ಪರಿಕಲ್ಪನಾತ್ಮಕವಾದ ಕೆಲಸಗಳನ್ನು ಮಾಡುವ ಸಂಸ್ಥೆಗಳೊಳಗೆ ರಾಷ್ಟ್ರೀಯ, ಅಂತಾರಾಷ್ಟ್ರೀಯ ಮಟ್ಟದ ಕೆಲಸಗಳಿಗಾಗಿ ಒಂದು ಸಹಕಾರ ಜಾಲವನ್ನು (Co-operation Network) ಸ್ಥಾಪಿಸಿಕೊಳ್ಳಬಹುದು. ಅದರ ಮೂಲಕ ಮಾಹಿತಿ ಸಂಗ್ರಹ, ವಿನಿಮಯ ಮತ್ತು ವಿವಿಧ ರೀತಿಯ ಕಾರ್ಯಕ್ರಮಗಳ ರೂಪೀಕರಣದ ಒಂದು ವ್ಯವಸ್ಥೆಯನ್ನು ಯೋಜಿಸಿ ಕಾರ್ಯಗತಗೊಳಿಸುವುದು. ಯಕ್ಷಗಾನಕ್ಕೆ ಹಲವು ಹಂತಗಳಲ್ಲಿ ಬೇಡಿಕೆ ಇದೆ, ಅವುಗಳನ್ನು ಬೆಳೆಸಿಕೊಳ್ಳಲು ಇಂತಹ ಒಂದು ವ್ಯವಸ್ಥೆ ಅಗತ್ಯವಿದೆ.

**ಸಂಘಟಕ ಮುಖ್ಯರ ಧೋರಣೆ**

ಯಕ್ಷಗಾನ ಮೇಳಗಳನ್ನು ಹೊಂದಿರುವ ದೇವಾಲಯಗಳು, ಮೇಳಗಳ ಸಂಘಟಕರೂ ಯಕ್ಷಗಾನದ ಸ್ವರೂಪ ರಕ್ಷಣೆ, ಗುಣಮಟ್ಟ, ರುಚಿ-ಶುದ್ಧಿಗಳನ್ನು ಕಾಪಾಡುವ, ಬೆಳೆಸುವ ಹೊಣೆ ಉಳ್ಳವರು. ಈ ಘಟಕಗಳೆ ಈ ಕಥೆಯ ಉಳಿವು ಬೆಳವಣಿಗೆಗೆ ಮುಖ್ಯ ಆಧಾರ. ಇವರು ಯಕ್ಷಗಾನ ಸ್ವರೂಪಕ್ಕೆ, ಗುಣಮಟ್ಟಕ್ಕೆ ಖಚಿತ ಬದ್ಧತೆಯನ್ನು, ವ್ಯವಸ್ಥಿತ ಸಾಂಸ್ಕೃತಿಕ ಧೋರಣೆಯನ್ನು ರೂಪಿಸುವುದು ಅತ್ಯಗತ್ಯವಾಗಿದೆ. ಹರಕೆದಾರರ, ಪ್ರಾಯೋಜಕರ ವಿಚಿತ್ರವಾದ, ಕಲೋಚಿತವಲ್ಲದ ಅಪೇಕ್ಷೆಗಳನ್ನು ಪೂರೈಸುತ್ತಾ ಹೋದರೆ ಕಲಾರೂಪ ಉಳಿಯಲಾರದು. “ನಮ್ಮ ಧೋರಣೆ ಹೀಗೆ, ಅದಕ್ಕೆ ಬದ್ಧರಾಗಿ ಭಕ್ತ ಜನರು ಹರಕೆ ಆಟಗಳನ್ನು ಆಡಿಸಬೇಕು” ಎಂಬ ಖಚಿತ ನಿಲುವನ್ನು ಮೇಳದ ಸಂಘಟಕರು ಹೊಂದುವುದು ಕಲೆಯ ದೃಷ್ಟಿಯಿಂದ ಅನಿವಾರ್ಯ. ಕಲಾವಿದರನ್ನು ಸಿದ್ಧಪಡಿಸುವ ಕೇಂದ್ರಗಳಿಂದ ಬರುವವರು ಮೇಳಗಳಲ್ಲಿ ಕಲಾವಿದರಾಗುವುದರಿಂದ, ಮೇಳಗಳಿಗೆ ಶಿಕ್ಷಣ ಕೇಂದ್ರಗಳಿಗೆ ಬೆಂಬಲ ನೀಡುವ ನೈತಿಕ ಕರ್ತವ್ಯವಿದ್ದು, ಅದನ್ನು ಉದಾರವಾಗಿ ನಡೆಸಬೇಕಾಗಿದೆ. ಮೇಳ ಸಂಘಟಕರೆ ದಯವಿಟ್ಟು ಜಾಗ್ರತರಾಗಿರಿ.

ಕಲೆಯ ವಿಷಯದಲ್ಲಿ ಜನರ ಅಭಿರುಚಿ ಎಂಬ ಸ್ಥೂಲವಾದ ಆಧಾರ ಇದ್ದರೂ, ಕಲೆಯನ್ನು ಉಳಿಸಿ, ಮುಂದಿನ ಜನಾಂಗಕ್ಕೆ ದಾಟಿಸುವ ಮೊದಲ ಹೊಣೆ ಕಲಾವಿದನದ್ದು ಎಂಬುದನ್ನು ಕಲಾವಿದರು ಮನಗಾಣಬೇಕು. ಇಲ್ಲಿ ಕಲಾವಿದರ ಜವಾಬ್ದಾರಿ ಮೊದಲನೆಯದು.

### ಕಲಾವಿದರ ಹಿತರಕ್ಷಣೆ

ಕಲೆಯ ಬಗೆಗೆ ವಿಮರ್ಶಿಸುವಾಗ ನಾವು ಕಲಾವಿದರನ್ನು ಮರೆತು, ಆತನ ಸಮಸ್ಯೆಗಳನ್ನು ಬದಿಗಿರಿಸಿ ಮಾತಾಡುವಂತಿಲ್ಲ. ಯಕ್ಷಗಾನವೆಂಬುದು ಒಂದು ಕಷ್ಟದ ಕಸುಬು. ಊರಿಂದೂರಿಗೆ ತಿರುಗುವ, ನಿದ್ದೆಗೆಟ್ಟು ದುಡಿಯುವ ಉದ್ಯೋಗ. ಕಲಾವಿದರನ್ನು ರಂಗದಲ್ಲಿ ಕಂಡು ಸಂತೋಷಿಸುವ ನಾವು, ಆತನ ಕಷ್ಟಕಾಲದಲ್ಲಿ ನೆರವಾಗುವುದೂ ಅಗತ್ಯ. ಕಲಾವಿದರ ಜೀವನಕ್ಕೆ ಭದ್ರತೆ, ನಿವೃತ್ತಿ ಜೀವನಕ್ಕೆ ಆಧಾರಗಳನ್ನು ಒದಗಿಸುವ ಬಹು ದೊಡ್ಡ ಕಾರ್ಯವನ್ನು ಮೇಳಗಳು, ದೇವಾಲಯಗಳು, ಸರಕಾರ, ಸಂಸ್ಥೆಗಳು ಸಮಾಜ ಎಲ್ಲರೂ ಕೈಗೊಳ್ಳುವುದು ಅಗತ್ಯ. ಕೆಲವು ಕ್ಷೇತ್ರಗಳೂ, ಮೇಳಗಳು ಈ ದಿಸೆಯಲ್ಲಿ ಕಾರ್ಯಪ್ರವೃತ್ತವಾಗಿದೆ. (ಉದಾ – ಶ್ರೀ ಕ್ಷೇತ್ರ ಧರ್ಮಸ್ಥಳ, ಶ್ರೀ ಕಟೀಲು ಕ್ಷೇತ್ರದ ಮೇಳಗಳು.)

### ಮಾದರಿಗಳು

ಕಲಾವಿದರನ್ನು ಒಂದು ಸಂಘಟನೆಗೊಳಪಡಿಸಿ, ಅವರಿಗಾಗಿ ಆಪತ್ ಸಹಾಯ ಇನ್ಶೂರೆನ್ಸ್, ಬಸ್ ಪ್ರಯಾಣಗಳಲ್ಲಿ ರಿಯಾಯಿತಿ ವ್ಯವಸ್ಥೆ ಮುಂತಾದ ಭದ್ರತಾ ಕಲ್ಯಾಣ, ಶಿಕ್ಷಣಕ್ಕೆ ನೆರವು ಕಾರ್ಯಕ್ರಮಗಳನ್ನು ರೂಪಿಸಿ, ನಡೆಸುತ್ತಿರುವ ಉಡುಪಿಯ 'ಯಕ್ಷಗಾನ ಕಲಾರಂಗ'ದ ಯಕ್ಷನಿಧಿಯ ಒಂದು ದಶಕದ ಕಾರ್ಯವು ದೇಶದ ಸಾಂಪ್ರದಾಯಿಕ ರಂಗಭೂಮಿಗೆ ಮಾದರಿಯಾಗಿರುವ ಒಂದು ಅಸಾಮಾನ್ಯ ಯೋಜನೆಯಾಗಿದೆ. ಇದರ ಹಿಂದೆ ಇರುವ ಚಿಂತನೆ, ಸಾಮರ್ಥ್ಯ, ಕಾರ್ಯತತ್ಪರತೆ, ತ್ಯಾಗ, ಬದ್ಧತೆಗಳು ಅತ್ಯಂತ ಪ್ರಶಂಸಾರ್ಹವಾಗಿವೆ. ಈ ನಿಧಿಯು ಇನ್ನಷ್ಟು ವಿಸ್ತಾರವಾಗಿ ಕಾರ್ಯವಿಸ್ತಾರ ಪಡೆದು ಯಕ್ಷಗಾನದ ಉದ್ಯೋಗಕ್ಕೆ ಭದ್ರತೆಯನ್ನು ನೀಡುವಂತಾಗಲಿ.

ಕಲಾರಂಗದ ಸಹಕಾರದೊಂದಿಗೆ ಉಡುಪಿಯ ಶಾಸಕ ಶ್ರೀ ಕೆ. ರಘುಪತಿ ಭಟ್ಟರು ರೂಪಿಸಿರುವ 'ಯಕ್ಷ ಶಿಕ್ಷಣ ಟ್ರಸ್ಟ್' ಒಂದು ಬೃಹತ್ ಯೋಜನೆ. ಶಾಲಾ ವಿದ್ಯಾರ್ಥಿಗಳ ಮಟ್ಟದಲ್ಲಿ ಯಕ್ಷಗಾನ ಶಿಕ್ಷಣದ ಮೂಲಕ ಅಭಿರುಚಿ, ನಿರ್ಮಾಣ ಪ್ರೋತ್ಸಾಹ, ಸಂವರ್ಧನ ಕಾರ್ಯದಲ್ಲಿ ದಾಖಲೆಯ ಉಪಕ್ರಮವಾಗಿದೆ.

### ಸ್ಥಾಯಿ ಪ್ರದರ್ಶನ ವ್ಯವಸ್ಥೆ

ಯಕ್ಷಗಾನದ ಬಗೆಗೆ ಆಸಕ್ತರಾಗಿರುವ ಕಲಾಪ್ರೇಮಿಗಳು, ವಿಶೇಷತಃ ಬೇರೆ ಊರುಗಳ, ಪ್ರಾಂತ್ಯಗಳ ಮತ್ತು ಪರದೇಶಗಳ ಆಸಕ್ತರು. ನಮ್ಮ ಪ್ರದೇಶದಲ್ಲಿ ಬಂದಾಗ ಅಪೇಕ್ಷಿಸುವ ಒಂದು ವಿಷಯ. ಯಕ್ಷಗಾನ ಪ್ರದರ್ಶನವು ಒಂದು ಕಡೆ ಸ್ಥಾಯಿಯಾಗಿ ಸಿಗುವ ವ್ಯವಸ್ಥೆ, ಸಾಂಪ್ರದಾಯಿಕ ಸ್ವರೂಪದ, ಪ್ರೇಕ್ಷಕ ಸ್ನೇಹಿಯಾದ, ಮಿತ ಅವಧಿಯ ಅಂತಹ ಪ್ರದರ್ಶನಗಳನ್ನು ಕರಾವಳಿಯ ಎರಡು ಮೂರು ಕ್ಷೇತ್ರಗಳಲ್ಲಿ ಖಾಯಂ ಆಗಿ ಏರ್ಪಡಿಸಬಹುದಾಗಿದೆ. ಇದರಲ್ಲಿ ವಿವಿಧ ಮೇಳಗಳು, ನಿಶ್ಚಿತ ನಿಯಮ ಮತ್ತು

ನಿಬಂಧನೆಗಳಿಗೆ ಒಳಪಟ್ಟು, ಪರ್ಯಾಯಕ್ರಮದಿಂದ ಪ್ರದರ್ಶನಗಳನ್ನು ನೀಡಿ ನಿರ್ವಹಿಸ ಬಹುದಾಗಿದೆ. ಆ ಕ್ಷೇತ್ರವು ಅದರ ಸಮನ್ವಯವನ್ನು ವ್ಯವಸ್ಥೆ ಮಾಡಬಹುದು. ಈ ವ್ಯವಸ್ಥೆಯು ಕಲಾ ಪ್ರಸಾರಕ್ಕೆ ದೊಡ್ಡ ಕೊಡುಗೆ ನೀಡಲಿದೆ.

**ಸಂಶೋಧನೆ**

ಯಕ್ಷಗಾನದ ಸಂಶೋಧನೆಗೆ ಸುಮಾರು ಒಂದು ಶತಮಾನದ ಇತಿಹಾಸವಿದೆ. ಹಲವು ಉತ್ತಮ ಕೃತಿಗಳು, ನೂರಾರು ಪ್ರಬಂಧಗಳು, ಇಪ್ಪತ್ತರಷ್ಟು ಡಾಕ್ಟರೇಟ್ ಬರಹಗಳೂ ಬಂದಿದ್ದು, ಒಟ್ಟಿನಲ್ಲಿ ಸಂಶೋಧನೆಯ ಗುಣಮಟ್ಟ ಚೆನ್ನಾಗಿದೆ, ಬಹುಪಾಲು ಕೃತಿಗಳು ಉತ್ತಮ ಮಟ್ಟದಲ್ಲಿವೆ. ಆದರೆ ಇನ್ನು ಮುಂದಕ್ಕೆ ಯಕ್ಷಗಾನ ಸಂಶೋಧನೆಯು, ಹೆಚ್ಚು ರಂಗೋಪಯೋಗಿ ಮತ್ತು ಅನ್ವಯಿಕವಾಗುವ ಅಗತ್ಯವಿದೆ. ಪುನಾರಚನೆ, ಪ್ರಾಯೋಗಿಕತೆ ಮತ್ತು ಅಭಿವ್ಯಕ್ತಿಯಲ್ಲಿ ಸಾಧ್ಯತೆಗಳ ವಿಸ್ತಾರದ ದೃಷ್ಟಿಯಿಂದ ಸಂಶೋಧನೆಯ ಯಕ್ಷಗಾನದ ಸ್ಥಿರೀಕರಣ–ಪರಿಷ್ಕರಣ ಮತ್ತು ವಿಸ್ತರಣಕ್ಕೆ ನೆರವಾದರೆ ಅವು ಸಾರ್ಥಕ.

**ಅಕಾಡೆಮಿಯ ಕಾರ್ಯ**

ಇದೀಗ ನಮಗೆ ಕರ್ನಾಟಕ ಬಯಲಾಟ ಅಕಾಡೆಮಿ ದೊರಕಿದೆ. ಆ ಕುರಿತು ನಾವು ಹೆಮ್ಮೆ ಪಡುವುದರ ಜೊತೆಗೆ ವಾಸ್ತವವಾಗಿ ಚಿಂತಿಸಬೇಕು. ಕರ್ನಾಟಕದ ಹಲವು ಬಯಲಾಟ ಪ್ರಕಾರಗಳು ಸೇರಿ ದೊಡ್ಡ ಗಾತ್ರದ ಒಂದು ರಂಗಭೂಮಿಯು ಅದರ ವ್ಯಾಪ್ತಿಯೊಳಗೆ ಬರುತ್ತದೆ. ಅಕಾಡೆಮಿ ಇದೀಗ ರೂಪಿತವಾಗಿದೆ. ಅವು ಆರಂಭಿಕ ಸಮಸ್ಯೆಗಳು, ಆರ್ಥಿಕ ಮಿತಿಗಳು, ಸಾಧ್ಯತೆಯ ಮಿತಿಗಳ ಮಧ್ಯೆ ಕೆಲಸ ಮಾಡಬೇಕಾಗಿದೆ.

ಅಕಾಡೆಮಿಯು ಅಕಾಡೆಮಿಕ್ ಮತ್ತು ಉತ್ಸವಾದಿ ಅಲಂಕಾರಿಕ ಕಾರ್ಯಗಳೆಂಬ ಎರಡು ಬಗೆಯ ಮುಖಗಳಿಂದ ಕಾರ್ಯನಿರತವಾಗುವಂತಹುದು. ಅಕಾಡೆಮಿಯ ಮಿತಿಗಳೇನಿದ್ದರೂ, ಅದು ಮಾಡುವ ಕೆಲಸಗಳಿಗೆ, ಅದು ಕೊಡುವ ಪ್ರಶಸ್ತಿಗಳಿಗೆ ಪ್ರತ್ಯೇಕ ಮಾನ್ಯತೆ ಇದೆ. ನಿರೀಕ್ಷೆಗಳೂ ವಿಶೇಷವಾಗಿರುತ್ತವೆ. ಈ ಅರಿವಿನಿಂದ ಅದು ಕೆಲಸ ಮಾಡುವಂತಹುದು. ಅದರ ಕಾರ್ಯ, ಮನ್ನಣೆ ಪ್ರಶಸ್ತಿಗಳು, ಮುಖ್ಯವಾಗಿ ಸಾಂಕೇತಿಕ. ಅದು ಕಲೆಯಲ್ಲಿ ಆಗಬೇಕಾಗಿರುವ ವಿವಿಧ ಕಾರ್ಯಗಳಿಗೆ, ಮಧ್ಯವರ್ತಿ ಸಂಯೋಜಕ ಶಕ್ತಿಯಾಗಿ, ಪ್ರೇರಕ ಸಂಘಟಕ (ನೋಡಲ್) ವ್ಯವಸ್ಥೆಯಾಗಿ ಕಾರ್ಯ ನಿರ್ವಹಿಸಬೇಕು. ರಾಜ್ಯ, ಕೇಂದ್ರ ಸರಕಾರಗಳು, ಖಾಸಗಿ ವ್ಯವಸ್ಥೆಗಳ ಸಹಾಯ, ಸಮಾನ ಆಸಕ್ತ ಅಧ್ಯಯನ ಪೀಠ ಇತ್ಯಾದಿಗಳಿಂದ ವಿಚಾರ, ಸಂಪನ್ಮೂಲಗಳನ್ನು ಕ್ರೋಢೀಕರಿಸಿ; ಅದನ್ನು ವಿಧಾಯಕವಾಗಿ ಬಳಸುವಂತಹುದು, ನೂತನ ಪರಿಕಲ್ಪನೆಗಳನ್ನು ಚಾಲ್ತಿಗೊಳಿಸುವಂತಹುದು, ವ್ಯವಸಾಯ ರಂಗಕ್ಕೆ ಸೂಚನಾತ್ಮಕ ಮಾರ್ಗದರ್ಶನ, ಮಸುಕಾಗಿರುವ ಪ್ರಕಾರಗಳ ಉಜ್ವಲೀಕರಣ – ಇವು ಅಕಾಡೆಮಿಯ ಕಾರ್ಯಗಳು.

ಯಕ್ಷಗಾನ ಕಲೆಗೆ ಪೋಷಕವಾಗಬಹುದಾದ ಹಲವು ಪ್ರಯೋಜನಗಳು ಕೇಂದ್ರ ಸರಕಾರದ ಜವಳಿ ಇಲಾಖೆ, ಕರಕುಶಲ ವಿಭಾಗ, ಶಿಕ್ಷಣ ಇಲಾಖೆ, ಸಂಸ್ಕೃತಿ ಇಲಾಖೆಗಳಲ್ಲೂ ರಾಜ್ಯ ಸರಕಾರದ ಯೋಜನೆಗಳಲ್ಲೂ ಇವೆ. ಆ ಕುರಿತು ಒಂದು ಸಾಧಾರಣ ಸಮೀಕ್ಷೆಯನ್ನು ಅಕಾಡೆಮಿ ನಡೆಸಬೇಕೆಂದು ಕೋರುತ್ತೇನೆ. ಪುನಾರಚನೆ ಪುನರುಜ್ಜೀವನದ ಅಗತ್ಯ ಬಯಲಾಟಗಳಿಗೆ ಹೆಚ್ಚು ಇದೆ. (ದೊಡ್ಡಾಟ, ಮೂಡಲಪಾಯ, ಗಟ್ಟದಕೋರೆ, ಸಣ್ಣಾಟ ಪ್ರಕಾರಗಳಿಗೆ).

**ಶಿಕ್ಷಣ ಸ್ವರೂಪ**

ಹಿಂದೆ ಯಕ್ಷಗಾನ ಶಿಕ್ಷಣವು–ಸಾಂಪ್ರದಾಯಿಕ ರೂಪದಲ್ಲಿ ಮೇಳಗಳ ತಿರುಗಾಟದಲ್ಲಿ, ಮಳೆಗಾಲದ 'ನಾಟ್ಯಾಭ್ಯಾಸ'ಗಳಲ್ಲಿ ಜರುಗುತ್ತಿತ್ತು. 1970ರ ಈಚೆಗೆ ಯಕ್ಷಗಾನ ಶಿಕ್ಷಣ ಕೇಂದ್ರಗಳು ರೂಪುಗೊಂಡವು. ಇದೀಗ ಕೇಂದ್ರಗಳಿಗೆ ವಿದ್ಯಾರ್ಥಿಗಳ ಕೊರತೆ ಬಂದಿದೆ. ಯಕ್ಷಗಾನವು ಉದ್ಯೋಗವಾಗಿ ಆಕರ್ಷಣವಾಗಿ ಉಳಿದಿಲ್ಲ. ಹಿಂದೆಯೂ ಇಂದೂ ವಿದ್ಯಾರ್ಥಿಗಳೆಲ್ಲರೂ ಪೂರ್ಣ 'ಸ್ಕಾಲರ್‌ಶಿಪ್' ಮೂಲಕ ಕಲಿತವರು. ಯಕ್ಷಗಾನ ಕೇಂದ್ರಗಳ ಪಾಠಪಟ್ಟಿ, ಕಲಿಸುವ ವಿಧಾನ ಮತ್ತು ವಿದ್ಯಾರ್ಥಿ ನೋಂದಣಿಯಲ್ಲಿ ಬದಲಾವಣೆಗಳಿಗೆ ಇರುವ ಅವಕಾಶಗಳನ್ನು ಪರಿಶೀಲಿಸಬಹುದಾಗಿದೆ. ಪಾಠಪಟ್ಟಿಯಲ್ಲಿ–ಸಾಂಪ್ರದಾಯಿಕ ಕಲೆಗಳ ಬಗೆಗಿನ ತಾತ್ವಿಕ ಚಿಂತನೆ, ಶೈಲಿ ವಿಚಾರ, ಕಲಾ ವಿಮರ್ಶೆ, ಅನ್ಯ ಸಮಾನ ಕಲೆಗಳ ಪರಿಚಯ, ನಿರ್ದೇಶನ ತತ್ವಗಳನ್ನು ಮತ್ತು ಅರ್ಥಗಳನ್ನು ಸಾಧಿಸಿದರೆ ಹೆಚ್ಚು ಸಮಗ್ರವಾಗುತ್ತದೆ. ಕೇಂದ್ರಗಳಲ್ಲಿ ಅರ್ಥಗಾರಿಕೆಯ ಕುರಿತು ಇನ್ನೂ ಲಕ್ಷ್ಯ ನೀಡುವುದು ಅಗತ್ಯ.

ಅಂತೆಯೇ, ಆಸಕ್ತರಿಗಾಗಿ ಕೇಂದ್ರಗಳಲ್ಲಿ ಸಾಯಂಕಾಲದ ತರಗತಿಗಳು, ವಾರದ ಪಾಠ, ಸಂಕ್ಷಿಪ್ತ ಕಾರ್ಯಕ್ರಮ (Crash Program) ವಿದ್ಯಾರ್ಥಿಗಳಿರುವಲ್ಲಿಗೆ ಗುರುಗಳು ಹೋಗಿ ಪಾಠ ಮಾಡುವ ಕಿರು ಕೋರ್ಸ್ ಮೊದಲಾದುವುಗಳ ಮೂಲಕ ಹೆಚ್ಚು ಜನರು ಕಲೆಯನ್ನು ಕಲಿಯುವ ಹಾಗೆ ರೂಪಿಸಲು ಸಾಧ್ಯ. ಇದು ವಿಸ್ತರಣದ ಒಂದು ರೂಪ.

**ಮಹಾರೂಪಕ**

ಸಹ್ಯಾದ್ರಿ, ಶ್ರೀಗಂಧ, ಪಂಪನಾರಣಪ್ಪನವರ ಕಾವ್ಯಗಳು ಇವೆಲ್ಲ ಕನ್ನಡದ ಹೆಮ್ಮೆಯ ಚೇತನಗಳೆಂಬ ಮಾತಿದೆ. ಅವುಗಳನ್ನು ಒಳಗೊಂಡಂತೆ, ಅಲ್ಲ ಮೀರಿ ನಿಲ್ಲುವ ಕನ್ನಡನಾಡಿನ ಸಂಸ್ಕೃತಿಯ ಮಹಾರೂಪ, ಮಹಾರೂಪಕ – ಯಕ್ಷಗಾನ. ನಾಡಿನ ನೆಲಜಲ ಇತಿಹಾಸಗಳ, ಕಾವೇರಿ, ಗೋದಾವರಿಗಳ, ಕೆಂಪು–ಕಪ್ಪು–ಬಿಳಿ ಮಣ್ಣುಗಳ, ಲೌಕಿಕ–ಭಾರತೀಯ, ವಿಶ್ವ ಮತ್ತು ಸ್ಥಳೀಯ ಸಂವೇದನೆಗಳ, ಕನ್ನಡದೊಳಗಿನ ಕನ್ನಡಗಳ, ತುಳು ಕೊಂಕಣಿ ಮತಿಯೊಳಗಣ ಸಾರ ಮಧು ಅದು. ಲೋಕಧರ್ಮಿಗಳ ವಿಚಿತ್ರ

ಮಿಶ್ರಣ, ಧಾರ್ಮಿಕ ಉದಾರೀಕರಣ, ಭಕ್ತಿ–ಶಕ್ತಿ, ಸತ್ವ–ಕ್ಷಾತ್ರಗಳ, ನಯದೋಗುಗಳ ಜೋಡಣೆ, ಶಾಸ್ತ್ರ–ಜನಪದಗಳ ವಿಭಾಗವನ್ನು ಮೀರಿದ ನಿಜದ ದೇಸಿ.

ನೀತಿ ಸಂಸ್ಕೃತಿ, ಚಿಂತನ, ರಂಜನ, ಪಾಂಡಿತ್ಯ, ಕಾವ್ಯಾತ್ಮಕತೆ, ಶಿಕ್ಷಣ–ರಸ, ವಾಚಾಳಿತನ–ಮೌನ ಅಭಿನಯ–ಅಭಿನವಗಳ ಪದರು ಪದರಿನ ಸಮನ್ವಯ ಜೀವನ ದರ್ಶನಗ್ರತಿಥವಾದ ನಾಡದೇವಿಯ ಓಲೆ, ಕನ್ನಡ ವಾಗ್ಮಿತೆಯ, ಅಭಿವ್ಯಕ್ತಿ ಶಕ್ತಿಯ ವೈಭವದ ಸಾಕಾರ. ನಾಡ ಶಾಲೆ, ರಾತ್ರಿ ವಿದ್ಯಾಲಯ, ನಮ್ಮ ಬದುಕಿನ ರೀತಿಯ, ಸಂಸ್ಕೃತಿ ಸಾರದ ರಕ್ಷಣಾಸ್ಥಾನ, ಅವಿಚಾರಿತ ಆಧುನಿಕತೆಯ ಉಬ್ಬರದೆದುರಿನ ಅಡಗುದಾಣ, ಗುರಾಣಿ ಮತ್ತು ಕಮ್ಮಟ, ಬದುಕಿನ ಕಿನ್ನೋಟ–ಮುನ್ನೋಟ. ಅತಿಶ್ರದ್ಧೆ, ಅತಿ ತರ್ಕಗಳೆರಡನ್ನೂ ಅವಲಂಬಿಸಿದೆ. ನಮ್ಮ ಸರ್ವಶಕ್ತಿಯನ್ನು ಬಳಸಿ, ಇದನ್ನು ಉಳಿಸಿಕೊಳ್ಳೋಣ, ಬೆಳೆಸೋಣ, ಬೆಳೆಸೋಣ, ಮತ್ತೊಮ್ಮೆ ಎಲ್ಲರಿಗೂ ವಂದನೆಗಳು.

**ಕರ್ನಾಟಕ ಸಾಂಸ್ಕೃತಿಕ ಕಲಾ ಪರಿಷತ್ತು**
**ಬೆಂಗಳೂರಿನಲ್ಲಿ ಸಂಘಟಿಸಿದ ಐದನೆಯ ಯಕ್ಷಗಾನ ಸಮ್ಮೇಳನ ಅಧ್ಯಕ್ಷೀಯ**
**ಭಾಷಣ – ಜನವರಿ 2011**



# ಅಭಿಮತ

ನಮ್ಮ ಜೋಶಿ, ಅರ್ಥದಾರಿ ಮಾತ್ರವಲ್ಲ, ಅರ್ಥವಾಗುವ ಅರ್ಥದಾರಿ.. ಪ್ರಸಂಗ, ಪಾತ್ರ ಮತ್ತು ಇದಿರಾಳಿಯ ಮಾತಿನ ದಿಕ್ಕು ದೆಸೆ ಅರ್ಥೈಸಿ, ಅರ್ಥ ಹೇಳುವ ಕಲೆಯನ್ನು ಅರ್ಥ ಮಾಡಿಕೊಂಡ ಅರ್ಥದಾರಿ.

– **ಡಾ. ಶೇಣಿ ಗೋಪಾಲಕೃಷ್ಣ ಭಟ್** (ದಿ.)
(ಆಲಂತಡ್ಕ ಗಣೇಶೋತ್ಸವ ಸಂಮಾನದಲ್ಲಿ ಅಧ್ಯಕ್ಷರಾಗಿ)

.. ಜೋಶಿ ಕೂಟದಲ್ಲಿದ್ದರೆ ಸಾಕು, ನಮಗೆ ನಿರ್ಭೀತಿ.. ಪ್ರಸಂಗ ಸಂಪಾದನೆ, ಮಾರ್ಗದರ್ಶನ, ಜತೆಗಾರರನ್ನು ಎತ್ತಿ ಹಿಡಿದು ಸುಧಾರಿಸುವ ವಿಧಾನ, ಸಂವಾದದ ಅಂದ.. ಎಲ್ಲದರಲ್ಲೂ ನಮಗೆ ಸಲೀಸು, ದಾರಿ ಸುಗಮ.

– **ದಿ. ವಿದ್ವಾನ್ ಕೊರ್ಗಿ ವೆಂಕಟೇಶ್ವರ ಉಪಾಧ್ಯಾಯ**
(ಕಿನ್ನಿಗೋಳಿಯ ಭಾಷಣವೊಂದರಲ್ಲಿ)

ದಕ್ಷಿಣ ಕನ್ನಡದ ವಿದ್ವತ್ಪರಂಪರೆಯಲ್ಲಿ ಶ್ರೇಷ್ಠರಾದ ಸೇಡಿಯಾಪು, ಕುಕ್ಕಿಲ, ತೆಕ್ಕುಂಜ, ಮುಳಿಯರ ಸಾಲಿನಲ್ಲೂ; ಶ್ರೇಷ್ಠ ಕಲಾವಿದರಾದ ಸಾಮಗ, ಶೇಣಿ ಅವರೊಂದಿಗೂ ಗಣನೆಗೆ ಸಲ್ಲುವವರು ಎಂಬುದು ಜೋಶಿಯವರ ವೈಶಿಷ್ಟ್ಯ, ಹಿರಿಮೆ.

– **ಪ್ರೊ. ಮಲ್ಲೇಪುರಂ ಜಿ. ವೆಂಕಟೇಶ್**
(ಬೆಂಗಳೂರಿನ ಸಂಮಾನದಲ್ಲಿ)

'ಕೃಷ್ಣ ಸಂಧಾನ : ಪ್ರಸಂಗ ಮತ್ತು ಪ್ರಯೋಗ' – ಒಂದು ಯಕ್ಷಗಾನ ಕೃತಿಯನ್ನು ಸೂಕ್ಷ್ಮಾತಿಸೂಕ್ಷ್ಮ ವಿಶ್ಲೇಷಣೆಗೆ ಅಳವಡಿಸಿರುವ ಪ್ರಥಮ ಪ್ರಯತ್ನವಾಗಿದೆ. ವಿಷಯದ ತಲಸ್ಪರ್ಶಿಯಾದ ಅಧ್ಯಯನ ಇಲ್ಲಿ ಕಂಡುಬಂದಿದೆ. ಪ್ರತಿಯೊಂದು ಸಂದರ್ಭವನ್ನೂ ಎಳೆಎಳೆಯಾಗಿ ಬಿಡಿಸಿ ಅದರಲ್ಲಿರುವ ರಸಭಾವಗಳನ್ನು ಎತ್ತಿ ತೋರಿಸಿದ್ದಾರೆ. ವ್ಯಾಪಕ ಕ್ಷೇತ್ರ ಕಾರ್ಯ, ದೀರ್ಘಕಾಲದ ಸ್ವಾನುಭವ, ವಿಮರ್ಶಾತ್ಮಕ ದೃಷ್ಟಿ – ಇವುಗಳ ಹಿನ್ನೆಲೆಯಲ್ಲಿ ರೂಪುಗೊಂಡಿರುವ ಪ್ರಸ್ತುತ ಮಹಾಪ್ರಬಂಧ ಮಹತ್ವಪೂರ್ಣವಾಗಿದೆ."

– **ಡಾ. ಬಸವರಾಜ ಮಲಶೆಟ್ಟಿ, (ದಿ.)**
ಪ್ರಾಧ್ಯಾಪಕರು, ವಿಜಯನಗರ ಕಾಲೇಜು, ಹೊಸಪೇಟೆ

..ಜೋಶಿಯವರು ಸಂಪಾದಿಸಿದ 'ಕುಕ್ಕಿಲ ಸಂಪುಟ' – ದಿ.ಕುಕ್ಕಿಲ ಕೃಷ್ಣ ಭಟ್ಟರ ಬರಹಗಳ ಸಂಗ್ರಹವು, ಓರ್ವ ಶ್ರೇಷ್ಠ ಸಂಶೋಧಕನ ಬರಹಗಳ ಮಹತ್ವದ ಆಕರವಾಗಿದ್ದು ಸಂಶೋಧನ ಸಾಹಿತ್ಯಕ್ಕೆ ದೊಡ್ಡ ಕೊಡುಗೆಯಾಗಿರುವುದು.

– **ದಿ. ಪ್ರೊ. ಎಂ.ಎಂ. ಕುಲಬರ್ಗಿ**

ಭಾರತೀಯ ದರ್ಶನ ಶಾಸ್ತ್ರವನ್ನು ಅದರ ಗಹನತೆಯನ್ನು ಬಿಡದೆ, ಸರಳವಾಗಿ ನಿರೂಪಿಸಿದ ಡಾ.ಜೋಶಿ ಮತ್ತು ಪ್ರೊ.ಎಂ.ಎ.ಹೆಗಡೆಯವರ ಬರಹಗಳ ರೀತಿ ವಿಶಿಷ್ಟವಾದುದು.

**– ಎ. ಈಶ್ವರಯ್ಯ**

(ಭಾರತೀಯ ತತ್ತ್ವಶಾಸ್ತ್ರ ಗ್ರಂಥದಲ್ಲಿ)

ಅಧ್ಯಾಪನ, ವಿದ್ಯಾರ್ಥಿಗಳ, ಸಹೋದ್ಯೋಗಿಗಳ ಒಲವು, ಅಭಿಮಾನ, ವಿದ್ವತ್ತು ವ್ಯಕ್ತಿತ್ವ, ವಿವಿಧ ಅಭಿರುಚಿಗಳು, ಸರಳತೆಗಳಲ್ಲಿ ಜೋಶಿಯವರು ಓರ್ವ ಅಸಾಮಾನ್ಯ ಮಾದರಿ ವ್ಯಕ್ತಿ.

**ಪ್ರಾ. ಶ್ರೀಮತಿ ಸುಶೀಲಾ ಆರ್. ರಾವ್**

ಸಹೋದ್ಯೋಗಿ, ಲೇಖಕಿ

ಉಡುಪಿ

... ಯಾವ ವಿಚಾರವನ್ನಾದರೂ ಒಂದೇ ಮಗ್ಗುಲಿನಿಂದ ನೋಡುವವರಲ್ಲ. ಒಳ್ಳೆಯ ವಿಚಾರದ ಕೆಟ್ಟ ಮುಖಗಳನ್ನೂ, ಕೆಟ್ಟ ವಿಚಾರದ ಮುಖಗಳನ್ನೂ ನಿರ್ಲಿಪ್ತವಾಗಿ ನೋಡಬಲ್ಲರು. ಎಷ್ಟೇ ಕೆಟ್ಟ ಕಲಾವಿದನಾದರೂ ಅವರಿಗೆ ಅಲ್ಲೊಂದು ಒಳ್ಳೆಯ ಅಂಶ ಕಾಣಸಿಗುತ್ತದೆ. ದೊಡ್ಡ ಕಲಾವಿದರ ದೌರ್ಬಲ್ಯಗಳೂ ಅವರಿಗೆ ತಿಳಿದಿದೆ. ಕಲಾವಿದನಾಗಿ ಅವರದು ಕಣ್ಣಿಗೆ ಕಟ್ಟುವ ಪಾತ್ರ ಚಿತ್ರಣವಲ್ಲ. ಆದರೂ ತೀಕ್ಷ್ಣವಾದ ವೈಚಾರಿಕತೆ, ಪಾತ್ರದ ಒಳನೋಟ, ಹಾಸ್ಯಮಯ ಅಭಿವ್ಯಕ್ತಿಯಿಂದ ಅವರು ಎಲ್ಲರನ್ನೂ ಸೆಳೆಯುತ್ತಾರೆ. ಮತ್ತೆ ಮತ್ತೆ ಬೇಕೆನಿಸುತ್ತಾರೆ.

ಅವರ ಭಾಷಾ ಜ್ಞಾನದ ಹರಹೂ ದೊಡ್ಡದೆ. ಕನ್ನಡ, ತುಳು, ಕೊಂಕಣಿ, ಹಿಂದಿ, ಇಂಗ್ಲಿಷ್, ಸಂಸ್ಕೃತ, ಮರಾಠಿ ಮುಂತಾದ ಭಾಷೆಗಳಲ್ಲದೆ ಉಪಭಾಷೆಗಳಾದ ಹವ್ಯಕ, ಶಿವಳ್ಳಿ, ಚಿತ್ಪಾವನಿ ಮೊದಲಾದ ಉಪಭಾಷೆಗಳಲ್ಲೂ ನಿರಾಯಾಸವಾಗಿ ವ್ಯವಹರಿಸಬಲ್ಲರು. ಅವುಗಳ ಒಂದೊಂದು ಶಬ್ದ, ವ್ಯುತ್ಪತ್ತಿ, ಬೇರೆ ಭಾಷೆಗಳಲ್ಲಿ ಅವುಗಳಿಗೆ ಸಂವಾದಿ ಶಬ್ದಗಳು, ಅವುಗಳು ಹುಟ್ಟಿದ ಬಗೆ ಇತ್ಯಾದಿ ಎಲ್ಲವೂ ಅವರ ಚಿಂತನೆಗೆ ವಸ್ತುಗಳೆ. ಅವರು ಶೀಘ್ರಕೋಪಿಗಳಾದರೂ ದೀರ್ಘಕೋಪಿಗಳಲ್ಲ. ಹಿರಿಯರಾದ ಶೇಣಿಯವರಿಂದ ಹಿಡಿದು ಹಲವು ಹಿರಿಕಿರಿಯರ ಜೊತೆಗೂ ಜಗಳವಾಡಿದ್ದಾರೆ. ಆದರೆ ಯಾರೊಂದಿಗೂ ಮುನಿಸು ಇರಿಸಿಕೊಂಡವರಲ್ಲ...

**– ವೆಂಕಟರಾಮ ಭಟ್ಟ, ಸುಳ್ಯ**

ಪ್ರಾಚಾರ್ಯರು, ಪ್ರತಿಭಾ ವಿದ್ಯಾಲಯ

ಶ್ರೀರಾಮ ಪೇಟೆ, ಸುಳ್ಯ – 574239

"ಒಂದು ಕಥಾ ಪ್ರಸಂಗವನ್ನು ಅದರ ಸಾಹಿತ್ಯದಿಂದ ರಂಗಪ್ರದರ್ಶನದ ವರೆಗೆ ಹಲವಾರು ಮಜಲುಗಳಲ್ಲಿ ಸೂಕ್ಷ್ಮವಾಗಿ ವಿವೇಚಿಸಿ ಯಕ್ಷಗಾನವೆಂಬ ಸಂಕೀರ್ಣ ಕಲಾ ಮಾಧ್ಯಮದ ವಿವಿಧ ಆಯಾಮಗಳನ್ನು ಆಳವಾಗಿ ವಿವೇಚಿಸಿ ವಿದ್ವತ್ಪೂರ್ಣವಾದ ಮಹಾ ಪ್ರಬಂಧವನ್ನು ಈ ಸಂಶೋಧಕರು ರಚಿಸಿದ್ದಾರೆ. ಒಬ್ಬ ಕಲಾವಿದನ ದೃಷ್ಟಿ, ವಿಮರ್ಶಕನ ದೃಷ್ಟಿ, ಪ್ರದರ್ಶನದ ತಾಂತ್ರಿಕತೆಯ ಹಾಗೂ ಕಲಾತ್ಮಕತೆಯ ವಿವರಣೆಗಳು ಎಲ್ಲ ಸಮನ್ವಯಗೊಂಡು ಈ ಕಲಾ ಮಾಧ್ಯಮದ ಸಮಗ್ರತೆಯ ಬಗ್ಗೆ ನಡೆಸಿದ ಆಳವಾದ ಚಿಂತನೆ ಇಲ್ಲಿ ಕಂಡುಬರುತ್ತದೆ ಯಕ್ಷಗಾನದ ವಿಮರ್ಶಾ ಕ್ಷೇತ್ರದಲ್ಲಿ ಇನ್ನು ಮುಂದೆ ಆಗಬೇಕಾದ ಅಧ್ಯಯನಗಳ ಸಾಧ್ಯತೆಗಳ ಬಗ್ಗೆಯೂ ಖಚಿತವಾದ ಅಭಿಪ್ರಾಯಗಳನ್ನು ಕೊಡಲಾಗಿದೆ. ಇದೊಂದು ಮಾದರಿ ಅಧ್ಯಯನವಾಗಿದೆ. ಹಲವಾರು ಅಧ್ಯಯನ ಪ್ರಕಾರಗಳಿಗೆ ಈ ಕೃತಿ ಪ್ರೇರಣೆ ನೀಡಬಹುದಾಗಿದೆ."

**– ಡಾ. ಯು.ಪಿ. ಉಪಾಧ್ಯಾಯ**

ಪ್ರಾಧ್ಯಾಪಕರು, ರಾಷ್ಟ್ರಕವಿ ಗೋವಿಂದ ಪೈ ಸಂಶೋಧನ ಕೇಂದ್ರ, ಉಡುಪಿ

ಜೋಶಿಯವರ ಪಿಎಚ್.ಡಿ. ಮಾರ್ಗದರ್ಶಕರು

'ಕೃಷ್ಣ ಸಂಧಾನ : ಪ್ರಸಂಗ ಮತ್ತು ಪ್ರಯೋಗ' – "ಇದು ಸಂಶೋಧನ ವಿಧಾನಕ್ಕೆ ಅನುಸಾರವಾಗಿ ಸಿದ್ಧಗೊಂಡ ಅಚ್ಚುಕಟ್ಟಾದ ಸಂಶೋಧನ ಪ್ರಬಂಧವಾಗಿದೆ. ಸಂಶೋಧಕರು ವಿಶೇಷ ಶ್ರಮವಹಿಸಿ ತಮ್ಮ ಸಂಶೋಧನ ಪ್ರಬಂಧಕ್ಕೆ ಅಗತ್ಯವಾದ ಎಲ್ಲ ಮಾಹಿತಿಗಳನ್ನೂ ಕಲೆಹಾಕಿ, ಕ್ರಮವಾಗಿ ಅವುಗಳನ್ನು ವರ್ಗೀಕರಿಸಿ ವಿಮರ್ಶಾತ್ಮಕ ಹಾಗೂ ತೌಲನಿಕ ದೃಷ್ಟಿಯಿಂದ ವಿಶ್ಲೇಷಿಸಿದ್ದಾರೆ. ಆರಿಸಿಕೊಂಡ ವಿಷಯದ ಮೇಲೆ ಸಂಶೋಧಕರಿಗಿರುವ ಆಸಕ್ತಿ, ಆಳವಾದ ಅನುಭವ, ವಿಷಯಗಳ ವಿಶ್ಲೇಷಣೆಯಲ್ಲಿರುವ ಸೂಕ್ಷ್ಮದೃಷ್ಟಿ.. ಮುಂತಾದವು ಪ್ರಬಂಧದ ಉದ್ದಕ್ಕೂ ಎದ್ದು ಕಾಣುತ್ತದೆ. ಪ್ರತಿಯೊಂದು ಅಂಶವನ್ನೂ ಎಲ್ಲಾ ದೃಷ್ಟಿಗಳಿಂದಲೂ ವಿವರಾತ್ಮಕವಾಗಿ ವಿಶ್ಲೇಷಣೆ ನಡೆಸಿರುವುದು ಈ ಪ್ರಬಂಧದ ವೈಶಿಷ್ಟ್ಯವಾಗಿದೆ ಯಕ್ಷಗಾನ ಸಂಶೋಧನ ಕ್ಷೇತ್ರದಲ್ಲಿ ಇದೊಂದು ಮಾದರಿಯಾದ ಪ್ರಬಂಧವೆನ್ನಬಹುದು."

**– ಡಾ. ಶ್ರೀಕೃಷ್ಣ ಭಟ್ ಅರ್ತಿಕಜೆ**

ಕನ್ನಡ ವಿಭಾಗದ ಮುಖ್ಯಸ್ಥರು, ಮದರಾಸು ವಿಶ್ವವಿದ್ಯಾನಿಲಯ

... ವೃತ್ತಿಯಲ್ಲಿ ವಾಣಿಜ್ಯ ಶಾಸ್ತ್ರ ಉಪನ್ಯಾಸಕರಾಗಿ ನಿವೃತ್ತರು. ಯಕ್ಷಗಾನ ಅವರಿಗೆ ಹೆಸರು ತಂದಿತ್ತ ಕ್ಷೇತ್ರ. ಡಾ.ಶೇಣಿ ಗೋಪಾಲಕೃಷ್ಣ ಭಟ್ಟರ ಬಳಿಕದ ತಲೆಮಾರಿನ ಶ್ರೇಷ್ಠ ಅರ್ಥದಾರಿ. ಕೋಟ ಶಿವರಾಮ ಕಾರಂತರ ಬಳಿಕ  ಕ್ಷೇತ್ರದ ಸಂಶೋಧನೆ, ಅಧ್ಯಯನದಲ್ಲಿ ರಾಜ್ಯ, ದೇಶ, ವಿದೇಶಗಳ ವಿದ್ವಾಂಸರಿಗೂ ಬೇಕಾದವರು. ಯಾವುದೇ ವಿಷಯ ಕೇಳಿದರೂ ಅದರ ಸಮೂಲಾಗ್ರ ಅರಿವು ಕೊಡಬಲ್ಲ ಸಮರ್ಥ ಗುರು. ಮತ್ತೆ ಮತ್ತೆ

ಕೇಳಿಸಬೇಕೆಂಬಂಥ ಮಾತುಗಾರ, ಪಂಥಗಳ ಹಂಗಿಲ್ಲದ, ಯಾವ ದಾಕ್ಷಿಣ್ಯಕ್ಕೂ ಬಗ್ಗದ ಸಂಶೋಧಕ. ವಸ್ತುನಿಷ್ಠ ಚಿಂತಕ – ಎಲ್ಲಕ್ಕೂ ಮಿಗಿಲಾಗಿ ಮಗು ಮನಸ್ಸಿನ ಸ್ನೇಹಜೀವಿ. ಡಾ.ಜೋಶಿಯವರ ಬದುಕಿನ ಕತೆಯೆಂದರೆ ಅದು ಯಕ್ಷಗಾನದ ಆರೇಳು ದಶಕಗಳ ಚರಿತ್ರೆಯೂ ಹೌದು. ಒಂದು ಕಾಲದ ತಾಳಮದ್ದಳೆ ಲೋಕದ ಇತಿಹಾಸವೂ ಹೌದು...

**– ಚಂದ್ರಶೇಖರ ಮಂಡೆಕೋಲು**

(ಕಾಂತಾವರದ 'ನಾಡಿಗೆ ನಮಸ್ಕಾರ' ಮಾಲಿಕೆ ಕೃತಿಯಲ್ಲಿ)

ಯಕ್ಷಗಾನಕ್ಕೊಬ್ಬನೇ ಜೋಶಿ. ವ್ಯಕ್ತಿತ್ವ, ಪಾಂಡಿತ್ಯ, ಕೇಳಿದಾಗಲೆಲ್ಲಾ ಸಹಕಾರ, ಅರ್ಥಗಾರಿಕೆಯ ಸೊಗಸು, ವ್ಯಕ್ತಿತ್ವ, ಸ್ನೇಹಶೀಲತೆ ಎಲ್ಲದರಲ್ಲೂ ಜೋಶಿ.

**– ಉಜಿರೆ ಅಶೋಕ ಭಟ್ ಎನ್.**

(ಭಾಷಣವೊಂದರಲ್ಲಿ)

... ಎದುರಾಳಿ ಯಾವುದೇ ವಾದ, ವಿವಾದ ಮಾಡಿದರೂ, ಜೋಶಿಯವರ ಬತ್ತಳಿಕೆಯಿಂದ ಕೂಡಲೇ ಉತ್ತರ ಬರುತ್ತದೆ. ಅದೂ ಸಕಾರಣ, ಸಾಧಾರವಾಗಿ. ನಗುನಗುತ್ತಾ ಅರ್ಥ ಹೇಳುವ ಡಾ.ಜೊಶಿಯವರು, ಎದುರು ಅರ್ಥದಾರಿಗಳು ಅಬದ್ಧ ಮಂಡನೆ, ಕುತರ್ಕ, ಪ್ರಸಂಗ ಮೀರಿದ ವಾದ ಮಾಡಿದರೆ, ಅಲ್ಲೇ ಅವರನ್ನು ತಿದ್ದುವ ಶೈಲಿ ಅನುಕರಣೀಯ. ಇವರ ಅರ್ಥದಲ್ಲಿ ನವರಸಗಳ ಪ್ರಸ್ತುತಿಯಿದ್ದರೂ, ಹಾಸ್ಯರಸವೇ ಪ್ರೇಕ್ಷಕರನ್ನು ಅಪಾರವಾಗಿ ರಂಜಿಸುವುದು.. ಪ್ರಸಂಗದಲ್ಲಿ ಬರುವ ಎಲ್ಲಾ ಕಲಾವಿದರಿಗೂ ಅವಕಾಶ ದೊರಕಬೇಕು ಎಂಬ ಆಶಯ, ಕಾಳಜಿ. ಸಂಘಟಕರಿಗೂ, ತಪ್ಪಿದರೆ, ಕೂಡಲೇ ತಿಳಿಸುವುದು ಅವರ ಕ್ರಮ. ...

**– ಎಂ. ಶಾಂತಾರಾಮ ಕುಡ್ವ, ಮೂಡುಬಿದಿರೆ**

"ಡಾ.ಪ್ರಭಾಕರ ಜೋಶಿಯವರು ಯಕ್ಷಗಾನ ವಿದ್ವಾಂಸ, ತಾಳಮದ್ದಳೆ ಅರ್ಥಧಾರಿ, ಯಕ್ಷಗಾನ ಲೇಖಕ–ವಿಮರ್ಶಕ" ಎಂದು ಅವರನ್ನು ಯಕ್ಷಗಾನಕ್ಕೆ ಸೀಮಿತಗೊಳಿಸುವುದು, ಅವರನ್ನು ಸರಿಯಾಗಿ ತಿಳಿದಂತಲ್ಲ. ಅವರು ರಂಗಭೂಮಿಯ ವಿವಿಧ ಪ್ರಕಾರಗಳನ್ನು ಅಧ್ಯಯನ ಮಾಡಿದವರು. ಸಾಹಿತ್ಯದ ವಿವಿಧ ಮಜಲುಗಳನ್ನು ಸ್ಪರ್ಶಿಸಿದವರು. ಅಷ್ಟೇ ಅಲ್ಲದೇ ಆಂಗ್ಲಸಾಹಿತ್ಯವನ್ನೂ ಓದಿಕೊಂಡವರು. ಆದ್ದರಿಂದಲೇ ಅವರು ಯಕ್ಷಗಾನದ ಬಗೆಗೆ ಅಧಿಕೃತವಾಗಿ ಮಾತಾಡಬಲ್ಲವರು, ಬರೆಯಬಲ್ಲವರು, ವಿಮರ್ಶಿಸಬಲ್ಲವರು.

ಐವತ್ತಕ್ಕೂ ಹೆಚ್ಚು ವರ್ಷಗಳಿಂದ 'ದೇರಾಜೆಯವರ' ಮನೆಯ ಆತ್ಮೀಯ ಸದಸ್ಯರು. ಡಾ.ಜೋಶಿಯವರ ಕುರಿತು, ಐವತ್ತು ವರ್ಷ ಹಿಂದೆಯೇ ನನ್ನ ತೀರ್ಥರೂಪರಾದ ದೇರಾಜೆ ಸೀತಾರಾಮಯ್ಯನವರು ಮೆಚ್ಚುಗೆಯಿಂದ...

"ಜೋಶಿಯ ತಲೆಯೆಂಬ ಕಾರ್ಖಾನೆ ಬಹಳ ವಿಶೇಷದ್ದು. ಯಕ್ಷಗಾನ ಕ್ಷೇತ್ರದಲ್ಲೇ

ಇಷ್ಟು ವಿಪುಲವಾಗಿ ಓದಿದವರಿಲ್ಲ. ಯಕ್ಷಗಾನಕ್ಕೊಬ್ಬ ತಜ್ಞ ವಿಮರ್ಶಕ ಸಿಕ್ಕಿದ್ದಾನೆ, ನಮ್ಮ ಜೋಶಿ ಮುಂದೆ ದೊಡ್ಡ ಹೆಸರು ಪಡೆದೇ ಪಡೆಯುತ್ತಾನೆ..." ಅಂತ ಹೇಳಿದ್ದು ನನಗಿನ್ನೂ ನೆನಪಿದೆ.

**– ವಿಟ್ಲದಿಂದ ಮೂರ್ತಿ ದೇರಾಜೆ**

## ಅನನ್ಯ – ಅರ್ಥವಂತಿಕೆ

"ಅರ್ಥವಂತಿಕೆ, ಅರ್ಥದಾರಿಕೆ – ಅರ್ಥವಿವರಣೆ" – ಯಕ್ಷಗಾನ ತಾಳಮದ್ದಳೆಯಲ್ಲಿ ಪಾತ್ರಧಾರಿಯ – ಅಥವಾ ಪಾತ್ರವಚನ ಶಿಲ್ಪಿಯನ್ನು ಪರಿಭಾಷಿಸಲು ಉಪಯೋಗಿಸುವ ವ್ಯಾಖ್ಯಾನ ಪದಗಳು. ಆದರೆ ಡಾ॥ ಪ್ರಭಾಕರ ಜೋಶಿಯವರನ್ನು ಇಂತಹ ಒಂದು ಕಪಿಮುಷ್ಠಿಯೊಳಗೆ ಹಿಡಿದಿರುವುದು ಅಸಾಧ್ಯ. ಸ್ವಯಂ ಸಂವಾದಿಯಾಗಿ, ಸ್ವಯಂ ಅನುಭಾವೀ ಸಂವೇದನೆಯ ಮೂಲಕ, ಮಾತಿನ ಅಕ್ಷರಗಳಲ್ಲಿ ಒಂದು ಪಾತ್ರವನ್ನು ಕಡೆಯುವವರು ಡಾ॥ ಜೋಶಿ. ಇಂತಹ 'ಕಡೆಯುವ' ಸಂದರ್ಭದಲ್ಲಿ ಅವರದ್ದು ಭಾವನಿರ್ಲಿಪ್ತ ಶಿಲ್ಪ ನಿರ್ಮಾಣ. ಅದು ಕೌರವ–ಕೃಷ್ಣ, ವಾಲಿ–ರಾಮ, ಅರ್ಜುನ–ಸುಧನ್ವ, ಪ್ರಹಸ್ತ–ಅಂಗದ ಇಂತಹ ಯಾವುದೇ ವಾಚ್ಯಾನುಕೂಲ ಪಾತ್ರಗಳಿರಲೀ, ಅವುಗಳನ್ನು ಕೆತ್ತುವಾಗ ಅವರು ನಿರ್ಮಿಸುವುದು ಒಂದು ಧ್ವನ್ಯಾಲೋಕ. ವಿಡಂಬನೆ–ವಿಮರ್ಶೆ–ವ್ಯಂಗ್ಯಗಳು ಕೊಡುವ ರಂಜನೆಗಳ ಒಳ ಹೊಕ್ಕಾಗ ಅವರು ದರ್ಶಿಸುವುದು. ಪಾತ್ರಾನುಭಾವ – ಕೇಳುಗರು ಬಾಹ್ಯ ಪ್ರತಿಕ್ರಿಯೆಯಲ್ಲಿ ತಲೆದೂಗಿಯಾರು! ಆದರೆ ಚಿಂತನೆ, ಭಾವ ಪ್ರತಿಕ್ರಿಯೆಯಲ್ಲಿ ಮನದೂಗಿಯಾರು! ಆದಕಾರಣ ಡಾ॥ ಪ್ರಭಾಕರ ಜೋಶಿಯವರ 'ಅರ್ಥವಂತಿಕೆ' – ಅನುರಣಿಸುವುದು 'ತಾಳಮದ್ದಳೆ'ಯ ಪ್ರಸಂಗ ಮುಗಿದ ಬಳಿಕ! ಅನೇಕ ವಾಚಸ್ಪತಿಗಳಿಂದ ಶ್ರೀಮಂತಗೊಂಡ ತಾಳಮದ್ದಳೆಯ ಪ್ರಪಂಚದಲ್ಲಿ – ಸುಲಭದಲ್ಲಿ ಗಿಟ್ಟದ, ಆದರೆ ಸುಲಭವಾಗಿಯೂ ಅರಗಿಸಿಕೊಳ್ಳಲು ಸಾಧ್ಯವಾಗುವ ಅರ್ಥ ಸಿರಿವಂತಿಕೆ. ಡಾ॥ ಪ್ರಭಾಕರ ಜೋಶಿಯವರದ್ದು. ಅವರೊಂದು ಅನನ್ಯ! ಅದ್ಭುತ. ಭಾವ ಮತ್ತು ವಿಚಾರ ಪ್ರಪಂಚಗಳಲ್ಲಿ ಜೊತೆಜೊತೆಗೆ ನಡೆದಾಡಬಲ್ಲ, ಕುಣಿದು ಕುಣಿಸಬಲ್ಲ ಅಕ್ಷರಶಿಲ್ಪಿ!...

**ಪ್ರೊ. ಕೆ.ಇ. ರಾಧಾಕೃಷ್ಣ**
ಶಿಕ್ಷಣತಜ್ಞ, ಕವಿ, ಬೆಂಗಳೂರು
(ಬೆಂಗಳೂರು ಸಂಮಾನದ ಭಾಷಣದಿಂದ)

# ಲೇಖಕರ ವಿಳಾಸ

**ಯೋಗೀಶ್ ರಾವ್ ಚಿಗುರುಪಾದೆ**
ಲೇಖಕರು
ಅಂಚೆ : ಮೀಯಪದವು
(ವಯ) ಮಂಜೇಶ್ವರ 671323
ಕಾಸರಗೋಡು ಜಿಲ್ಲೆ (ಕೇರಳ)

**ಗ.ನಾ. ಭಟ್ಟ ಮೈಸೂರು**
ಪ್ರಾಧ್ಯಾಪಕ, ಲೇಖಕ, ಅರ್ಥದಾರಿ
97, 'ಪರಮಹಂಸ'
ಮೂರನೇ ಮುಖ್ಯರಸ್ತೆ, ಯಾದವಗಿರಿ
ಮೈಸೂರು – 570020

**ಪ್ರಾ. ಭಾಸ್ಕರ ರೈ ಕುಕ್ಕುವಳ್ಳಿ**
ಕಲಾವಿದ, ಲೇಖಕ, ಸಂಘಟಕ
'ವಿದ್ಯಾ', ಕದ್ರಿ ಕಂಬಳ ರಸ್ತೆ,
ಬಿಜೈ, ಮಂಗಳೂರು – 575004

**ಕೆ. ಶ್ರೀಕರ ಭಟ್**
ಪತ್ರಕರ್ತ / ಅರ್ಥದಾರಿ
ಮಜಲು, ಮುಂಡಾಜೆ
ಬೆಳ್ತಂಗಡಿ ತಾಲೂಕು (ದ.ಕ.)

**ರಾಧಾಕೃಷ್ಣ ಕಲ್ಚಾರ್**
ಯಕ್ಷಗಾನ ಅರ್ಥದಾರಿ, ಸಾಹಿತಿ,
'ನಿವೇಶ', ಶಿವಾಜಿನಗರ, ವಿಟ್ಲ (ದ.ಕ.)

**ಪ್ರೊ. ಎಮ್.ಎಲ್. ಸಾಮಗ**
ಹಿರಿಯ ಕಲಾವಿದ, ಪ್ರಾಧ್ಯಾಪಕರು,
'ಕಲಾಯತನ'
ಮಲ್ಪೆ, ಉಡುಪಿ ಜಿಲ್ಲೆ

**ನಾ. ಕಾರಂತ ಪೆರಾಜೆ**
ಲೇಖಕ, ಪತ್ರಕರ್ತ
ಅಂಚೆ ಪೆಟ್ಟಿಗೆ 8
ಪುತ್ತೂರು – 574201

**ಎನ್. ಸುಬ್ರಹ್ಮಣ್ಯ ಬೈಪಾಡಿತ್ತಾಯ**
ಕಲಾವಿದ, ಲೇಖಕ
ನಂದಳಿಕೆ, ಬೆಳ್ಮಣ್ಣು, ಉಡುಪಿ ಜಿಲ್ಲೆ

**ರಾಜ್‌ಕುಮಾರ್ ಪೈವಳಿಕೆ**
ಲೆಕ್ಕಪರಿಶೋಧಕರು
ಬೆಂಗಳೂರು

**ಎಂ. ಶಾಂತಾರಾಮ ಕುಡ್ವ**
ಕಲಾಸಂಘಟಕ
ಮೂಡಬಿದಿರೆ
ಮಂಗಳೂರು ತಾಲೂಕು

**ಪಾದೆಕಲ್ಲು ವಿಷ್ಣು ಭಟ್**
ಸಂಶೋಧಕ, ಲೇಖಕ
'ಧಾತ್ರಿ', ಅಂಚೆ :ಆತ್ರಾಡಿ
ಉಡುಪಿ – 576107

**ಕೃಷ್ಣಪ್ರಕಾಶ ಉಳಿತ್ತಾಯ**
ಕಲಾವಿದರು, ಮದ್ದಳೆಗಾರರು,
ಅಧಿಕಾರಿ, ಕರ್ನಾಟಕ ಬ್ಯಾಂಕ್
'ಈಶಾವಾಸ್ಯ'
ಸದಾಶಿವ ದೇವಸ್ಥಾನದ ಬಳಿ, ಪೆರ್ಮಂಕಿ
ಉಳಾಯಿಬೆಟ್ಟು ಗ್ರಾಮ
ಮಂಗಳೂರು ತಾಲೂಕು (ದ.ಕ.)

**ಲಕ್ಷ್ಮೀಶ ತೋಳ್ಪಾಡಿ**
ಸಾಂಸ್ಕೃತಿಕ ಚಿಂತಕರು
ಶಾಂತಿಗೋಡು,
ಪುತ್ತೂರು ತಾಲೂಕು (ದ.ಕ.)

**ಡಾ. ಕೆ.ಎಂ. ರಾಘವ ನಂಬಿಯಾರ್**
ಸಂಶೋಧಕ, ಪತ್ರಕರ್ತ, ಸಂಘಟಕ
'ಪಂಚಮೂಲ'
ಇಂದ್ರಾಳಿ, ಉಡುಪಿ – 576 102

**ಡಾ. ಬಿ.ಎ. ವಿವೇಕ ರೈ**
ಬಹುಶ್ರುತ ವಿದ್ವಾಂಸ, ಸಾಹಿತಿ,
ಸಂಶೋಧಕರು
'ಸುಯಿಲ್', ಜಪ್ಪು ಕುಡ್ಪಾಡಿ,
ಮಂಗಳೂರು – 575 002

**ಡಾ. ಅಮೃತ ಸೋಮೇಶ್ವರ**
ಕವಿ, ವಿದ್ವಾಂಸ, ಸಾಹಿತಿ, ಸಂಶೋಧಕರು
'ಒಲುಮೆ', ಕೋಟೆಕಾರು
ಮಂಗಳೂರು ತಾಲೂಕು – 575 022

**ಡಾ.ಪುರುಷೋತ್ತಮ ಬಿಳಿಮಲೆ**
ಪೂರ್ವ ನಿರ್ದೇಶಕರು,
ಭಾರತೀಯ ಅಧ್ಯಯನದ ಅಮೇರಿಕನ್
ಸಂಸ್ಥೆ (AIIS)
ಮುಖ್ಯಸ್ಥರು, ಕನ್ನಡ ಅಧ್ಯಯನ ಪೀಠ
ಜೆಎನ್‌ಯು, ನವದೆಹಲಿ

**ಪ್ರೊ. ಕೆ. ಚಿನ್ನಪ್ಪ ಗೌಡ**
ಪ್ರಾಧ್ಯಾಪಕ, ಜಾನಪದತಜ್ಞ
'ಸಿರಿಬಾಮ'
ಅಸೈಗೋಳಿ ಅಂಚೆ, ಮಂಗಳೂರು

**ಪ್ರೊ. ಕು.ಶಿ. ಹರಿದಾಸ್ ಭಟ್ಟ** (ದಿ.)
ಅಗ್ರಗಣ್ಯ ಲೇಖಕ, ಸಂಸ್ಕೃತಿತಜ್ಞ, ಸಂಘಟಕ
ಉಡುಪಿ

**ಪ್ರೊ. ಉದ್ಯಾವರ ಮಾಧವ ಆಚಾರ್ಯ**
ಕವಿ, ರಂಗತಜ್ಞ, ವಿಮರ್ಶಕರು
'ವ್ಯಾಸ'
ಚಿಟ್ಪಾಡಿ, ಉಡುಪಿ – 576 010

**ಜಿ.ಎನ್. ಅಶೋಕವರ್ಧನ**
'ಅಭಯಾದ್ರಿ'
ಪಿಂಟೋ ಓಣಿ
ಕರಂಗಲಪಾಡಿ – 575003

# ಈ ಲೇಖಕನ ಇತರ ಕೃತಿಗಳು

**ಕೃತಿಗಳು**

- ಜಾಗರ
- ಕೇದಗೆ
- ಮಾರುಮಾಲೆ
- ಪ್ರಸ್ತುತ
- ಯಕ್ಷಗಾನ ಪದಕೋಶ
- ಭಾರತೀಯ ತತ್ವಶಾಸ್ತ್ರ
- ತತ್ವಮನನ
- ತಾಳಮದ್ದಲೆ
- ವಾಗರ್ಥ
- ಕೃಷ್ಣ ಸಂಧಾನ : ಪ್ರಸಂಗ ಮತ್ತು ಪ್ರಯೋಗ
- ಮುಡಿ
- ಮಂದಾರ ಕೇಶವ ಬಟ್ರ್ (ಪರಿಚಯ-ತುಳು)
- ಗುರ್ತ (ತುಳು ಕವಿತೆಗಳು)
- ಪಂಡಿತ ಪೆರ್ಲ ಕೃಷ್ಣಭಟ್ಟ
- ಯಕ್ಷಗಾನ ಸ್ಥಿತಿ-ಗತಿ
- ಕವಿತೆಗಳು, ಅನುವಾದಗಳು ಹಲವು ನೃತ್ಯ ನಾಟಕಗಳು
- ಸಂಸ್ಕೃತಿ, ರಾಜಕೀಯ, ಅರ್ಥಶಾಸ್ತ್ರ, ಕ್ರೀಡೆ, ಪ್ರಚಲಿತ ವಿದ್ಯಮಾನ ಮೊದಲಾದ ವಿವಿಧ ವಿಚಾರಗಳಲ್ಲಿ ನೂರಾರು ಬಿಡಿ ಬರಹಗಳು, ಅಂಕಣ ಲೇಖನಗಳು, ಉಪನ್ಯಾಸಗಳು.

**ಇತರರೊಂದಿಗೆ**

- ಮಣೇಲ್ ಶ್ರೀನಿವಾಸ ನಾಯಕರು : ಜೀವನ ಪರಿಚಯ
  – ಎನ್. ಮಾಧವಾಚಾರ್ಯ
- ಭಾರತೀಯ ತತ್ವಶಾಸ್ತ್ರ ಪರಿಚಯ, ಭಾರತೀಯ ತತ್ವಶಾಸ್ತ್ರ ಪ್ರವೇಶ
  – ಪ್ರೊ. ಎಂ.ಎ. ಹೆಗಡೆ
- ಕುಮಾರಿಲ ಭಟ್ಟ
  – ಪ್ರೊ. ಎಂ.ಎ. ಹೆಗಡೆ
- ದಕ್ಷಿಣ ಕನ್ನಡ
  – ಗುರುರಾಜ ಮಾರ್ಪಳ್ಳಿ
- ಹಾಜಿ ಅಬ್ದುಲ್ಲಾ – (ಕಾರ್ಪೋರೇಶನ್ ಬ್ಯಾಂಕ್ ಸ್ಥಾಪಕ, ಮಹಾದಾನಿ) ಇಂಗ್ಲಿಷ್ ಅನುವಾದ. ಮೂಲ : ಪ್ರೊ. ಮುರಳೀಧರ ಉಪಾಧ್ಯ ಹಿರಿಯಡ್ಕ

**ಸಂಪಾದಿತ**

- ಅರ್ಥಗಾರಿಕೆ : ಸ್ವರೂಪ ಸಮೀಕ್ಷೆ
- ಯಕ್ಷಗಾನ ಚಿಂತನ
- ಕುಕ್ಕಿಲ ಸಂಪುಟ

**ಸಂಪಾದಿತ : ಇತರರೊಂದಿಗೆ**

- ಯಕ್ಷಗಾನ ಮಕರಂದ (ಪೊಳಲಿ ಶಾಸ್ತ್ರಿ ಸಂಸ್ಮರಣ ಗ್ರಂಥ)
- ಯಕ್ಷಕರ್ದಮ
  (ಪದವೀಧರ ಯಕ್ಷಗಾನ ಸಮಿತಿ, ಮುಂಬೈ, ಸಮ್ಮೇಳನ ಸಂಕಲನ)
- ಗಾನಕೋಗಿಲೆ (ಭಾಗವತ ದಾಮೋದರ ಮಂಡೆಚ್ಚ ಸಂಸ್ಮರಣ ಗ್ರಂಥ)
- ಸ್ವರ್ಣ ರೇಖೆ, Vision 21st Century
  (ಕರ್ನಾಟಕ ರಾಜ್ಯ ಸ್ವರ್ಣ ಮಹೋತ್ಸವ ನೆನಪಿನ ಲೇಖನ ಸಂಕಲನಗಳು)
- ಪೊಲಿ (ಕೆನರಾ ಜಿಲ್ಲೆ ಶತಮಾನ- ಸಂಪುಟ)
- ಕುಬಣೂರು ಸ್ಮೃತಿ (ಕುಬಣೂರು ಬಾಲಕೃಷ್ಣ ರಾವ್ ಸ್ಮೃತಿ ಗ್ರಂಥ)
- ರಂಗವೆಂಕಟ (ಪಣಂಬೂರು ವೆಂಕಟರಾಯ ಐತಾಳ ಸಂಸ್ಮರಣ ಗ್ರಂಥ)
- ದೀವಾಣ ಸಂಪದ (ದೀವಾಣ ಭೀಮ ಭಟ್ಟ ಸ್ಮರಣ ಗ್ರಂಥ)
- ಮೂಡಂಬೈಲು ಶಾಸ್ತ್ರಿ-75 (ಅಭಿನಂದನ ಗ್ರಂಥ)
- ಶೇಣಿ ಪ್ರಸಂಗ - ಶೇಣಿ ಅವರ ಎರಡು ಯಕ್ಷಗಾನ ಕೃತಿಗಳು.
- ವಾಚಿಕ (ತಾಳಮದ್ದಲೆ ವಿಮರ್ಶಾ ಸಂಕಲನ ಗ್ರಂಥ)
- ಶ್ರೀಮಯ ಅಮೃತ ಸಿಂಚನ (ಶ್ರೀ ಇಡಗುಂಜಿ ಮೇಳ-75 ಸಂಪುಟ)
- ಶ್ರೀಮಯ ಅಮೃತ ಮಂಥನ (ಶ್ರೀ ಇಡಗುಂಜಿ ಮೇಳ-80 ಸಂಪುಟ)

**ಜೋಶಿಯವರನ್ನು ಕುರಿತು :**

- ಪ್ರಗಲ್ಭ ಚಿಂತಕ, ಅರ್ಥವಿಹಾರಿ; ಲೇ : ಚಂದ್ರಶೇಖರ ಮಂಡೆಕೋಲು
  (ಕಾಂತಾವರ ಕನ್ನಡ ಸಂಘದ ನಾಡಿಗೆ ನಮಸ್ಕಾರ ಮಾಲಿಕೆಯಲ್ಲಿ)
- ಜೋಶಿ ವಾಗರ್ಥ ಗೌರವ; ಸಂ. : ವಿ। ಗ.ನಾ. ಭಟ್ಟ
  (ಮೈಸೂರಲ್ಲಿ ಜರಗಿದ ಸಂಮಾನ-ಗೋಷ್ಠಿಗಳ ಸಂಗ್ರಹ)
- ಜಾಗರದ ಜೋಶಿ; ಸಂ. : ನಾ. ಕಾರಂತ ಪೆರಾಜೆ, ಪುತ್ತೂರು
  (ಜೋಶಿಯವರ ಕುರಿತ ಪೂರ್ವಪ್ರಕಟಿತ ಬರಹ-ನುಡಿ-ಮುನ್ನುಡಿ ಮಾಲೆ)



ಡಾ. ಎಂ. ಪ್ರಭಾಕರ ಜೋಶಿ ಅವರನ್ನು ನಾನು ಕಳೆದ ನಲುವತ್ತು ವರ್ಷಗಳಿಂದ ಚೆನ್ನಾಗಿ ಬಲ್ಲೆ. ಡಾ. ಜೋಶಿ ಅವರು ಯಕ್ಷಗಾನ ಕ್ಷೇತ್ರದಲ್ಲಿ ಬಹುಮುಖಿ ಸಾಧನೆ ಮಾಡಿದ್ದಾರೆ. ಯಕ್ಷಗಾನದ ಅಗ್ರ ಶ್ರೇಣಿಯ ಕಲಾವಿದರಾಗಿ, ಉನ್ನತ ಸಂಶೋಧನೆಯ ಸಂಶೋಧಕರಾಗಿ, ಯಕ್ಷಗಾನ ಕೋಶದ ನಿರ್ಮಾಪಕರಾಗಿ, ಸೂಕ್ಷ್ಮಗ್ರಹಣ ಶಕ್ತಿಯ ವಿಮರ್ಶಕರಾಗಿ, ಕಲಾವಿದರನ್ನು ಗುರುತಿಸಿ ಅವರಿಗೆ ಗೌರವ ದೊರಕಿಸಿಕೊಡುವ ಸಾಂಸ್ಕೃತಿಕ ಹಿರಿಯರಾಗಿ, ವಿಚಾರಗೋಷ್ಠಿ ಕಮ್ಮಟ ತರಬೇತಿ ಶಿಬಿರಗಳ ಸಂಪನ್ಮೂಲ ವ್ಯಕ್ತಿಯಾಗಿ ಕಳೆದ ನಲುವತ್ತೈದು ವರ್ಷಗಳಿಂದ ಅವಿರತ ಸಾಧನೆ ಮಾಡಿಕೊಂಡು ಬಂದಿದ್ದಾರೆ.

ಡಾ. ಜೋಶಿಯವರ ಸಂಶೋಧನೆಯ ಫಲವಾಗಿ ಯಕ್ಷಗಾನದ ಪರಂಪರೆಯ ಸಂರಕ್ಷಣೆಗೆ ಹೊಸ ಆಯಾಮ ದೊರಕಿದೆ. ಅವರ 'ಯಕ್ಷಗಾನ ಪಾರಿಭಾಷಿಕ ಕೋಶ'ದ ನಿರ್ಮಾಣದಿಂದಾಗಿ ಪರಂಪರೆಯ ವೇಷ ಮತ್ತು ಸಾಮಗ್ರಿಗಳು ಮತ್ತೆ ಪುನರ್ ನಿರ್ಮಾಣವಾಗಿವೆ. ಯಕ್ಷಗಾನದ ಪರಂಪರೆ ಮತ್ತು ಪ್ರಯೋಗದ ಬಗ್ಗೆ ಆಳವಾದ ಅಧ್ಯಯನ ನಡೆಸಿ ಜೋಶಿಯವರು ಕೊಟ್ಟ ಮಾರ್ಗದರ್ಶಿ ಸೂತ್ರಗಳನ್ನು ಯಕ್ಷಗಾನದ ಕಲಾವಿದರು ಮತ್ತು ಸಂಸ್ಥೆಗಳು ಗಂಭೀರವಾಗಿ ಪರಿಗಣಿಸಿ, ಅಳವಡಿಸಿಕೊಂಡಿರುವುದು ಆನ್ವಯಿಕ ಸಂಶೋಧನೆಯ ದೃಷ್ಟಿಯಿಂದ ಮಹತ್ವದ ಸಂಗತಿ. ಡಾ. ಪ್ರಭಾಕರ ಜೋಶಿ ಅವರಂತೆ ಕಲಾವಿದ, ಸಂಶೋಧಕ, ವಿಮರ್ಶಕ ಮತ್ತು ಸಂಘಟಕ ಆಗಿ ನಾಲ್ಕು ದಶಕಗಳಿಗಿಂತ ಹೆಚ್ಚು ಕಾಲ ಸಕ್ರಿಯವಾಗಿ ತೊಡಗಿಸಿಕೊಂಡ ಇನ್ನೊಬ್ಬ ಹಿರಿಯ ವಿದ್ವಾಂಸರು ಕರ್ನಾಟಕದಲ್ಲಿ ಇಂದು ನಮ್ಮ ನಡುವೆ ಇಲ್ಲ.

ಡಾ. ಜೋಶಿಯವರು ತತ್ತ್ವಶಾಸ್ತ್ರಗಳ ವಿಮರ್ಶಾತ್ಮಕ ಅಧ್ಯಯನಗಳ ಮೂಲಕ ಕನ್ನಡದ ಒಬ್ಬ ವೈಚಾರಿಕ ವಿದ್ವಾಂಸರಾಗಿಯೂ ಮುಖ್ಯರಾಗಿದ್ದಾರೆ. ಸಾಹಿತ್ಯ, ಕಲೆ, ಜಾನಪದ, ರಂಗಭೂಮಿ, ಮೀಮಾಂಸೆಯ ಕ್ಷೇತ್ರಗಳನ್ನು ಅಂತರ್ ಶಿಸ್ತೀಯ ನೆಲೆಯಿಂದ ಅಧ್ಯಯನ ಮಾಡಿದ ಮತ್ತು ಇಂದಿಗೂ ಈ ಕ್ಷೇತ್ರಗಳ ಮಹತ್ವದ ಸಂಪನ್ಮೂಲ ವ್ಯಕ್ತಿಯಾಗಿ ಇರುವ ಡಾ. ಪ್ರಭಾಕರ ಜೋಶಿ ಅವರು ಕರ್ನಾಟಕದ ಬಹುಶ್ರುತ ವಿದ್ವಾಂಸರು.

ಪ್ರೊ. ಬಿ.ಎ. ವಿವೇಕ ರೈ

ಆಕೃತಿಆಶಯ ಪಬ್ಲಿಕೇಷನ್ಸ್, ಮಂಗಳೂರು

ಬೆಲೆ ರೂ. 180